

# ಶ್ರೀ ವೆಂಕಟೇಶ್ವರ ಪ್ರಾಣದಾನ ಟ್ರಸ್ಟ್




# ಜೀವನದ ಸುಸ್ಥಿರ ದೇಣಿಗೆ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯು ದಯಾಸಾಗರನಾಗಿದ್ದಾನೆ. ಕಷ್ಟದಲ್ಲಿದ್ದವರಿಗೆ, ದುಃಖದಲ್ಲಿರುವವರಿಗೆ ಆತ ಪರಿಹಾರದ ಆಶ್ರಯಸ್ಥಾನ. ನೋವು ನಷ್ಟಗಳಲ್ಲಿ ತಂಪನ್ನೆರೆಯುವ ದಿವ್ಯವಾದ ಅನುಪಮವಾದ, ಕರುಣೆ ಆತನದು.

ಶ್ರೀನಿವಾಸನ ದಿವ್ಯ ಕರುಣೆಯಿಂದ ಪ್ರೇರಿತವಾಗಿ ತಿರುಮಲ ತಿರುಪತಿ ದೇವಸ್ಥಾನಗಳು ದೀನರ, ಅಗತ್ಯವಿದ್ದವರ ನೋವು ದುಃಖಗಳನ್ನು ಪರಿಹರಿಸಲು ಹಲವಾರು ಆಸ್ಪತ್ರೆಗಳನ್ನು, ಧಾರ್ಮಿಕ ಸಂಸ್ಥೆಗಳನ್ನು ಏರ್ಪಡಿಸಿದೆ. ತಿ. ತಿ. ದೇವಸ್ಥಾನಗಳ ಪಾಲಿಗೆ ದೀನರ ದುಃಖ ದುಮ್ಮಾನಗಳ ಪರಿಹಾರವೇ ದಿವ್ಯವಾದ ಗಮ್ಯ; ಜಾತಿ, ಮತ, ಪಂಥಗಳಿಗೆ ಅತೀತವಾದ ಜೀವಂತ ಪರಂಪರೆಯಾಗಿದೆ. ತೀವ್ರತರವಾದ ಅನಾರೋಗ್ಯದಿಂದ ನರಳುವಂತಹ ದೀನ ದುಃಖಿಗಳಿಗೆ ತಕ್ಕ ಪರಿಹಾರ ನೀಡುವ ಚಿಕಿತ್ಸಾವಿಧಾನದ ಯೋಜನೆಯನ್ನು ತಿ. ತಿ. ದೇವಸ್ಥಾನಗಳು ಈಗ ಕೈಗೆತ್ತಿಕೊಂಡಿದೆ.

**ಧ್ಯೇಯೋದ್ದೇಶಗಳು :** ಭಾರತದ ಆಂಧ್ರಪ್ರದೇಶದಲ್ಲಿನ ತೀರ್ಥಕ್ಷೇತ್ರವಾದ ತಿರುಪತಿಯಲ್ಲಿ ನೊಂದಾಯಿತಗೊಂಡಿರುವ ತಿ. ತಿ. ದೇವಸ್ಥಾನಗಳ ಆಶ್ರಯದ ಒಂದು ಧಾರ್ಮಿಕ ಸಂಸ್ಥೆ ''ಶ್ರೀ ವೆಂಕಟೇಶ್ವರ ಪ್ರಾಣದಾನ ಟ್ರಸ್ಟ್'' ಆಗಿದ್ದು ಬಡ ರೋಗಿಗಳಿಗೆ ನೆರವು ನೀಡುವ ಲಾಭರಹಿತ ಧಾರ್ಮಿಕ ಸಂಘಟನೆಯಾಗಿದೆ.

ಈ ಯೋಜನೆಯನ್ವಯ ಪ್ರಾಣಾಪಾಯವನ್ನುಂಟುಮಾಡುವ - ಹೃದಯ, ಮೂತ್ರಪಿಂಡ, ಮೆದುಳು ರೋಗಗಳೇ ಅಲ್ಲದೆ ಕ್ಯಾನ್ಸರ್ ಮೊದಲಾದ ತೀವ್ರತರ ಖಾಯಿಲೆಗಳಿಗೆ ಹೆಚ್ಚಿನ ಹಣ ಬಯಸುವ ಚಿಕಿತ್ಸಾ ವಿಧಾನಗಳನ್ನು ಭರಿಸಲು ಶಕ್ತಿಯಿಲ್ಲದ ಬಡವರಿಗೆ ನೆರವಿನ ಕೈನೀಡಿ ಸಹಾಯ ಮಾಡಲಾಗುವುದು. ತಿ. ತಿ. ದೇವಸ್ಥಾನಗಳ ಎಲ್ಲ ಆಸ್ಪತ್ರೆಗಳಲ್ಲಿಯೂ - ಸ್ವಿಮ್ಸ್, ಬರ್ಡ್, ರೂಯಾ, ಆಸ್ಪತ್ರೆಗಳು ಹಾಗೂ ಪ್ರಸೂತಿ ಆಸ್ಪತ್ರೆಗಳಲ್ಲಿ - ಬಡವರಿಗೆ ಜಾತಿ ಮತ ಪಂಥಗಳ ಭೇದವಿಲ್ಲದೆ ನೆರವಿನ ಹಸ್ತ ಚಾಚಿ ಚಿಕಿತ್ಸೆ ನೀಡಲಾಗುತ್ತದೆ.

ಮೂತ್ರಕೋಶ ವೈಫಲ್ಯ, ಹೆಮೊಫೀಲಿಯ, ತಲಸ್ಸೆಮಿಯ, ಕ್ಯಾನ್ಸರ್ ಮೊದಲಾದ ದೀರ್ಘಕಾಲಿಕ ರೋಗಗಳ ಬಗ್ಗೆ ಸಂಶೋಧನೆ, ಪರಿಹಾರೋಪಾಯ ಪ್ರಯತ್ನಗಳಿಗೂ ಈ ಯೋಜನೆಯನ್ವಯ ಅವಕಾಶವಿದೆ. ಬಡರೋಗಿಗಳಿಗೆ ಉಚಿತವಾಗಿ ರಕ್ತ, ಕೃತಕ ಅಂಗಾಂಗಗಳು, ಫಿಜಿಯೋಥೆರಪಿ, ಮೊದಲಾದ ಪ್ರಾಥಮಿಕ ಆರೋಗ್ಯ ಪರಿಕರಗಳು, ಪರಿಪೂರಕಗಳು ದೊರೆಯುವಂತೆ ಮಾಡುವುದೇ ತಿ. ತಿ. ದೇವಸ್ಥಾನಗಳು ರೂಪಿಸಿರುವ ವಿಶೇಷವಾದ ''ಶ್ರೀ ವೆಂಕಟೇಶ್ವರ ಪ್ರಾಣದಾನ ಯೋಜನೆಯ'' ಗುರಿ.

**ತಿ. ತಿ. ದೇ. ಸಹಯೋಗ :** ಈ ದತ್ತಿನಿಧಿಯ ಸ್ವಯಂ ಪೂರ್ಣವಾಗುವಂತೆ ಮಾಡಲು ತಿ. ತಿ. ದೇವಸ್ಥಾನಗಳು ಯೋಜನೆಗೆ ಬರುವ ದಾನಗಳಿಗೆ ತಕ್ಕ ಮೂಲಬಂಡವಾಳವನ್ನು ಬಿಡುಗಡೆ ಮಾಡಲು ಯೋಜಿಸಿದೆ.

**ದಾನಿಗಳಿಗೆ ದೊರೆಯುವ ಸೌಲಭ್ಯಗಳು :** ಈ ಯೋಜನೆಗೆ ಐದು ಲಕ್ಷ ರೂಪಾಯಿ ಹಾಗೂ ಅಧಿಕ ಮೊತ್ತದ ಧನವನ್ನು ನೀಡುವ ದಾನಿಗಳಿಗೆ ಕೆಳಕಂಡ ರೀತಿಯ ಸೌಲಭ್ಯಗಳನ್ನು ಒದಗಿಸಲಾಗುವುದು.

1. ದಾನಿಯೂ ಸೇರಿದಂತೆ ಐವರಿಗೆ ವರ್ಷಕ್ಕೆ ಒಮ್ಮೆ ಮೂರು ದಿನಗಳು ವಿ.ಐ.ಪಿ. ದರ್ಶನವನ್ನು ವೈಕುಂಠದ ಸೆಲ್ಲಾರ್ ಮೂಲಕ ಅನುಮತಿಸಲಾಗುವುದು.
2. ದಾನಿಯ ಮೊದಲನೆಯ ದರ್ಶನ ಕಾಲದಲ್ಲಿ ಸ್ವಾಮಿ ಹಾಗೂ ಅಮ್ಮನವರ ಚಿನ್ನದ ಮುಲಾಮಿನ ರಜತ ಚಿತ್ರಗಳಿರುವ ಪ್ಲಾಕಿಕೆಯನ್ನು ನೀಡಲಾಗುವುದು.
3. ದಾನಿಗೆ ವರ್ಷಕ್ಕೆ ಒಮ್ಮೆ ಒಂದು ಉತ್ತರೀಯವನ್ನು ಬಹೂಕರಿಸಲಾಗುವುದು.
4. ತಿರುಮಲೆಯ ಸಾಮಾನ್ಯ ಅತಿಥಿಗೃಹಗಳಲ್ಲಿ ವರ್ಷಕ್ಕೆ ಒಮ್ಮೆ ಒಟ್ಟಿಗೆ ಮೂರುದಿನ ಉಚಿತವಾಗಿ (ದೊರಕುವಂತಿದ್ದ ಪಕ್ಷದಲ್ಲಿ ಶುಲ್ಕ ಸಹಿತವಾದ ವಿ.ಐ.ಪಿ. ವಸತಿ) ವಸತಿಯನ್ನು ಒದಗಿಸಲಾಗುವುದು.
5. ವೈಯಕ್ತಿಕ ದಾನಿಗಳ ಜೀವಮಾನ ಪರ್ಯಂತವೂ, ಸಂಸ್ಥೆ, ಕಂಪನಿ, ಅವಿಭಕ್ತ ದಾನಿಗಳಿಗೆ 20 ವರ್ಷವೂ ಈ ಸೌಲಭ್ಯ ಉಂಟು.

ಆದಾಯತೆರಿಗೆ ವಿನಾಯತಿ : 80 (ಜಿ) ಕಲಮಿನನ್ವಯ ದಾನಿಯು ಆದಾಯ ತೆರಿಗೆ ವಿನಾಯಿತಿ ಪಡೆಯಬಹುದು.

**ವಿನಂತಿ :** ಶ್ರೀ ವೆಂಕಟೇಶ್ವರ ಪ್ರಾಣದಾನ ಯೋಜನೆಗೆ ಉದಾರವಾಗಿ ವಂತಿಗೆಗಳನ್ನು ನೀಡಬೇಕೆಂದೂ ಆ ಮೂಲಕವಾಗಿ ಸಾವಿರಾರು ಹೃದಯ, ಮೂತ್ರಕೋಶ, ಮೆದುಳು ರೋಗಿಗಳಿಗೆ ನೆರವು ನೀಡಬೇಕೆಂದೂ ವಿನಂತಿಸಿಕೊಳ್ಳಲಾಗಿದೆ. ತಾವು ನೀಡುವ ಪ್ರತಿ ಕಾಣಿಕೆಯೂ ಪವಿತ್ರವಾಗಿ ಬಡವರಿಗೆ ಆಧಾರವಾಗಿ ಅವರು ಜೀವನವನ್ನು ಪರಿಪೂರ್ಣ ಆರೋಗ್ಯದಿಂದ ಕಳೆಯಲು ಅನುಕೂಲ ಮಾಡಿಕೊಡುತ್ತದೆ.

**ಮಾನವ ಸಮಾಜಕ್ಕೆ ಸೇವೆ ಸಲ್ಲಿಸುವುದರಿಂದ ದೇವರ ಸೇವೆಯನ್ನು ಸಲ್ಲಿಸಿರಿ**

ತಮ್ಮ ಎಲ್ಲ ದಾನಗಳೂ ಕಾರ್ಯನಿರ್ವಹಣಾಧಿಕಾರಿ ಶ್ರೀವೆಂಕಟೇಶ್ವರ ಪ್ರಾಣದಾನ ಟ್ರಸ್ಟ್ ತಿ.ತಿ.ದೇ. ತಿರುಪತಿ - ಇವರ ಹೆಸರಿನಲ್ಲಿ ಪಡೆದ ಡಿ.ಡಿ.ಯ ರೂಪದಲ್ಲಿದ್ದು, ಅವುಗಳನ್ನು ಕಳುಹಿಸಬೇಕಾದ ವಿಳಾಸ - **ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ಆಡಳಿತ ಭವನ. ಕೆ.ಟಿ. ರಸ್ತೆ, ತಿರುಪತಿ – 517 507.**

**ದಾನಿಗಳಾಗಿರಿ – ದುಃಖಿಗಳಿಗೆ ಜೀವದಾನ ಮಾಡಿರಿ.**







ದಾರಿಯ ತೋರೋ ಗೋಪಾಲ
ವಾರಿಜ ನಾಭನೆ ವೈಕುಂಠ ಲೋಲ ॥ ಪ ॥

ಸಿಕ್ಕಿದೆ ಭವದ ಕಾಡಿನೊಳಗೆ ಲೆಕ್ಕ ವಿಲ್ಲದ ಜಂತುಗಳಿಗೆ
ದಿಕ್ಕೊಬ್ಬರಿಲ್ಲವೊ ಎನಗೆ ಕಕ್ಕಸವಕಳೆ ನಿನ್ನಯ ಪಾದಗಳಿಗೆ ॥ 1 ॥

ಗಜೇಂದ್ರ, ರಕ್ಷಕನು ನೀನೆಂದು ಅಜರುದ್ರಾದಿಗಳೆಂದು
ನಿಜವಾಗಿ ಪೇಳಿದರೆಂದು ಸುಜನರೊಡೆಯನೆ ಕೇಳಿದೆ ನಾ ನಿಂದು ॥ 2 ॥

ವರದ ಶ್ರೀ ಹಯವದನನೆ ಬಾರೈ ಕರೆದೆನ್ನ ದಾರಿಯ ತೋರೈ
ಪರಮ ಭಕುತರಿಗಿನ್ನಾರೈ ಪರಮಪುರುಷ ಗತಿಯಾರೈ ॥ 3 ॥

-ಶ್ರೀ ವಾದಿರಾಜರು.





ಸಂದರ್ಶಿಸಿ. ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ

# ವಾರ್ಷಿಕ ಪವಿತ್ರೋತ್ಸವಗಳು

**17-8-2002 ರಿಂದ 20-8-2002 ವರೆಗೆ**



| | | |
|---|---|---|
| **17-8-2002** | ಶನಿವಾರ | ಅಂಕುರಾರ್ಪಣೆ |
| **18-8-2002** | ಭಾನುವಾರ | ಪವಿತ್ರ ಪ್ರತಿಷ್ಠೆ |
| **19-8-2002** | ಸೋಮವಾರ | ಪವಿತ್ರ ಸಮರ್ಪಣೆ |
| **20-8-2002** | ಮಂಗಳವಾರ | ಪೂರ್ಣಾಹುತಿ |

ಸೂಚನೆ : ಪವಿತ್ರೋತ್ಸವದಲ್ಲಿ ಆರ್ಜಿತ ಶುಲ್ಕವನ್ನು ಸಲ್ಲಿಸಿ ಭಕ್ತರು ಭಾಗವಹಿಸಬಹುದು. ನಿಮ್ಮ ಬಳಿಯ ತಿ.ತಿ.ದೇ. ವಿಚಾರಣಾ ಕೇಂದ್ರದಲ್ಲಿ ವಿವರಗಳಿಗಾಗಿ ವಿಚಾರಿಸಿರಿ.

ನೀವೂ ಬನ್ನಿ. ನಿಮ್ಮವರನ್ನೂ ಕರೆತನ್ನಿ.

# ಸಪ್ತಗಿರಿ

ಸಂಪುಟ - 33 ಜುಲೈ 2002 ಸಂಚಿಕೆ - 2

## ಜ್ಯೇಷ್ಠ - ಆಷಾಢ ಸಂಚಿಕೆ

### ವಿಷಯಸೂಚಿ



ಮುಖಚಿತ್ರ : ಶ್ರೀ ಮಲಿಯಪ್ಪಸ್ವಾಮಿ .

ಹಿಂಬದಿಯಲ್ಲಿ : ಶ್ರೀ ವಿಖನಸಾಚಾರ್ಯ.


ಗೌರವ ಸಂಪಾದಕರು :
ಡಾ|| ಪಿ. ಕೃಷ್ಣಯ್ಯ, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
ಡಾ|| ಎನ್.ಎಸ್. ರಾಮಮೂರ್ತಿ,

ಮುದ್ರಣ :
ಐ. ಪಾರ್ವತೀಶ್ವರ ರಾವ್,
ಬಿ.ಎ., ಎಲ್.ಪಿ.ಟಿ.,
ಮ್ಯಾನೇಜರ್,
ತಿ.ತಿ.ದೇ. ಮುದ್ರಣಾಲಯ, ತಿರುಪತಿ.

ಉಪಸಂಪಾದಕ :
ಬಿ. ಎನ್. ಶ್ರೀನಿವಾಸನ್, ಎಂ.ಎ.

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ-
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಬಿಡಿ ಪ್ರತಿ ರೂ. 5/-
ವಾರ್ಷಿಕ ಚಂದಾ ರೂ. 60/-
ಆಜೀವ ಚಂದಾ ರೂ. 500/-




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ । ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ ॥

# ನಿಮ್ಮೊಡನೆ ಎರಡು ಮಾತು......



ಸಕಲ ಚರಾಚರ ಸೃಷ್ಟಿಸ್ಥಿತಿ ಲಯ ಕಾರಕನಾದ ಶ್ರೀ ಮಹಾವಿಷ್ಣುವು ಮಾನವರನ್ನು ಉದ್ಧರಿಸಬಯಸಿ ವೈಕುಂಠವನ್ನು ಈ ಭೂಮಿಯ ಮೇಲೆ ಸ್ಥಿರಗೊಳಿಸಿದ. ಅಷ್ಟೇ ಅಲ್ಲ ತಾನೇ ಸ್ವಯಂ ಬಂದು ಇಲ್ಲಿಯೇ ನೆಲೆಸಿದ. ಅಂತಹ ಕಲಿಯುಗ ವೈಕುಂಠವೇ ತಿರುಮಲೆ. ಎಲ್ಲರಿಗೆ ಸದ್ಗತಿ ದೊರಕಿಸಲು ಆ ಮಹಾವಿಷ್ಣುವೇ ಶ್ರೀ ವೆಂಕಟೇಶ್ವರಸ್ವಾಮಿಯಾಗಿ ತಿರುಮಲೆಯಲ್ಲಿ ನೆಲೆಸಿದನು. ಎಂತಲೇ ಅನ್ನಮಾಚಾರ್ಯರು ಹೇಳಿದರು ''ವೇದಗಳೆ ಶಿಲೆಗಳಾಗಿ ನೆಲೆನಿಂತ ಬೆಟ್ಟವಿದು''.

ಇಂತಹ ಶ್ರೀನಿವಾಸನ ಆವಾಸವಾದ ತಿರುಮಲೆ ಅತ್ಯಂತ ಪವಿತ್ರವಾದದ್ದು. ದರ್ಶಿಸಿದ ಮಾತ್ರಕ್ಕೆ ಪಾಪಗಳೆಲ್ಲ ದಹಿಸಿ ಹೋಗುತ್ತದೆ. ಎಂತಲೇ ಭಗವದ್ರಾಮಾನುಜರು ತಿರುಮಲೆಯನ್ನು ಪಾದಗಳಿಂದ ಮುಟ್ಟಬಾರದೆಂದು ಮೊಣಕಾಲಿನಲ್ಲಿಯೇ ತೆವಳುತ್ತ ಹತ್ತಿದರಂತೆ.

ನಮ್ಮ ಭಾಗ್ಯದ ಭಾಗವಾಗಿ ನಮ್ಮ ಸಮೀಪದಲ್ಲಿ, ನಮ್ಮ ಮಧ್ಯೆ ನೆಲೆಯಾಗಿರುವ ತಿರುಮಲೆಯನ್ನು ಪವಿತ್ರವಾಗಿ ಪರಿಶುಭ್ರವಾಗಿ ಇಡಬೇಕು, ಇಟ್ಟುಕೊಳ್ಳಬೇಕು. ಎಲ್ಲಿ ಪರಿಶುಭ್ರತೆಯಿದೆಯೋ ಅಲ್ಲಿ ಪರಮಾತ್ಮನಿರುವನು ಎನ್ನುತ್ತದೆ ಪರಪರೆಯ ಪ್ರಜ್ಞೆ.

ನಿತ್ಯವೂ ಸಾವಿರಾರು ಮಂದಿ ಸ್ವಾಮಿಯನ್ನು ದರ್ಶಿಸಲು ತಿರುಮಲೆಗೆ ಬರುತ್ತಾರೆ. ಎಲ್ಲರಿಗೂ ವಸತಿ ದರ್ಶನಗಳನ್ನು ಕಲ್ಪಿಸಲು ದೇವಸ್ಥಾನದ ಆಡಳಿತವು ಶಕ್ತಿ ವಂಚನೆಯಿಲ್ಲದೆ ಕೃಷಿ ಮಾಡುತ್ತಿದೆ. ಆಧುನಿಕ ಸಾಂಕೇತಿಕ ತಂತ್ರಜ್ಞಾನದ ನೆರವಿನಿಂದ ಮೊದಲೇ ವಸತಿ ಸೇವೆಗಳನ್ನು ರಿಸರ್ವ್ ಮಾಡಿಸಿಕೊಳ್ಳುವ ಸೌಲಭ್ಯವನ್ನು ಪ್ರವೇಶಗೊಳಿಸಲಾಗಿದೆ. ಈ ಸೌಲಭ್ಯಗಳನ್ನು ಬಳಸಿಕೊಳ್ಳುವ ಭಕ್ತರಿಗೆ ತಿರುಮಲೆಯ ಪ್ರಯಾಣ, ಸೇವೆ, ದರ್ಶನ ಅತ್ಯಂತ ಸುಲಭವಾಗುತ್ತದೆ. ಸ್ವಾಮಿ ದರ್ಶನದ ಕಂಕಣಗಳನ್ನು ಧರಿಸುವುದರಿಂದ ಎಲ್ಲರಿಗೂ ಸ್ವಾಮಿದರ್ಶನದ ಸಮಯ ಮೊದಲಿಗೇ ತಿಳಿಯುತ್ತದೆ. ಇದರಿಂದಾಗಿ ಭಕ್ತರು ಮಿಕ್ಕ ಸಮಯವನ್ನು ಸದ್ವಿನಿಯೋಗ ಪಡಿಸಿಕೊಳ್ಳಬಹುದು. ತಿರುಪತಿಯ ಸಮೀಪದ ತಿರುಚಾನೂರು, ಶ್ರೀನಿವಾಸ ಮಂಗಾಪುರ - ಮೊದಲಾದ ಸ್ಥಳಗಳ ಆಲಯಗಳ ಸಂದರ್ಶನ ಮಾಡಿಬರಬಹುದು. ಅವುಗಳಿಗೂ ದೇವಸ್ಥಾನದ ಪ್ರತ್ಯೇಕ ಬಸ್‌ಗಳು ಇವೆ. ಆಯಾ ಆಲಯಗಳನ್ನು ದರ್ಶಿಸಿ ತಿರುಮಲೆಯನ್ನು ಸ್ವಾಮಿ ದರ್ಶನ ಸಮಯಕ್ಕೆ ಸ್ವಲ್ಪ ಮೊದಲು ಸೇರಿಕೊಂಡರೂ ಸಾಕು. ಸ್ವಾಮಿಯನ್ನು ಸಂದರ್ಶಿಸಿ ಹರಕೆಗಳನ್ನು ಹಾಯಾಗಿ ಸಲ್ಲಿಸಬಹುದು.

ತಿರುಮಲೆಯಲ್ಲಿರುವಷ್ಟು ಹೊತ್ತು ಭಕ್ತರು ಪ್ರಶಾಂತವಾಗಿಯೂ, ಪವಿತ್ರವಾಗಿಯೂ ಇರಲು ಪ್ರಯತ್ನಿಸಬೇಕು. ದೈನಂದಿನ ಯಾಂತ್ರಿಕ ಬದುಕಿನಿಂದ ಬಿಡುಗಡೆ ಬಯಸಿ ತಿರುಮಲೆಗೆ ಬರುವ ಭಕ್ತರು ಇಲ್ಲಿರುವಷ್ಟು ಹೊತ್ತೂ ಪ್ರಶಾಂತಿಯಿಂದಿರಲು ಪ್ರಯತ್ನಿಸಬೇಕು. ತಿರುಮಲೆಯಲ್ಲಿ ಮತ್ತು ಪದಾರ್ಥಗಳೂ, ಮಾದಕ ದ್ರವ್ಯಗಳೂ ಮಾಂಸ ಹೊಗೆಸೊಪ್ಪುಗಳೂ ನಿಷಿದ್ಧ. ನಿಷಿದ್ಧ ವಸ್ತುವೆಂದೇ ಅಲ್ಲ ಭಕ್ತರು ತಾವಾಗಿ ಸ್ವಚ್ಛಂದವಾಗಿ ಈ ವಸ್ತುಗಳನ್ನು ವಿರೋಧಿಸಬೇಕು. ಪವಿತ್ರವಿಲ್ಲದ ಪರಿಶುಭ್ರವಿಲ್ಲದ ಮನದಿಂದ ಪರಮಾತ್ಮನನ್ನು ಪ್ರಾರ್ಥಿಸಿದರೂ ಫಲವಿರದು.

ತಿರುಮಲೆ - ತಿರುಪತಿಗಳ ಪರಿಶುಭ್ರತೆಯೆಂಬುದು ಎಲ್ಲರ ಹೊಣೆಗಾರಿಕೆ. ದೇವಸ್ಥಾನಗಳೊಂದಿಗೆ ಸಹಕರಿಸಿ ಇದನ್ನು ಒಂದು ಯಜ್ಞದೋಪಾದಿಯಲ್ಲಿ ಸರ್ವರೂ ಆಚರಣೆಗೆ ತರಬೇಕು. ತಿರುಮಲೆಯ ಉದ್ಯಾನವನಗಳ ಎಲ್ಲ ಹೂವುಗಳೂ ಸ್ವಾಮಿಗೆ ಸೇರಿದವು. ಈ ಉದ್ಯಾನವನಗಳಲ್ಲಿ ಹೂವು ಕೀಳುವುದಾಗಲೀ, ಕಸ ಕಡ್ಡಿ ಎಸೆಯುವುದಾಗಲೀ ಮಾಡಬಾರದು. ಕಲಿಯುಗ ವೈಕುಂಠವೆಂದು ಕರೆದು ಕಲ್ಮಶವಿದ್ದರೆ ಹೇಗೆ? ಅದಕ್ಕೆಂದೇ ಪರಿಸರವನ್ನಷ್ಟೇ ಅಲ್ಲ ಮನವನ್ನು ಪರಿಶುಭ್ರವಾಗಿರಿಸಿಕೊಳ್ಳಬೇಕು.

ವೇದಗಳೇ ಶಿಲೆಗಳಾಗಿರುವ ವೆಂಕಟಾದ್ರಿಯಲ್ಲಿರುವಷ್ಟು ಹೊತ್ತೂ ಶ್ರೀನಿವಾಸ ನಾಮಗಾನದ ಧ್ಯಾನದ ಹೊರತು ಮತ್ತೊಂದು ಆಸಕ್ತಿ ಪ್ರವೃತ್ತಿ ಇರಬಾರದು. ಅಂತಹವರೇ ಸ್ವಾಮಿಯ ಕೃಪೆಗೆ ಪಾತ್ರರಾಗುತ್ತಾರೆ.

ತಿರುಮಲೆಯನ್ನು ಪರಿಶುಭ್ರವಾಗಿ ಇಟ್ಟುಕೊಳ್ಳಲು ಪ್ರತಿಯೊಬ್ಬರೂ ಪ್ರಯತ್ನಪೂರ್ವಕವಾಗಿ ಸಹಕರಿಸುವರೆಂದು ಭಾವಿಸುತ್ತ -

**ಡಾ|| ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.
ತಿ.ತಿ.ದೇ.

# ವೇದಗಳಲ್ಲಿ ಭಗವತ್ತತ್ವದರ್ಶನ

- ಸಂತ ಹರಿಹರಾನಂದ ಸರಸ್ವತೀ

ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನೂ ಸಕಲ ಜಗತ್ಪಾಲಕನೂ, ಸೃಷ್ಟಿ - ಸ್ಥಿತಿ - ಸಂಹಾರಕಾರಕನೂ, ದೇವಕೀ ವಸುದೇವ ಬಾಲಕನೂ, ಶ್ರೀಗೋಪಾಲ - ಬ್ರಹ್ಮ - ವಾಚಕ ಶ್ರೀಕೃಷ್ಣಚಂದ್ರ ಭಗವಾನನು ಪರಿಪೂರ್ಣ ಪುರುಷೋತ್ತಮನೆಂದು ಪರಮಜ್ಞಾನಿಗಳು ಹೇಳಿರುವರು. ಅವನು ಷೋಡಶ ಕಲಾಯುಕ್ತನು ಅಷ್ಟಸಿದ್ಧಿ, ಷಡೈಶ್ವರ್ಯ ಸಂಪನ್ನನು.

ವದಂತಿ ತತ್ತ್ವವಿದಸ್ತತ್ವಂ
ಯತ್ ಜ್ಞಾನ ಮದ್ವಯಮ್
ಬ್ರಹ್ಮೇತಿ ಪರಮಾತ್ಮೇತಿ
ಭಗವಾನಿತಿ ಶಬ್ದ್ಯತೇ
(ಶ್ರೀಮದ್ರಾಮಾಯಣ)

ತತ್ವಜ್ಞಾನಿಗಳಾದ ಮಹಾಪುರುಷರು, ಅವನನ್ನು ಎಂದರೆ - ಆ ಭಗವಂತನನ್ನು, ಪರಮತತ್ವವಾದ ವೇದಾಂತ ರೀತಿಯಿಂದ 'ಬ್ರಹ್ಮ' ಎಂದೂ ಸ್ಮೃತಿಗಳಲ್ಲಿ 'ಪರಮಾತ್ಮ' ಎಂದೂ, ಪುರಾಣಗಳಿಂದ ಭಗವಾನ್ ಎಂದೂ ಅಭಿಹಿತವಾಗಿರುವುದನ್ನು ತಿಳಿಸಿದ್ದಾರೆ. ಅವನ ನಿಃಶ್ವಾಸದಿಂದ ವೇದಗಳ ರಚನೆಯಾಗಿದೆ. ಇದು ಸಾಧಾರಣ ಪುರುಷದ್ವಾರಾ ಕಲ್ಪಿತವಾದುದಲ್ಲ. ಇದು ಅಪೌರುಷೇಯವು - ಇವುಗಳ ಮೂಲಕ ''ಪರಮತತ್ವದ ಜ್ಞಾನ''ವಾಗುತ್ತದೆ. ವೇದ ಜ್ಞಾನಾರ್ಥಕ - ''ವಿದ್'' - ಧಾತುವಿನಿಂದ ನಿಷ್ಪನ್ನವಾಗಿದೆ. ಎಲ್ಲ ವೇದಗಳ ತಾತ್ಪರ್ಯವೂ ಪರಬ್ರಹ್ಮವೇ! ಇದು ಶ್ರೀಮದ್ಭಗವದ್ಗೀತೆಯ ವಾಕ್ಯದಿಂದ ಸಂಪುಷ್ಟಿಗೊಂಡಿದೆ.

''ವೇದೈಶ್ಚ ಸರ್ವೈರಹಮೇವ ವೇದ್ಯಃ'' ವೇದವು ಭಗವಂತನ ಆಜ್ಞಾರೂಪವಾಗಿದೆ - ''ವೇದಾ ಬ್ರಹ್ಮಾತ್ಮವಿಷಯಾಃ'' (ಇದು) ಭಾಗವತೀಯ ಕೃತಿಯಲ್ಲಿ - ''ಜೀವ - ಬ್ರಹ್ಮ''ದ ಸ್ವರೂಪವು ನಿರೂಪಿತವಾಗಿದೆ. ವೇದವು ಆದಿ - ಮಧ್ಯ - ಅಂತ್ಯದಲ್ಲಿ ಕೂಡ - ಶ್ರೀಹರಿಯ ಯಶೋಗಾಥೆಯನ್ನೇ ಪ್ರಸ್ತುತ ಪಡಿಸುತ್ತದೆ.

ನಾನಾ ನಾಮರೂಪಗಳಲ್ಲಿ ಅವನ ಮಹತ್ವವನ್ನು ಸ್ತುತಿಸಿದೆ ವೇದ.

ಇಂದ್ರಂ ಮಿತ್ರಂ ವರುಣಂ
ಅಗ್ನಿಮಾಹುರಥೋ
ದಿವ್ಯಃ ಸ ಸುಪರ್ಣೌಗರುತ್ಮಾನ್
ಏಕಂ ಸತ್ ವಿಪ್ರಾ ಬಹುಧಾವದಂತ್ಯಗ್ನಿಂ
ಯಮಂ ಮಾತರಿಶ್ವಾ ನಮಾಹುಃ

ಭಗವಾನ್ ಶ್ರೀಕೃಷ್ಣನು ಸರ್ವದೇವ ಮಯನಾಗಿದ್ದಾನೆ. ಅವನ ಅಂಗ - ಪ್ರತ್ಯಂಗಗಳಲ್ಲಿಯೂ ಎಲ್ಲ ದೇವತೆಗಳೂ ವಾಸಿಸುತ್ತಿದ್ದಾರೆ. ಅವನು ಆ ಎಲ್ಲರ ಅಂತರ್ಯಾಮಿಯೂ ಹೌದು. ಅವನನ್ನುಳಿದು ಚರಾಚರ ಜಗತ್ತು ಇರಲು ಸಾಧ್ಯವೇ ಇಲ್ಲ. ಹೀಗೆ ಸರ್ವವ್ಯಾಪ್ತನಾದ ಭಗವಂತನು - ವಿಷ್ಣು - ಬ್ರಹ್ಮ - ನಾರಾಯಣ - ವಾಸುದೇವಾದಿ ನಾಮಗಳಿಂದ - ವ್ಯವಹರಿಸಲ್ಪಡುತ್ತಾನೆ. ಅವನು ಎಲ್ಲಕ್ಕೂ ಸಾಕ್ಷಿಮಾತ್ರನಾಗಿದ್ದಾನೆ.

ಅಂತಃ ಬಹಿಃ ಚ ತತ್ ಸರ್ವಂ
ವ್ಯಾಪ್ಯ ನಾರಾಯಣ ಸ್ಥಿತಃ

ಅವನು ಈ ಬ್ರಹ್ಮಾಂಡದ ಒಳಹೊರಗೆಲ್ಲ ವ್ಯಾಪಿಸಿದ್ದಾನೆ - ಅವನ ದರ್ಶನವಾಗಬೇಕಾದರೆ ಅವನಿಚ್ಛೆಯೂ ಬೇಕು. ಅವನ ದರ್ಶನಮಾಡುವ ಹಂಬಲವೂ ಆತ್ಮವಿಶ್ವಾಸವೂ ಸಾಧಕನಿಗೆ ಇರಬೇಕು. ದಿವ್ಯ ವಸ್ತುವನ್ನು ದಿವ್ಯದೃಷ್ಟಿಯಿಂದಲೇ ನೋಡಬೇಕು.

ಮಧ್ಯಮ ಪಾಂಡವನಾದ ಪಾರ್ಥನಿಗೆ, ಭಗವಂತನಾದ ವಾಸುದೇವ ಶ್ರೀಕೃಷ್ಣನು ''ದಿವ್ಯಂ ದದಾಮಿ ತೇ ಚಕ್ಷುಃ'' ಎಂದು, ದಿವ್ಯ ದೃಷ್ಟಿಯನ್ನು ಅನುಗ್ರಹಿಸಿ, ತನ್ನ ವಿಶಾಲವಿರಾಟ್ ರೂಪವನ್ನು ತೋರಿಸಿದ.

ಸಹಸ್ರ ಶೀರ್ಷಾಪುರುಷಃ
ಸಹಸ್ರಾಕ್ಷಃ ಸಹಸ್ರ ಪಾತ್
ಸಭೂಮಿಂ ವಿಶ್ವತೋವೃತ್ವಾ
ಅತ್ಯತಿಷ್ಠದ್ದಶಾಂಗುಲಮ್

ಎಂದು ಭಗವಂತನ ಸರ್ವವ್ಯಾಪಕತ್ವವನ್ನೂ, ಅವನ ದಿವ್ಯ (ಶರೀರವನ್ನೂ) ಮಂಗಳವಿಗ್ರಹವನ್ನೂ ಋಗ್ವೇದವು ಈ ರೀತಿ ವಿವರಿಸಿದೆ. ಅವನು - ಆ ಕೃಪಾಸಿಂಧುವು ಎಲ್ಲೆಲ್ಲಿಯೂ ಇದ್ದಾನೆ. ಎಲ್ಲರಲ್ಲಿಯೂ ಇದ್ದಾನೆ.

ಈಶ್ವರಃ ಸರ್ವಭೂತಾನಾಂ
ಹೃದ್ದೇಶೇಽರ್ಜುನ ತಿಷ್ಠತಿ

ಪಾರ್ಥನಿಗೆ ತಿಳಿಸಿದಂತೆ ಭಗವಂತನು ಎಲ್ಲಾ ಜೀವಿಗಳ ಹೃತ್ಕಮಲ ಮಧ್ಯದಲ್ಲಿ ವಿರಾಜಮಾನನಾಗಿದ್ದಾನೆ.

ಪರೀತ್ಯಭೂತಾನಿ ಪರೀತ್ಯಲೋಕಾನ್
ಪರೀತ್ಯ ಸರ್ವಾಃ
ಪ್ರದಿಶೋ ದಿಶಶ್ಚ
ಉಪಸ್ಥಾಯ ಪ್ರಥಮಜಾಮೃತಸ್ಯಾತ್
ಆತ್ಮನಾತ್ಮಾನ ಮಭಿ ಸಂನಿವೇಶ

ಈ ಪ್ರಕಾರ ಯಜುರ್ವೇದ ಮಂತ್ರದಿಂದ ಸಿದ್ಧವಾಗಿದೆ. ''ತಂ ಭೂತನಿಲಯಂ ದೇವಮ್ ಸುಪರ್ಣಮುಪಧಾವತ'' (ಉಪನಿಷತ್ತು) -

ಏಕಃ ಸುಪರ್ಣಃ ಸ ಸಮುದ್ರಮಾವಿವೇಶ
ಸ ಇದಂ ವಿಶ್ವಂ ಭುವನಂ ವಿ ಚಷ್ಟೇ

ಅರ್ಥಾತ್ - ಅದ್ವಿತೀಯ ಪರಮತತ್ವವು - ಸುಪರ್ಣ - ಸುಂದರ ಕಮಲದಂತಹ



## ಮಾರಾಟಕ್ಕೆ ಸಿದ್ಧವಾಗಿರುವ ಕನ್ನಡ ಗ್ರಂಥರಾಶಿ

| | | | | |
|---|---|---|---|---|
| 1. | ಭಕ್ತ ಪುರಂದರದಾಸರು | ನಾಟಕ | ರೂ. | 2-60 |
| 2. | ಕರ್ನಾಟಕದ ಹರಿದಾಸರು | | ರೂ. | 2-25 |
| 3. | ಸ್ತೋತ್ರ ಕುಸುಮಮಾಲ | | ರೂ. | 3-00 |
| 4. | ಶ್ರೀ ವೆಂಕಟೇಶ್ವರ ಸುಪ್ರಭಾತ | | ರೂ. | 5-00 |
| 5. | ಶ್ರೀ ತ್ಯಾಗರಾಜಸ್ವಾಮಿ ಕೃತಿಗಳ ಹಲವು ಮುಖಗಳು | | ರೂ. | 5-00 |
| 6. | ಗುರುಶ್ರೀಶ ವಿಠಲದಾಸರ ಕೃತಿಗಳು | | ರೂ. | 6-00 |
| 7. | ದಾಸತತ್ವ ಪ್ರಕಾಶಿಕೆ | | ರೂ. | 10-00 |
| 8. | ಉರಗಾದ್ರಿವಾಸ ವಿಠಲದಾಸರ ಕೃತಿಗಳು | | ರೂ. | 15-00 |
| 9. | ವಿಜಯದಾಸರ ಅಷ್ಟಕ | | ರೂ. | 3-00 |
| 10. | ಶ್ರೀದವಿಠಲದಾಸರ ಕೃತಿಗಳು | | ರೂ. | 9-00 |
| 11. | ಕನಕದಾಸರು - ಅವರ ಸಾಹಿತ್ಯ ಸಮೀಕ್ಷೆ | | ರೂ. | 16-00 |
| 12. | ಗೀತಾಸಾರೋದ್ಧಾರ | | ರೂ. | 14-00 |
| 13. | ಗೋವಿಂದದಾಸರ ಕೃತಿಗಳು | | ರೂ. | 8-00 |
| 14. | ದಾಸರು ಕಂಡ ವ್ಯಾಸರ ಹೃದಯ | | ರೂ. | 8-50 |
| 15. | ಶ್ರೀನಿವಾಸನ ಹಾಡುಗಳು | (ಗೋಪಾಲದಾಸರು) | ರೂ. | 12-50 |
| 16. | ಶ್ರೀನಿವಾಸನ ಹಾಡುಗಳು | (ವಿಜಯದಾಸರು) | ರೂ. | 18-50 |
| 17. | ಶ್ರೀನಿವಾಸನ ಹಾಡುಗಳು | (ಸಂ -1) | ರೂ. | 11-00 |
| 18. | ಶ್ರೀನಿವಾಸನ ಹಾಡುಗಳು | (ಸಂ -2) | ರೂ. | 11-00 |
| 19. | ಸೃಷ್ಟಿಪ್ರಕರಣ | | ರೂ. | 23-00 |
| 20. | ಶ್ಯಾಮಸುಂದರ ದಾಸರ ಕೃತಿಗಳು | | ರೂ. | 21-00 |
| 21. | ಗುರುಜಗನ್ನಾಥದಾಸರ ಕೃತಿಗಳು | | ರೂ. | 32-00 |
| 22. | ಗೋಪಾಲದಾಸರು | (ಮಕ್ಕಳ ಪುಸ್ತಕ) | ರೂ. | 4-00 |
| 23. | ವ್ಯಾಸರಾಯರು | (ಮಕ್ಕಳ ಪುಸ್ತಕ) | ರೂ. | 4-00 |
| 24. | ಶ್ರೀಪಾದರಾಜರು | (ಮಕ್ಕಳ ಪುಸ್ತಕ) | ರೂ. | 4-00 |
| 25. | ಪುರಂದರದಾಸರು | (ಮಕ್ಕಳ ಪುಸ್ತಕ) | ರೂ. | 5-00 |
| 26. | ಪ್ರಸನ್ನ ವೆಂಕಟದಾಸರು | (ಮಕ್ಕಳ ಪುಸ್ತಕ) | ರೂ. | 5-00 |
| 27. | ಮಹಿಪತಿದಾಸರು | (ಮಕ್ಕಳ ಪುಸ್ತಕ) | ರೂ. | 4-00 |

**ಅಂಚೆ ವೆಚ್ಚ ಪ್ರತ್ಯೇಕ**

ತಕ್ಕ ಹಣದ ಡಿ.ಡಿ. ಯನ್ನೂ, ಪುಸ್ತಕದ ಪಟ್ಟಿಯನ್ನು - ಮಾರಾಟ ವಿಭಾಗ, ತಿ.ತಿ.ದೇ. ಪ್ರಕಟನ ಶಾಖೆ, ತಿ.ತಿ.ದೇ. ತಿರುಪತಿ, ಆಂಧ್ರಪ್ರದೇಶ - ಇವರಿಗೆ ಕಳುಹಿಸಬೇಕು. ಎಂ.ಓ. ಸ್ವೀಕರಣೆ ಇಲ್ಲ. ವಿ.ಪಿ.ಪಿ. ವ್ಯವಸ್ಥೆ ಇಲ್ಲ.

ಸಮಾನವಾದ ಚರಣಾರವಿಂದವುಳ್ಳ, ಸಮುದ್ರಕ್ಕೆ (ಸದೃಶವಾದ) ಸಮಾನವಾದ ಹೃದಯ ಕಮಲದಲ್ಲಿ ಪ್ರತಿಷ್ಠಿತನಾಗಿ, ಈ ಸೃಷ್ಟಿಯ ಎಲ್ಲ ಪ್ರಾಣಿಗಳಲ್ಲಿಯೂ ಅಂತರ್ಗತನಾಗಿದ್ದಾನೆ. ಅಲ್ಲದೆ - ತನ್ನ ಚಿತ್ ಶಕ್ತಿಯಿಂದ ಎಲ್ಲರ ಜೀವನ ವ್ಯಾಪಾರಕ್ಕೂ ಚಾಲನೆಯನ್ನು ನೀಡುತ್ತಿರುವನು.

ರಸಿಕಶೇಖರ ಶ್ಯಾಮಸುಂದರನಾದ ಭಗವಂತನನ್ನು ಕುರಿತು - ರಾಸಪಂಚಾಧ್ಯಾಯದ ಗೋಪಿಕಾ ಗೀತೆಯಲ್ಲಿನ ಈ ವರ್ಣನೆ ಸುಂದರವಾಗಿದೆ.

ನಖಲು ಗೋಪಿಕಾ ನಂದನೋಭವಾನ್
ಅಖಿಲದೇಹಿನಾಮಂತರಾತ್ಮದೃಕ್
ವಿಖನಸಾರ್ಥಿತೋ ವಿಶ್ವಗುಪ್ತಯೇ
ಸಖ ಉದೇಯಿವಾನ್ ಸಾತ್ವತಾಂ ಕುಲೇ
-ಶ್ರೀಮದ್ಭಾಗವತ

ಅರ್ಥಾತ್ - ಹೇ ಸಖೇ! ನೀನು ಕೇವಲ ಯಶೋದಾನಂದನ ಮಾತ್ರವಲ್ಲ, ಪ್ರಸ್ತುತ ಎಲ್ಲ ದೇಹಧಾರೀಜೀವಿಗಳ ಅಂತರ್ಯಾಮಿ - ಬ್ರಹ್ಮದೇವರ ಪ್ರಾರ್ಥನೆಯ ಮೇರೆಗೆ - ವಿಶ್ವವನ್ನು ಪಾಲಿಸುವ ನಿಮಿತ್ತದಿಂದ ನೀನು ಯಾದವ ಕುಲದಲ್ಲಿ ಅವತರಿಸಿದೆ. ನೀನು ಅನೇಕ ಸ್ಪರ್ಧಾಳು ವಿರೋಧೀಶತ್ರುಗಳನ್ನು ನಿಗ್ರಹಿಸಿದೆ. ರಾಜ, ಗೋವರ್ಧನವನ್ನು ನಿನ್ನ ಎಡಗೈಯಿಂದ ಎತ್ತಿ ಹಿಡಿದು - ಇಂದ್ರನ ಪ್ರಳಯ ಕಾರೀ ಶಕ್ತಿಯನ್ನು ಸ್ತಂಭನ ಮಾಡಿ, ಸಂಪೂರ್ಣ ಗೋಪೀವ್ರಜವನ್ನು ರಕ್ಷಿಸಿದೆ. ನಿನ್ನ ಅಪರಿಮಿತ ಶಕ್ತಿಯ ಬಲದಿಂದ - ದೇವದಮನ, ನಾಗದಮನ, ಇಂದ್ರದಮನ, ಕಾಲೀಯ ಮರ್ದನ ಕಂಸನಿಕಂದನ ಮೊದಲಾದ ಕಾರ್ಯಗಳನ್ನು ಮಾಡಿ ವಿಜೃಂಭಿಸಿದೆ. ನಿನ್ನ ಕೃಪೆ ನಮ್ಮ ಮೇಲೆ ಇರಲಿ.

ವೇದವು ಇಂತಹ ಭಗವಂತನ ಲೀಲಾವಿಭೂತಿಯನ್ನು ಮುಕ್ತವಾಗಿ ಗಾನ ಮಾಡಿದೆ. ಇದನ್ನು ಅನುಭವಿಸುವ ಯೋಗವು ನಮಗೆ ಬರಬೇಕು.

★★★★★

# ಭಗವಾನ್ ಶ್ರೀವಿಷ್ಣು

- ಅನಂತ ಚಿಂತಾಮಣಿ ಜ್ಯೋತಿಷಿ.

ಹಿಂದೂ ಧರ್ಮದೊಳಗಿನ ಅನೇಕ ದೇವ ದೇವತೆಗಳ ಪ್ರಭಾವಳಿಯಲ್ಲಿ ವೇದ ಕಾಲದಿಂದ ಭಗವಾನ್ ವಿಷ್ಣುವಿಗೆ ಪ್ರಮುಖ ಸ್ಥಾನ ದೊರಕಿದ್ದು, ತುಂಬಾ ಸಾತ್ವಿಕ ದೇವರೂ ಅಲಂಕಾರ ಪ್ರಿಯನೂ ಆಗಿ ಎಲ್ಲರ ಪ್ರೀತಿಗೆ ಪಾತ್ರನಾಗಿದ್ದಾನೆ. ರಾಜನಿಂದ ರಂಕನ ತನಕ ವಿಷ್ಣು ಪರಮಾತ್ಮನಿಗೆ ಭಕ್ತರಿರುವರು. ದೀನದುರ್ಬಲರಿಂದ ಬಲಾಢ್ಯ ಸಾಮ್ರಾಟರ ತನಕ ಭಕ್ತರು ವಿಷ್ಣುವನ್ನು ನಿರಲಸ ಭಕ್ತಿಯ ಮಾರ್ಗದಿಂದ ಪ್ರಸನ್ನಗೊಳಿಸಿಕೊಂಡ ಉಲ್ಲೇಖ ಪುರಾಣಗಳಿಂದ ತಿಳಿದುಬರುತ್ತದೆ. ರೂಢಿ ಪ್ರಧಾನ ಶೀವ್ರ ಕೋಪತೆಯ ತುಲನೆಯಲ್ಲಿ ವಿಷ್ಣುವು ಅತಿಶಯ ಸೌಮ್ಯನಾಗಿ ಭಕ್ತರ ಅಪರಾಧಗಳನ್ನು ಹೊಟ್ಟೆಯಲ್ಲಿ ಹಾಕಿಕೊಂಡು ಅನುಗ್ರಹಿಸುತ್ತಾನೆ.

ತೀರ ಸರಳ ರೀತಿಯಿಂದ ಎಲೆ ಹೂವುಗಳ ಪಾದ್ಯ ಪೂಜೆಯಿಂದ ರಾಜಭೋಗ ಪೂಜೆ ತನಕ ಯಾವುದೇ ಪದ್ಧತಿಯಿಂದ ಭಕ್ತರು ತಮಗೆ ಅನುಕೂಲ ರೀತಿಯಿಂದ ಪೂಜೆಯನ್ನು ಮಾಡಬಹುದು. ಬ್ರಹ್ಮನು ಸೃಷ್ಟಿಕರ್ತನಾದರೆ ಶಿವ ಸಂಹಾರ ಕರ್ತನು. ವಿಷ್ಣು ಪಾಲನ ಕರ್ತನಾಗಿದ್ದು, ಸೃಷ್ಟಿಯೊಳಗಿನ ದೈನಂದಿನ ಪ್ರಾಣಿ ಪಶುಪಕ್ಷಿ ಮಾನವ ಜಲಚರ ನಿಶಾಚರಗಳ ಜೀವಸಕ್ರಮ ಸೌಮ್ಯ, ಆಹಾರ, ನಿದ್ರೆ, ಕುಟುಂಬ ಸುಖಿಗಳ ಹಿಂಸುಮವನ್ನು ವಿಷ್ಣುವು ಮಾಡುತ್ತಿರುವನು. ವಿಷ್ಣುವು ಕ್ಷೀರಸಾಗರ ತಳಕ್ಕೆ ಶೇಷ ಶಾಯಿಯಾದಾಗ ವಿಶ್ವದಲ್ಲಿ ಸಂಕಟವಾಗಿ ನೈಸರ್ಗಿಕ ಆಪತ್ತು ವಿತ್ತ ಹಾನಿ ಮತ್ತು ದುಷ್ಟಪ್ರವೃತ್ತಿಗಳ ನಿರ್ಮಾಣವಾಗುತ್ತದೆ. ಈ ಕಾಲದಲ್ಲಿ ಅಬಾಲ ವೃದ್ಧರು ಪೂಜಾವಿಧಿ, ಜಪ, ಪಾಠ ಉಪವಾಸ ಮೊದಲಾದವುಗಳನ್ನು ಮಾಡಿ ಸಂಕಟಗಳನ್ನು ನಿವಾರಿಸಲು ನೈತಿಕ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಾರೆ. ಮನುಷ್ಯನ ಮತ್ತು ದೇವನ ಶುಚಿತ್ವವು ದುಷ್ಟ ಪ್ರವೃತ್ತಿಯನ್ನು ದೂರಕ್ಕೆ ನಿಲ್ಲಿಸುತ್ತದೆ.

ವಿಷ್ಣುವಿನ ನಿದ್ರೆಯ ಕಾಲವಧಿ (ಶಯನೀ ಏಕಾದಶಿ) ಆಷಾಢ ಶುದ್ಧ ಏಕಾದಶಿಯಿಂದ ಮಳೆಗಾಲ ಮುಗಿಯುವ ತನಕ (ಪ್ರಬೋಧಿನಿ ಏಕಾದಶಿ) ಕಾರ್ತೀಕ ಶುದ್ಧ ಏಕಾದಶಿಯ ತನಕ ಇರುತ್ತದೆ. ವಿಷ್ಣುಪರಮಾತ್ಮನು ಪ್ರಬೋಧಿನಿ ಏಕಾದಶಿಯಂದು ನಿದ್ರೆಯಿಂದ ಜಾಗೃತ ನಾಗಿರುವನು. ಈ ಕಾಲದಲ್ಲಿ ಮನೆ ಮನೆಯಲ್ಲಿ



ವಿಷ್ಣುಪೂಜೆ, ಸತ್ಯನಾರಾಯಣ ಪೂಜೆ, ಬಾಲಕೃಷ್ಣನ ಪೂಜೆ ಮಾಡುವರು. ಬಾಲಕೃಷ್ಣನು ವಿಷ್ಣುವಿನ ಅವತಾರದ ಪೂರ್ಣಾಂಶವಾಗಿದೆ. ಹಾಗೆಯೇ ಸಂಹಾರಕರ್ತ ಶಿವನನ್ನು ಈ ಕಾಲದಲ್ಲಿ ಸಂತುಷ್ಟಗೊಳಿಸಲು ಶ್ರಾವಣ ಸೋಮವಾರ ಉಪೋಷಣೆ ಪೂಜೆಯನ್ನು ಮಾಡುವರು.

ವ್ರತ ಪೂಜೆಯಲ್ಲಿ ಕಲಶ ಸ್ಥಾಪನೆ ಮಾಡಬೇಕೆಂಬುದು ಹೇಳಿದೆ. ನೀರಿನ ಕಲಶವೆಂದರೆ ಸಾಗರ ನದಿಗಳ ಪ್ರತೀಕ. ಸಮೃದ್ಧಿಗಾಗಿ ಪರಿಸರವನ್ನು ಧಾನ್ಯ ಶೇಖರಣೆ ಮಾಡಿರುವುದು. ಸುಫಲತ್ವದ ಸಂಕೇತ. ಆಕಾಶನ್ನು ಸೃಷ್ಟಿಯ ಪ್ರತೀಕವಾಗಿರುವ ನವಗ್ರಹಗಳ ಸ್ಥಾಪನೆ. ಹೀಗೆ ಒಂದೇ ಪೂಜನದಲ್ಲಿ ಇಡೀ ವಿಶ್ವದ ಮತ್ತು ಜಗನ್ನಿಯಂತ್ರಣದ ಪೂಜೆಯು ಪುಣ್ಯವು ಸಿಗುತ್ತದೆ. ಬಾಲಕ ಧ್ರುವನಿಗೆ ವಿಷ್ಣು ಪ್ರಸನ್ನನಾಗಿ ಆತನಿಗೆ ಧ್ರುವ ತಾರೆಯ ಪಟ್ಟ ನೀಡಿರುತ್ತಾನೆ. ವಿಷ್ಣುವು ಶ್ರೀಕೃಷ್ಣನ ರೂಪದಲ್ಲಿ ಪಾಂಡು ಪುಂಡರೀಕನ ಆಜ್ಞೆಯಂತೆ ಇಟ್ಟಿಗೆಯ ಮೇಲೆ ನಿಂತು ಟೊಂಕದ ಮೇಲೆ ಕೈ ಇಟ್ಟುಕೊಂಡು ನಿಂತು ಅನುಗ್ರಹಿಸುತ್ತಿದ್ದಾನೆ. ಈ ವಿಷ್ಣುವು ಲಕ್ಷಗಟ್ಟಲೇ ದೀನ ದುರ್ಬಲರ ಕಷ್ಟಸಹಿಷ್ಣುಗಳ ಶ್ರಮ ಜೀವಿಗಳ ಆರಾಧ್ಯ ದೇವತೆ ಯಾಗಿರುವನು. ವಾರಕರಿ ಪಂಥದವರು ವಿಟ್ಠಲನಿಗಾಗಿ ಅನುದಿನವೂ ನೆನೆಯುತ್ತಾರೆ. ಅಲ್ಲದೇ ಸನ್ಯಾಸ ಧರ್ಮದಂತೆ ಪೂಜ್ಯ ಚಕ್ರಧರ ಸ್ವಾಮಿಗಳು ಕೂಡ ಶ್ರೀಕೃಷ್ಣನ ಪೂಜಾ ವಿಧಿಯನ್ನು ಮಾಡಿ ಅನುಗ್ರಹ ಪಡೆದುಕೊಂಡಿದ್ದಾನೆ.

ಬಾಲಕೃಷ್ಣನು ಮಕ್ಕಳಿಗೆಲ್ಲ ಪ್ರಿಯ. ಬಾಲಕೃಷ್ಣನ ಕುರಿತಾಗಿ ಒಂದು ಕವಿತೆಯು ಕೇಳಿಬರುತ್ತದೆ. ಒಂದೂರಿನಲ್ಲಿ ಬಡವಿ ಯೊಬ್ಬಳಿದ್ದಳು. ತನ್ನ ಚಿಕ್ಕ ಹುಡುಗನೊಡನೆ ಇರುತ್ತಿದ್ದಳು. ಆ ಹುಡುಗನಿಗೆ ಕಲಿಯುವ ಅದಮ್ಯ ಬಯಕೆ ಇದ್ದುದರಿಂದ ಕಾಡಿನ ದಾರಿಯಿಂದ ದೂರದ ಊರಿಗೆ ಹೋಗಬೇಕಾಗಿತ್ತು. ಹುಡುಗನು ಕಾಡಿನ ದಾರಿಯಲ್ಲಿ ಹೋಗಲು ಭಯವಾಗುತ್ತದೆ. ಎಂದಾಗ ನಿನಗೆ ಹೆದರಿಕೆಯಿಲ್ಲ ಕಾರಣ ನನ್ನ ದೊಡ್ಡಮಗ ಕಾಡಿನಲ್ಲಿ ಇದ್ದು ಅವನು ನಿನಾದು ನಿನಗೆ ಕಾಡಿನಿಂದ ಊರಿಗೆ ಮುಟ್ಟಿಸುವನು



# ವರ್ಷದಲ್ಲಿ ಆಚರಿಸುವ ವಿಷ್ಣುಪೂಜೆ

| | | |
|---|---|---|
| ಚೈತ್ರ ಶುದ್ಧ ದ್ವಿತೀಯ | - | ಮತ್ಸ್ಯ ಜಯಂತಿ. |
| ಚೈತ್ರ ಶುದ್ಧ ಚತುರ್ಥಿ | - | ಲಕ್ಷ್ಮಿ ಪೂಜೆ. |
| ಚೈತ್ರ ಶುದ್ಧ ನವಮೀ | - | ಶ್ರೀರಾಮ ನವಮಿ. |
| ಚೈತ್ರ ಶುದ್ಧ ದ್ವಾದಶಿ | - | ವಿಷ್ಣುವಿಗೆ ಹವನ ಅರ್ಪಣೆ. |
| ಚೈತ್ರ ಶುದ್ಧ ಚತುರ್ದಶಿ | - | ನರಸಿಂಹ ಡೋಲೋತ್ಸವ. |
| ವೈಶಾಖ ಶುದ್ಧ ತೃತೀಯ | - | ಅಕ್ಷಯ ತೃತೀಯ, ಪರಶುರಾಮ ಜಯಂತಿ, ಮತ್ತು ಆಕಳ ಪೂಜನ ವಿಷ್ಣುವಿಗೆ ಕೃಷ್ಣ ತುಲಸಿಯಿಂದ ತ್ರಿಕಾಲ ಪೂಜನ ಸತತಧಾರಾ. |
| ವೈಶಾಖ ಶುದ್ಧ ಏಕಾದಶಿ | - | ಮೋಹಿನೀ ಏಕಾದಶಿ, ವಿಷ್ಣು ಪೂಜೆ ಮಾಡಿ ಭಜನ ಕೀರ್ತನೆ, ಜಾಗರಣೆ, ಉಪೋಷಣೆ, ಮಾಡಿದ್ದರಿಂದ ವಿಷ್ಣುಲೋಕ ಪ್ರಾಪ್ತಿ. |
| ವೈಶಾಖ ಶುದ್ಧ ದ್ವಾದಶಿ | - | ಮಧುಸೂದನ ಪೂಜೆ. |
| ವೈಶಾಖ ಶುದ್ಧ ತ್ರಯೋದಶಿ | - | ನೃಸಿಂಹ ಜನ್ಮೋತ್ಸವ. |
| ಆಷಾಢ ಶುದ್ಧ ದ್ವಿತೀಯ | - | ಜಗನ್ನಾಥ ರಥ ಯಾತ್ರೆ, ಜಗನ್ನಾಥ ಪುರೀ. |
| ಆಷಾಢ ಶುದ್ಧ ಏಕಾದಶಿ | - | ಶಯನಿ ಏಕಾದಶಿ, ವಿಷ್ಣು ಪೂಜನ, ಪಂಢರಪುರ ಯಾತ್ರೆ, ಉಪೋಷಣೆ. |
| ಆಷಾಢ ಶುದ್ಧ ದ್ವಾದಶಿ | - | ಪಾರಣೆ, ಭಜನೆ, ಗಾಯನ, ರಾತ್ರೆ - ಸುವಾಸನಾ ಯುಕ್ತ ಹೂಗಳಿಂದ ವಿಷ್ಣು ಪೂಜನ, ವಾಮನ ಪೂಜನ. |
| ಶ್ರಾವಣ ಶುದ್ಧ ತ್ರಯೋದಶಿ | - | ವರದಲಕ್ಷ್ಮಿ ವ್ರತ ಕೊನೆಯ ಶುಕ್ರವಾರದಂದು ಕಲಶದ ಮೇಲೆ ವರದ ಲಕ್ಷ್ಮಿಯ ಸ್ಥಾಪನೆ 21 ಅತಿರಸ ನೈವೇದ್ಯ. |
| ಶ್ರಾವಣ ಪೂರ್ಣಿಮೆ | - | ವಿಷ್ಣುವಿಗೆ ಸೂತ್ರ ಅರ್ಪಣೆ. |
| ಶ್ರಾವಣ ಕೃಷ್ಣ ಅಷ್ಟಮಿ . | - | ಗೋಕುಲ ಅಷ್ಟಮಿ, ರಾತ್ರೆ ಜನ್ಮೋತ್ಸವ, ಪಾರ್ಥಿವ ಮೂರ್ತಿ ಪೂಜನ - ಉಪವಾಸ. |
| ಶ್ರಾವಣ ಕೃಷ್ಣ ನವಮಿ | - | ಪಾರಣೆ, ಗೋಪಾಲ ಕಾಲಾ, ವಿಷ್ಣು ಪೂಜನದಿಂದ ಸಂತತಿ ಸಂಪತ್ತಿ ಮತ್ತು ವೈಕುಂಠ ಲೋಕ ಪ್ರಾಪ್ತಿ. |
| ಭಾದ್ರಪದ ಶುದ್ಧ ಏಕಾದಶಿ | - | ಪರಿವರ್ತಿನಿ ಏಕಾದಶಿ, ಉಪವಾಸ, ವಿಷ್ಣು ಪೂಜನ |
| ಭಾದ್ರಪದ ಶುದ್ಧ ದ್ವಾದಶಿ | - | ಪರಿವರ್ತಿನಿನೋತ್ಸವ, ವಾಮನ ಜಯಂತಿ ಪೂಜೆ. |
| ಆಶ್ವೀನ ಶುದ್ಧ ದಶಮಿ | - | ಸಂಜೆ ವಿಷ್ಣು ಪೂಜೆ, ದಸರೆ ವಿಷ್ಣು ಪೂಜೆ. |
| ಆಶ್ವೀನ ಶುದ್ಧ ಏಕಾದಶಿ | - | ಪಾಶಾಂಕುಶ ಏಕಾದಶಿ, ಬಾಲಕೃಷ್ಣ ಪೂಜನ, ಉಪವಾಸ ಭಜನ ಕೀರ್ತನ. |

(9 ನೇ ಪುಟನೋಡಿ)

ಎಂದಳು. ದಿನಾಲು ಅವಳು ಬಾಲಕೃಷ್ಣನ ಪೂಜೆ ಮಾಡಿದ್ದಳು. ಈ ಬಾಲಕೃಷ್ಣನನ್ನು ತನ್ನ ಹಿರಿಯ ಮಗನೆಂದು ಭಾವಿಸಿರುವಳು. ಅವಳು ಮಗನಿಗೆ ನಿನಗೆ ಹೆದರಿಕೆಯಾದಾಗ ಬಾಲಕೃಷ್ಣನನ್ನು ಕರೆ ಎಂದಳು. ಅದರಂತೆ ಬಾಲಕೃಷ್ಣನನ್ನು ಕರೆದು ತನ್ನ ಹೆದರಿಕೆಯನ್ನು ದೂರ ಮಾಡಿಕೊಳ್ಳುತ್ತಿದ್ದನು. ಇದನ್ನು ಕಂಡ ಆ ಬಾಲಕನ ತಾಯಿಯ ಅವಾಕ್ಕಾದಳು. ಮನದಲ್ಲಿಯೇ ಕೃಷ್ಣನನ್ನು ಮನಸಾ ವಂದಿಸಿದಳು. ಕೃಷ್ಣ ಭಕ್ತಿಯನ್ನು ಕಂಡ ಅವಳ ಹೃದಯ ತುಂಬಿತು.

ಮಗಳ ಲಗ್ನ ಮಾಡಿದ ನಂತರ ಅತ್ತೆಯ ಮನೆಗೆ ಹೋಗುವಾಗ ಬೆಳ್ಳಿಯ ಬಟ್ಟಲಲ್ಲಿ ಬಾಲಕೃಷ್ಣನ ಮೂರ್ತಿ ಕೊಡುವ ಪದ್ಧತಿ ಇದೆ. ಈ ಬಾಲಕೃಷ್ಣನು ಪತಿಗೃಹದ ದೇವರ ಮಂಟಪದಲ್ಲಿ ವಿರಾಜಮಾನನಾಗಿ ಆತನು ಮಕ್ಕಳ ಸ್ವರೂಪದಲ್ಲಿ ಫಲರೂಪನಾಗಿ ಮನೆಯನ್ನು ಸಂತಾನ ಸಫಲವನ್ನಾಗಿರಿಸುವನು. ಕಾರ್ತೀಕ ತಿಂಗಳು ದ್ವಾದಶೀಯಂದು ಈ ಬಾಲಕೃಷ್ಣನ ಪ್ರತಿಮೆಯನ್ನು ತುಲಸಿ ವಿವಾಹದ ವೇಳೆಯಲ್ಲಿ ಪೂಜಿಸಲಾಗುವುದು. ಆಚಾರ್ಯರಾದ ಪೂಜ್ಯ ಶಂಕರ ಭಗವತ್ಪಾದಾಚಾರ್ಯರು ಸಾಲಗ್ರಾಮ ರೂಪದಲ್ಲಿ ಸ್ಥಾಪನೆ ಮಾಡಿದರು.

ಭಗವಾನ್ ವಿಷ್ಣುವು ರಾಜ ಮಹಾರಾಜರ ಆರಾಧ್ಯ ದೇವತೆಯಾಗಿರುವನು. ಹಿಂದೂ ಧರ್ಮದಲ್ಲಿ ರಾಜನನ್ನು ವಿಷ್ಣುವಿನ ಅಂಶವೆಂದು ಭಾವಿಸುತ್ತಾರೆ. ಛತ್ರಪತಿ ಶಿವಾಜಿ ಮಹಾರಾಜನು ಸಿಸೋದಿಯಾ ವಂಶವಾಗಿದ್ದು ಇದು ರಾಜಪೂತರೊಳಗಿನದು ಎಂದಿದೆ. ಸೂರ್ಯವಂಶ ಅಯೋಧ್ಯೆಯ ಅರಸು ರಾಮಚಂದ್ರ ವಿಷ್ಣುವಿನ ಅವತಾರವಂಶವೆಂದು ಭಾವಿಸುತ್ತಾರೆ. ವಿಜಯನಗರದ ಹಂಪಿ, ಹಿಂದೂ ಸಾಮ್ರಾಜ್ಯ ವೈಷ್ಣವ ಧರ್ಮಕ್ಕೆ ಮಹತ್ತೆಯನ್ನು ತಂದು ಕೊಟ್ಟಿದೆ. ಅವರಲ್ಲಿಯ ರಾಜರಾದ ಕೃಷ್ಣದೇವರಾಯ ವಿಷ್ಣು ಪೂಜಕರಾಗಿದ್ದರು. ಅವರು ವಿಜಯನಗರದ ಸಾಮ್ರಾಜ್ಯದಲ್ಲಿ ವಿಷ್ಣುವಿನ, ನರಸಿಂಹನ

ರಾಮಕೃಷ್ಣರ ಸುಂದರ ಶಿಲ್ಪಕಲೆಯಿಂದಾದ ದೇಗುಲಗಳನ್ನು ಕಟ್ಟಿದರು.

ಉತ್ತರ ಭಾರತದ ಕುಲುಮನಾಲಿ, ಹೃಷೀಕೇಶ, ಬದರೀನಾಥ, ಮಥುರಾ ಹರಿದ್ವಾರ, ದ್ವಾರಕಾ ವೃಂದಾವನ, ಬೇಟ ದ್ವಾರಕಾ, ಜಗನ್ನಾಥಪುರೀ, ಅಯೋಧ್ಯಾ, ದಕ್ಷಿಣ ಭಾರತದ ಕಾಂಚಿ, ಪುರಿ, ತಿರುಪತಿ ಬಾಲಾಜಿ, ಉಡುಪಿ, ಹಂಪಿ, ಶ್ರೀರಂಗಪಟ್ಟಣ, ಪಂಡರಪುರ - ಇವು ವೈಷ್ಣವರ ಪವಿತ್ರ ತೀರ್ಥಸ್ಥಳಗಳಾಗಿದ್ದು, ತಿರುಪತಿ ಬಾಲಾಜಿ ವೇಂಕಟೇಶನ ಸ್ಥಾನವು ಅತ್ಯಂತ ಪವಿತ್ರ ಮತ್ತು ಶ್ರೀಮಂತ ಎನಿಸಿದೆ. ಆಂಧ್ರಪ್ರದೇಶದ ತಿರುಪತಿ ಬಾಲಾಜಿ ವೆಂಕಟೇಶನು ಭಗವಾನ್ ವಿಷ್ಣುವಿನ ಸ್ವರೂಪನು. ತಿರುಪತಿಯ ಚಿತ್ತೂರು ಜಿಲ್ಲೆಯ ಚಂದ್ರಗಿರಿ ತಾಲೂಕಿನ ಶೇಷಾಚಲ ಪರ್ವತದ ಮೇಲಿದೆ. ಮಂದಿರದ ಗರ್ಭಗುಡಿ ಮೇಲಿನ ವಿಮಾನ ಮತ್ತು ಕಳಸ ಇವು ಪೂರ್ಣವಾಗಿ ಬಂಗಾರದಿಂದ ಹೊದಿಸಲ್ಪಟ್ಟಿದೆ. ಮಹಾದ್ವಾರದ ಮೇಲೆ ಗೋಪುರ ಎತ್ತರವಾಗಿದೆ. ವಾಸ್ತುಶಿಲ್ಪ ಶಾಸ್ತ್ರದಲ್ಲಿ ಈ ದೇಗುಲವು ಉತ್ತಮ ಮಾದರಿ ಎನಿಸಿದೆ. ವೆಂಕಟೇಶನು ಮೂರ್ತಿಯು ಬೆಳ್ಳಿ ಬಂಗಾರ ವಜ್ರಗಳಿಂದ ಅಲಂಕೃತ ಗೊಂಡಿದೆ. ಕೃಷ್ಣದೇವರಾಯ ಮತ್ತು ಅಚ್ಯುತರಾಯ ಮುಂತಾದ ರಾಜ ಪುರುಷರು ದೇಗುಲವನ್ನು ಬೆಳೆಸಿದರು. ದೇಗುಲದಲ್ಲಿ ವೆಂಕಟೇಶನ ಮೂರ್ತಿಯು ಏಳು ಅಡಿಯಿದ್ದು ನಿಂತ ಸ್ಥಿತಿಯಲ್ಲಿದೆ. ಮತ್ತು ಕೈಯಲ್ಲಿ ಶಂಖ ಚಕ್ರ ಧರಿಸಿದ್ದಾನೆ. ಭಕ್ತ ಭಜಕರು ದ್ರವ್ಯಗಳನ್ನು ಅರ್ಪಿಸಿ ತಿರುಪತಿ ವೆಂಕಟೇಶನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ.

ವಿಷ್ಣುವು ಶೇಷಾಚಲದಿಂದ ಆಕಾಶ ಮಾರ್ಗದಿಂದ ಹೋಗುತ್ತಿರುವಾಗ ಈ ರಮಣೀಯ ನೆಲೆಯನ್ನು ಕಂಡು ಆತನಿಗೆ ಹಿಡಿಸಿತು. ಆವನು ಅಲ್ಲಿಯೇ ಧ್ಯಾನ ಧಾರಣೆ

(8 ನೇ ಪುಟದಿಂದ)

| | | |
|---|---|---|
| ಅಶ್ವೀನ ಪೂರ್ಣಿಮೆ | - | ದಾಮೋದರ ಭಜನ, ನವಾನ್ನ ಭಕ್ಷಣ, ಅಂಗಣದಲ್ಲಿ ಆಕಾಶ ದೀಪ ಬೆಳಗುವಿಕೆ. |
| ಅಶ್ವೀನ ಕೃಷ್ಣ ಏಕಾದಶಿ | - | ರಮಾ ಏಕಾದಶಿ, (ಲಕ್ಷ್ಮೀ ಪೂಜನ) ವಸುಬಾಸ ಕರು ಸಹಿತ ಆಕಳ ಪೂಜನ. |
| ಅಶ್ವೀನ ಕೃಷ್ಣ ಚತುರ್ದಶಿ | - | ನರಕ ಚತುರ್ದಶಿ, ಅಭ್ಯಂಗ ಸ್ನಾನ, ವಿಷ್ಣುಪೂಜನ, ನಾಲ್ಕು ಬತ್ತಿಗಳ ದೀಪ ಬೆಳಗಿಸುವಿಕೆ. |
| ಅಶ್ವೀನ ಅಮಾವಾಸ್ಯೆ | - | ಲಕ್ಷ್ಮೀ ಪೂಜನ. |
| ಕಾರ್ತೀಕ ಶುದ್ಧಪ್ರತಿಪದೆ | - | ಬಲಿಪ್ರತಿಪದೆ, ದೀಪೋತ್ಸವ ಅನ್ನ ಕೂಟ, ಗೋಕ್ರೀಡೆ, ಗೋವರ್ಧನ ಪೂಜೆ, ಬಾಲ ಕೃಷ್ಣನ ಪೂಜನದಿಂದ ಕುಲ ದೀಪಕ ಪುತ್ರ ಜನ್ಮ ಪ್ರಾಪ್ತಿ. |
| ಕಾರ್ತೀಕ ಶುದ್ಧ ಏಕಾದಶಿ | - | ಪ್ರಬೋಧಿನೀ ಏಕಾದಶಿ, ಉಪವಾಸ ಪಂಢರ ಪುರ ಯಾತ್ರೆ, ವಿಷ್ಣು ಪೂಜನ, ವಿಠಲ ಪೂಜೆ, ಅಭ್ಯಂಗ ಕೀರ್ತನೆ, ವಿಷ್ಣುಜಾಗೃತಿ. |
| ಕಾರ್ತೀಕ ಶುದ್ಧ ದ್ವಾದಶಿ | - | ತುಳಸಿ ವಿವಾಹ, ಬಾಲಕೃಷ್ಣತುಳಸಿ ಪೂಜನ ಮಂತ್ರಾಕ್ಷತೆ ನೈವಿದ್ಯ. |
| ಕಾರ್ತೀಕ ಶುದ್ಧ ಚತುರ್ದಶಿ | - | ವೈಕುಂಠ ಚತುರ್ದಶಿ,ರಾತ್ರೆವಿಷ್ಣುವಿಗೆಕೃಷ್ಣತುಳಸಿ ಅರ್ಪಣೆ. |
| ಮಾರ್ಗಶೀರ್ಷ ಶುದ್ಧ ಏಕಾದಶಿ | - | ಮೋಕ್ಷದಾ ಏಕಾದಶಿ, ಗೀತಾಜಯಂತಿ,ಶ್ರೀಕೃಷ್ಣಪೂಜೆ. ಪ್ರತಿ ಗುರುವಾರ ಕಲಶ ಮತ್ತು ಲಕ್ಷ್ಮೀ ಪೂಜನ. |
| ಪೌಷ ಪೂರ್ಣಿಮೆ | - | ವಿಷ್ಣು ಪೂಜನ ತೀರ್ಥ ಸ್ನಾನ, ದಾನ, ಧರ್ಮ. |
| ಪೌಷ ಕೃಷ್ಣ ಏಕಾದಶಿ | - | ಷಟ್ ತಿಲಾ ಏಕಾದಶಿ, ಉಪವಾಸ, ಜಪ, ಶ್ರೀಕೃಷ್ಣಮಂತ್ರ ಜಪ 8-28-108-1000 ಬಾರಿ. |
| ಮಾಘ ಪೂರ್ಣಿಮೆ | - | ಮಾಧವ ಪೂಜೆ, ಉಪವಾಸ ತಿಲ ಶರ್ಕರ ದಾನ, ಮಾಘಸ್ನಾನ, ದಾನ, ಧರ್ಮ, ಗೆಣಸು ವ್ಯರ್ಜ್ಯ. |
| ಪಾಲ್ಗುಣ ಶುದ್ಧ ದ್ವಾದಶಿ | - | ಮನೋರಥ ದ್ವಾದಶಿ, ವಿಷ್ಣುಪೂಜನ,ಭೋಜನ. |
| ಪಾಲ್ಗುಣ ಕೃಷ್ಣ ಪಂಚಮಿ | - | ರಂಗಪಂಚಮಿ, ವಿಷ್ಣು ಪೂಜನ ಮಾಡಿ ದೇವರಿಗೆ ರಂಗೇರಿಸುವಿಕೆ, ಮೃಷ್ಟಾನ್ನ ನೈವೇದ್ಯ. |

ಉಳಿದ ದೇವ ದೇವತೆಯರಿಗಿಂತ ಸ್ಥಳ ಮಹತ್ವದ ಹೊರತಾಗಿ ಮನೆ ಮನೆಯಲ್ಲಿ ನೈಮಿತ್ತಿಕವಾಗಿ ಪೂಜೆಕೊಳ್ಳುವ ದೇವತೆಯೆಂದರೆ ಶ್ರೀ ವಿಷ್ಣು ಪರಮಾತ್ಮನೊಬ್ಬನೇ ಎಂದು ಹೇಳುವುದರಲ್ಲಿ ಸಂಶಯವಿಲ್ಲ.



ಮಾಡಿದನು. ರಾಜ ಪುರುಷರು ಈ ಸುಂದರ ದೇಗುಲ ಮತ್ತು ಮೂರ್ತಿ ಅರ್ಚನೆ ಮಾಡಿದರು. ದೇವಸ್ಥಾನ ಟ್ರಸ್ಟ ಮೂಲಕ ಸೇವೆ, ಶಿಕ್ಷಣ ಸಂಸ್ಥೆಗಳು ಕಾರ್ಯನಿರ್ವಹಿಸುತ್ತವೆ.

ಕರ್ನಾಟಕದ ಉಡುಪಿಯಲ್ಲಿ ಮಧ್ವಾಚಾರ್ಯರು ಕೃಷ್ಣನನ್ನು ಸ್ಥಾಪಿಸಿದ ವಿವರ ಎಲ್ಲರಿಗೂ ಗೊತ್ತಿದೆ. ಮೈಸೂರಿನ ಹತ್ತಿರ ಶ್ರೀರಂಗಪಟ್ಟಣ ಕ್ಷೇತ್ರದಲ್ಲಿ ಶೇಷಶಾಯಿ ವಿಷ್ಣು ಮೂರ್ತಿಯಿರುತ್ತದೆ. ಜಗನ್ನಾಥ ಪುರಿಯಲ್ಲಿ ಶ್ರೀಕೃಷ್ಣ ಬಲರಾಮ ಸುಭದ್ರೆಯರ ಕಟ್ಟಿಗೆಯ ಮುಖವಾಡಗಳಿವೆ. ಅಲ್ಲಿಯ ರಾಜನು ದೇಗುಲದಲ್ಲಿ ವಂಶ ಪಾರಂಪರ್ಯದಿಂದ ರಥಯಾತ್ರೆಯಲ್ಲಿ ನವಿಲುಗರಿಯ ಕಸ ಬರಿಗೆಯಿಂದ ಸ್ವಚ್ಛಗೊಳಿಸುತ್ತಿದ್ದನು. ಹೃಷೀಕೇಶವು ಅಲಕನಂದದ ತಪ್ಪಲಿನಲ್ಲಿ ಹಿಮಾಲಯದೊಳಗಿನ ತೀರ್ಥಕ್ಷೇತ್ರವಾಗಿದೆ. ಬದರಿನಾಥದಲ್ಲಿ ವಿಷ್ಣುವಿನ ಮಂದಿರವಿದ್ದು, ಈ ಪವಿತ್ರ ತೀರ್ಥಕ್ಷೇತ್ರ ಹಿಮಾಲಯದಲ್ಲಿದೆ. ಗುಜರಾತದಲ್ಲಿ ದ್ವಾರಕಾ, ಬೇಟ ದ್ವಾರಕೆಯು ಶ್ರೀಕೃಷ್ಣನ ಸ್ಥಳವಾಗಿದೆ. ಉತ್ತರ ಪ್ರದೇಶದ ಮಥುರಾ ವೃಂದಾವನಗಳಲ್ಲಿ ಶ್ರೀಕೃಷ್ಣನ ಸುಂದರ ದೇಗುಲಗಳಿವೆ. ವೃಂದಾವನದಲ್ಲಿ ಕೃಷ್ಣನು ರಾಧೆಯೊಂದಿಗೆ ವಿಹರಿಸಿದ್ದು, ರಾತ್ರೆಯ ಪ್ರವೇಶ ಅಲ್ಲಿ ನಿಷಿದ್ಧವಾಗಿದೆ. ಒಂದೊಮ್ಮೆ ವೃಂದಾವನದ ತೋಟದಲ್ಲಿ ರಾತ್ರೆ ಪ್ರವೇಶಿಸಿದರೆ ಮೃತರಾಗುವದು ಎಂದು ಹೇಳುತ್ತಾರೆ. ದೆಹಲಿಯಲ್ಲಿ ಬಿರ್ಲಾರವರು ಅಮೃತ ಶಿಲೆಯಿಂದ ವಿಷ್ಣು ಮತ್ತು ಲಕ್ಷ್ಮಿಯ ಮಂದಿರವನ್ನು ಕಟ್ಟಿಸಿದ್ದು, ಸ್ಪಟಿಕದಂತಿರುವ ಮೂರ್ತಿಗಳು ನಯನ ಮನೋಹರ ಎನಿಸಿವೆ. ಅಯೋಧ್ಯೆಯಲ್ಲಿ ವಾದಗ್ರಸ್ತ ಜಾಗೆಯಲ್ಲಿ ಶ್ರೀ ರಾಮಚಂದ್ರ ಅಥವಾ ವಿಷ್ಣು ಅವತಾರದ ಜನ್ಮ ಸ್ಥಾನಗಳು ಸಮಸ್ತ ಹಿಂದುಗಳ ಪವಿತ್ರ ಕ್ಷೇತ್ರಗಳಾಗಿವೆ. ಹಿಮಾಲಯದ ಬದರಿನಾಥ, ಹೃಷಿಕೇಶ, ಹರಿದ್ವಾರದ ಪವಿತ್ರ ವೈಷ್ಣವ ಸ್ಥಾನದಂತೆ ಹಿಮಾಚಲ ಪ್ರದೇಶದ ಕುಲುಮನಾಲಿಯ ರಘುನಾಥ ಎಂದರೆ ಶ್ರೀ ರಾಮಚಂದ್ರ ವೈಷ್ಣವ ದೇವರ ದಸರೆಯು ಪ್ರಸಿದ್ಧವಾಗಿದೆ. ಮಥುರೆಯು ಭಗವಾನ್ ಶ್ರೀಕೃಷ್ಣನ ಜನ್ಮಸ್ಥಾನವಾಗಿದೆ. ಮಥುರೆಯಲ್ಲಿ ಶ್ರೀಕೃಷ್ಣ ಮಂದಿರವಿದ್ದು ಭವ್ಯ ರಾಜಗೃಹಗಳಂತೆ ಅನೇಕ ಗೋಪುರಗಳಿಂದ ಶೋಭಿತಗೊಂಡಿವೆ. ಪ್ರಖ್ಯಾತ ವಿಠ್ಠಲ ಶ್ರೀಕೃಷ್ಣ ಅವತಾರ ಸ್ವರೂಪವಾಗಿದ್ದು ವಿಠ್ಠಲನ ದೇಗುಲದಲ್ಲಿ ಟೊಂಕದ ಮೇಲೆ ಕೈಯಿಟ್ಟುಕೊಂಡು ನಿಂತುಕೊಂಡಿರುತ್ತಾನೆ. ಮಹಾರಾಷ್ಟ್ರದ ಹಳ್ಳಿಹಳ್ಳಿಗಳಲ್ಲಿ ವಿಠ್ಠಲ ಮಂದಿರಗಳನ್ನು ಕಾಣಬಹುದು. ಕೊಲ್ಲಾಪುರದ ಪ್ರಸಿದ್ಧ ಶಾಕ್ತ ಪಂಥದ ಮಹಾಲಕ್ಷ್ಮಿಯ ಮಂದಿರವಿದ್ದು, ಅಲ್ಲಿಯ ಪೂರ್ವಕ್ಕೆ ಮಹಾವಿಷ್ಣುವಿನ ಸುಂದರ ವಿಗ್ರಹದ ಗುಡಿಯಿದೆ. ಉತ್ತರಕ್ಕೆ ವೆಂಕಟೇಶನ ಹಾಗೂ ವಿಠ್ಠಲ ದೇವಸ್ಥಾನಗಳಿದ್ದು, ವೆಂಕಟೇಶನ ಸುಂದರ ಮೂರ್ತಿ ತಿರುಪತಿ ಬಾಲಾಜಿಸ್ವರೂಪದ್ದು. ಶಾಹಪೂರದ ರಾಧಾಕೃಷ್ಣ ಗುಡಿ, ನಾಸಿಕ, ಪುಣೆಯಲ್ಲಿಯ ರಾಮ ಗುಡಿ, ಶ್ರೀಕೃಷ್ಣ ದೇಗುಲಗಳು ಪುರಾತನ ಮತ್ತು ಪ್ರಸಿದ್ಧಿ ಹೊಂದಿವೆ.

ವಿಷ್ಣು ಮತ್ತು ಅವನ ಅವತಾರ ಸ್ವರೂಪಗಳಿಗೆ ರತ್ನರಂಜಿತ ಬಂಗಾರದ ನಾಣ್ಯಗಳಿಂದ ಹೂ - ಹಣ್ಣುಗಳಿಂದ ಶೃಂಗರಿಸಿದೆ. ಮೂರ್ತಿಯು ಮನಮೋಹಕ ಮತ್ತು ಸುಖಮಯವಾಗಿ ಕಂಗೊಳಿಸುತ್ತದೆ.

ದಸರೆ ಮತ್ತು ದೀಪಾವಳಿ ಇವು ಹಿಂದುಗಳ ಮಹತ್ತರ ಹಬ್ಬಗಳೆನಿಸಿದ್ದು, ವಿಷ್ಣು ಪೂಜನವೂ ಈ ಎರಡು ದಿನಗಳಲ್ಲಿ ನಡೆಯುತ್ತದೆ. ದಸರೆಯ ದಿನದಂದು ವಿಷ್ಣು ಅವತಾರದ ಶ್ರೀ ರಾಮನು ರಾವಣನ ವಧೆ ಮಾಡಿದನು. ಈ ದಿನದಂದು ಅಜ್ಞಾತವಾಸ ಮುಗಿಸಿ ಪಾಂಡವರು ಶಮೀವೃಕ್ಷದಡಿಯಲ್ಲಿಯ ಶಸ್ತ್ರಗಳನ್ನು ತೆಗೆದುಕೊಂಡರು. ದೀಪಾವಳಿಗೆಯ ನರಕ ಚತುರ್ದಶಿಯಂದು ಶ್ರೀಕೃಷ್ಣನು ನರಕಾಸುರ ನನ್ನು ವಧಿಸಿದ ನಂತರ ಆಯಾಸದ ಪರಿಹಾರವಾಗಿ ಅಭ್ಯಂಗಸ್ನಾನ ಮಾಡಿದನು. ಶ್ರೀ ನಾರಾಯಣನ ಪತ್ನಿ ಲಕ್ಷ್ಮೀದೇವಿಯ ಪೂಜನ ಆಶ್ವೀಜ ಅಮಾವಾಸ್ಯೆಯಂದು ನಡೆಯುತ್ತದೆ. ಕಾರ್ತೀಕ ಶುದ್ಧ ಪಾಡ್ಯದಂದು ಬಲಿಪ್ರತಿಪದೆ ಆಚರಿಸುವರು. ಬಲಿಗೆ ಶ್ರೀ ವಿಷ್ಣುವು ವಾಮನ ರೂಪಿಯಾಗಿ ವಿಶ್ವರೂಪ ತೋರಿಸಿ ಪಾತಾಳಕ್ಕೆ ತುಳಿದನು. ಈ ದಿನದಂದು ರಾಮ ಪ್ರಭುವು ಅಯೋಧ್ಯೆಯಲ್ಲಿ ರಾಜ್ಯಾಭಿಷಿಕ್ತಗೊಂಡನು.

ಮಾಸಗಳಲ್ಲಿ ವೈಶಾಖ, ಶ್ರಾವಣ, ಕಾರ್ತೀಕ, ಮಾಘ - ಇವು ವಿಷ್ಣುವಿಗೆ ಬಹು ಪ್ರೀತಿಯ ಮಾಸಗಳಾಗಿವೆ. ಸಾಪ್ತಾಹಿಕದ ಬುಧವಾರವು ವಿಷ್ಣುವಿನ ಮೆಚ್ಚಿಗೆಯ ವಾರವಾಗಿದ್ದು ಅಂದು ವಿಶೇಷ ಪೂಜನ ಸಲ್ಲಿಸುವರು. ಶುಭ್ರ ಬುಧವಾರ ವ್ರತವೂ ಒಂದಿದೆ. ಉಪವಾಸದಿಂದ ಶಾರೀರಿಕವಾಗಿ ಮಾನಸಿಕವಾಗಿ ನೆಮ್ಮದಿ ಲಭಿಸುತ್ತದೆ. ವಿಷ್ಣು ಸ್ಮರಣೆಯಿಂದ ಸಂತೃಪ್ತಿ ದೊರಕುತ್ತದೆ. ಅಧಿಕ ಮಾಸವು ವಿಷ್ಣುವಿಗೆ ಪ್ರೀತಿಯದಾಗಿದ್ದು ಅದನ್ನು ಪುರುಷೋತ್ತಮ ಮಾಸವೆಂದು ಕರೆಯುವರು.

ಜಯದೇವ ಗೀತಗೋವಿಂದ, ಮಹಾಭಾರತದೊಳಗಿನ ಕರ್ಮವಾದದ ಮೇಲೆ ಅರ್ಜುನನಿಗೆ ಶ್ರೀಕೃಷ್ಣನು ಉಪದೇಶಿಸಿದ ಗೀತೋಪನಿಷತ್ತು - ಹಿಂದೂಗಳಿಗೆ ಅಮೂಲ್ಯ ನಿಧಿಗಳು. ಮೂಲ ಸಂಸ್ಕೃತ ಗೀತೆಯನ್ನು ಜ್ಞಾನೇಶ್ವರರು ಮರಾಠಿಯಲ್ಲಿ ಅನುವಾದಿಸಿದ್ದು ಜ್ಞಾನೇಶ್ವರಿ ಕೃತಿಯು ಮಹಾರಾಷ್ಟ್ರದಲ್ಲಿ ಜನಪ್ರಿಯವಾಗಿದೆ. ಮೀರಾಬಾಯಿಯ ಹಿಂದಿ ಭಜನೆ, ತುಳಸಿದಾಸರ ತುಲಸೀ ರಾಮಾಯಣ, ಮಹಾರಾಷ್ಟ್ರದಲ್ಲಿಯ ಸಂತ ಜ್ಞಾನದೇವ, ತುಕಾರಾಮ, ನಾಮದೇವ, ಜನಾಬಾಯಿ, ಕರ್ನಾಟಕದ ಪುರಂದರದಾಸ, ಕನಕದಾಸ, ವ್ಯಾಸರಾಯರು, ವಿಜಯದಾಸ ಮೊದಲಾದ ಹರಿಭಕ್ತರ ಗೀತೆಗಳು ಮೊದಲಾಗಿ ವೈಷ್ಣವ ಪಂಥವು ಹಿಂದೂ ಧರ್ಮಕ್ಕೆ ನೀಡಿದ ಬಹು ಮುಖ್ಯ ದೇಣಿಗೆ ಎನಿಸಿದೆ.

★★★★★



ನನ್ನ ಬಾಯೊಳಗಿದ್ದು ನೀನೆ ನುಡಿಯೊ.

# ಯೋಗಃ ಚಿತ್ತವೃತ್ತಿ ನಿರೋಧಃ

ಡಾ|| ವಿ. ಕೆ. ವಿಶ್ವೇಶ್ವರ.

ಉಪನಿಷತ್ತಿನಲ್ಲಿ ಒಂದು ಮಾತಿದೆ : 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಅಂತ. ಅಂದರೆ ಮನುಷ್ಯ ಜೀವಿಯ ಬಂಧನಕ್ಕೂ ಮೋಕ್ಷಕ್ಕೂ ಆತನ ಮನಸ್ಸೇ ಕಾರಣ. ಜೀವಾತ್ಮವು ಭವಬಂಧನದಲ್ಲಿ ಸಿಲುಕಿರುವುದೋ ಅಥವಾ ಸದ್ಗತಿಯತ್ತ ಚಲಿಸುವುದೋ ಎಂಬುದನ್ನು ನಿರ್ಧರಿಸುವುದು ಆ ಮನಸ್ಸು. ಮನುಷ್ಯನ ಮನಸ್ಸೆಂಬುದು ಒಂದು ಅದ್ಭುತವಾದ ಶಕ್ತಿಯ ಆಕರ. ಅದು ಎಂತೆಂಥ ಪವಾಡಗಳನ್ನೂ ಸಾಧ್ಯವಾಗಿಸಬಲ್ಲುದು. ಅದೇ ಮನಸ್ಸು ತೀರ ದುರ್ಬಲವಾಗಿ ವರ್ತಿಸಿ ಕ್ಷುಲ್ಲಕ ಸಾಂಸಾರಿಕ ಸಾಗರದ ತೆರೆಗಳಲ್ಲೇ ಮುಳುಗೇಳುತ್ತಿರಲೂ ಬಹುದು. ವ್ಯಕ್ತಿಯ ಜೀವಿತದ ಮೂಲ ಸಾಧನ ಮನಸ್ಸು.

ಮನಸ್ಸಿನ ನಾಶವಾದರೆ ಅಂದರೆ ಮನಸ್ಸು ಆ ಬೃಹತ್ ಚೈತನ್ಯದಲ್ಲಿ ಲೀನವಾದರೆ, ಮತ್ತೆ ಅದು ಹುಟ್ಟುವುದಿಲ್ಲ. ಮುಕ್ತಿಯೆಂದರೆ ಅದೇ, ಆದರೆ ಆ ಪ್ರಕ್ರಿಯೆಯು ಅಷ್ಟು ಸುಲಭವಲ್ಲ. ಮೊದಲಾಗಿ, ನಿರಂತರ ಯೋಚಿಸುತ್ತಲೇ ಇರುವ, ವಿವಿಧ ವಿಷಯಗಳಲ್ಲಿ ಎಡೆಬಿಡದೆ ಹರಿಯುತ್ತಲೇ ಇರುವ ಮನಸ್ಸನ್ನು ಒಂದೆಡೆ ಹಿಡಿದು ನಿಲ್ಲಿಸಬೇಕು. ಸತತ ಯೋಚನೆಯೇ ವೈಶಿಷ್ಟ್ಯವಾಗಿರುವ ಚಿತ್ತವನ್ನು ಒಂದು ರೀತಿಯ ನಿದ್ದೆಗೆ ಒಳಪಡಿಸಬೇಕು. ಮತ್ತೆ ಮನಸ್ಸು ಪರಮಶಕ್ತಿಯ ಕಡೆಗೆ ಕೇಂದ್ರೀಕೃತವಾಗಬೇಕು. ಅಂಥ ಸಾಧನೆಗೆ ನಮ್ಮ ಗ್ರಂಥಗಳು ಸೂಚಿಸುವ ಸಾಧನವೇ ಯೋಗ. ''ಯೋಗಃ ಚಿತ್ತವೃತ್ತಿ ನಿರೋಧಃ'' ಎಂಬ ಮಾತು ಧ್ವನಿಸುವುದು ಇದನ್ನೇ.

ಕ್ಷಿಪ್ತ, ಮೂಢ, ವಿಕ್ಷಿಪ್ತ, ಏಕಾಗ್ರ ಮತ್ತು ನಿರುದ್ಧ - ಹೀಗೆ ಐದು ಅವಸ್ಥೆಗಳು ಮನಸ್ಸಿನ ಬೆಳವಣಿಗೆಯಲ್ಲಿ - ಇವುಗಳಲ್ಲಿ ಕೊನೆಯ ಎರಡು - ಏಕಾಗ್ರ, ನಿರುದ್ಧ - ಯೋಗಸಾಧನೆಯಡಿ ಬರುತ್ತವೆ. ''ತಾಂ ಯೋಗಮಿತಿ ಮನ್ಯಂತೇ ಸ್ಥಿರಮಿಂದ್ರಿಯ ಧಾರಣಾಂ'' ಎಂಬ ಮಾತಿನಂತೆ ತನ್ನ ಇಂದ್ರಿಯಗಳನ್ನು ಬುದ್ಧಿಯ ಸ್ಥಿರ ಹಿಡಿತದಲ್ಲಿ ಇರಿಸಿಕೊಳ್ಳುವುದೇ ಯೋಗ. ಮನಸ್ಸಿನ ವ್ಯಾಪಾರ - ವ್ಯವಹಾರಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದೇ ಯೋಗ. ''ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ''



ಎಂದು ಗೀತಾಚಾರ್ಯನು ಹೇಳಿದಂತೆ, ಕಠಿಣವಾದ ಅಭ್ಯಾಸ ಮತ್ತು ಅಚಲವಾದ ವೈರಾಗ್ಯಗಳು ಯೋಗಸಾಧನೆಯ ಎರಡು ಅಂಗಗಳು. ಪತಂಜಲಿ ಮಹರ್ಷಿಯಿಂದ ಪ್ರವರ್ತಿಸಲ್ಪಟ್ಟ ಯೋಗದರ್ಶನವು ಭಾರತದ ಆರು ಆಸ್ತಿಕ ದರ್ಶನಗಳಲ್ಲಿ ಒಂದಾಗಿದೆ.

'ಯುಜ್ ಸಮಾಧೌ' ಎಂಬ ಧಾತುವಿನಿಂದ ಉತ್ಪತ್ತಿಯಾದ ಶಬ್ದ ಯೋಗ. ಅರ್ಥಾತ್ ಯೋಗವೆಂದರೆ ಸಮಾಧಿ. ಅಂತೆಯೇ 'ಯುಜಿರ್ ಯೋಗೇ' ಎಂಬ ವ್ಯುತ್ಪತ್ತಿಯನ್ನು ಪರಿಗಣಿಸಿದರೆ, ಯುಜನ ಅಥವಾ ಸೇರುವುದು ಎಂಬರ್ಥ ಬರುತ್ತದೆ. ಅಂದರೆ, ಜೀವಾತ್ಮ ಪರಮಾತ್ಮದೊಡನೆ ಸೇರುವುದು ಯೋಗ. ಆದರೆ, ಜೀವಾತ್ಮವು ಪರಮಾತ್ಮನ ಭಾಗವೇ ಆಗಿರುವುದರಿಂದ, ಇನ್ನಷ್ಟು ಸ್ಪಷ್ಟವಾಗಿ, ಜೀವಾತ್ಮಭಾವದ ನಾಶವಾಗಿ ಪರಬ್ರಹ್ಮ ಭಾವದ ಸ್ಥಿತಿ ಉಂಟಾಗುವುದೇ ಯೋಗ ಅಂತ ಹೇಳಬಹುದು. ಒಟ್ಟಿನಲ್ಲಿ ಭಕ್ತ - ಭಗವಂತನ ಮಿಲನವೇ ಯೋಗ.

ಇಂಥ ಯೋಗಕ್ಕೆ ಎಂಟು ಅಂಗಗಳು - ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಮತ್ತು ಸಮಾಧಿ ಅಂತ.

''ದೇಹೇಂದ್ರಿಯೇಷು ವೈರಾಗ್ಯಂ ಯಮ ಇತ್ಯುಚ್ಯತೇ ಬುಧೈಃ'' ಎಂಬ ಉಪನಿಷತ್ ಮಾತಿನಂತೆ ಶರೀರದ ಇಂದ್ರಿಯಗಳ ಕುರಿತಾದ ವೈರಾಗ್ಯವೇ ಯಮ. ಯಮಕ್ಕೆ ಐದು ಅಂಗಗಳು - ಅಹಿಂಸೆ, ಸತ್ಯ., ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ. 'ಅಹಿಂಸಾ ಪ್ರತಿಷ್ಠಾಯಾಂ ತತ್ಸನ್ನಿಧೌ ವೈರತ್ಯಾಗಃ' ಎಂಬಂತೆ ಅಹಿಂಸೆಯನ್ನಾಚರಿಸುವ ಯೋಗಿಯ ಸನ್ನಿಧಾನದಲ್ಲಿ ಹಾವು - ಮುಂಗುಸಿಗಳೂ ಸ್ವಭಾವತಃ ಇರುವ ದ್ವೇಷವನ್ನು ತ್ಯಜಿಸಿರುತ್ತವೆ. 'ಸತ್ಯಪ್ರತಿಷ್ಠಾಯಾಂ ಕ್ರಿಯಾಫಲಾಶ್ರಯತ್ವಂ' ಎಂಬ ನುಡಿಯಂತೆ ಸತ್ಯವನ್ನು ನುಡಿಯುವ ಯೋಗಿಗೆ ಯಜ್ಞವನ್ನಾಚರಿಸಿದ ಫಲವು ಲಭ್ಯವಾಗುತ್ತದೆ. ಪರಧನವನ್ನು ಅಪಹರಿಸದೆ ಅಸ್ತೇಯಗುಣವನ್ನು ರೂಢಿಸಿಕೊಂಡವನಿಗೆ ಇಚ್ಛಿತ ರತ್ನಸ್ವರೂಪಿ ವಸ್ತುಗಳೆಲ್ಲ ದೊರಕುತ್ತವೆ. ಆಸ್ತೇಯ ಪ್ರತಿಷ್ಠಾಯಾಂ ಸರ್ವರತ್ನೋಪಸ್ಥಾನಮ್ - ಕಾಮನೆಗಳ ನಿಯಂತ್ರಣದಿಂದ ಬ್ರಹ್ಮಚರ್ಯವನ್ನು ಸಾಧಿಸಿದರೆ ನಿಜವಾದ



ಅರ್ಥದಲ್ಲಿ ವೀರ್ಯಲಾಭವಾಗುತ್ತದೆ - 'ಬ್ರಹ್ಮಚರ್ಯಪ್ರತಿಷ್ಠಾಯಾಂ ವೀರ್ಯಲಾಭಃ' ಭೋಗಸಾಧನಗಳನ್ನು ಸಂಗ್ರಹಿಸದೇ ಇರುವುದೇ ಅಪರಿಗ್ರಹ. 'ಅಪರಿಗ್ರಹಪ್ರತಿಷ್ಠಾಯಾಂ ಜನ್ಮ ಕಥಂತಾ ಸಂಬೋಧಃ' ಎಂಬ ಮಾತಿನಂತೆ ಅಪರಿಗ್ರಹವನ್ನು ರೂಢಿಗೆ ತಂದವನಿಗೆ ಈ ಜನ್ಮವಲ್ಲದೆ ಹಿಂದಿನ ಮತ್ತು ಮುಂದಿನ ಜನ್ಮಗಳ ಬಗೆಗೂ ಅರಿವು ಉಂಟಾಗುತ್ತದೆ.

''ಅನುರಕ್ತಿಃ ಪರೇ ತತ್ವೇ ಸತತಂ ನಿಯಮಃ ಸ್ಮೃತಃ'' - ಪರಮ ತತ್ವದಲ್ಲಿ ಎಡೆಬಿಡದ ಅನುರಕ್ತಿಯೇ ನಿಯಮವೆಂದು ಕರೆಯಲ್ಪಡುತ್ತದೆ. ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರ ಪ್ರಣಿಧಾನ - ಇವೈದು ವಿಷಯಗಳಿಂದ ನಿಯಮದ ಸಾಧನೆಯಾಗುತ್ತದೆ.

'ಸರ್ವವಸ್ತೂನ್ಯುದಾಸೀನಭಾವಮ್ ಆಸನಮುತ್ತಮಮ್' ಅಂದರೆ, ಅನಾತ್ಮವಸ್ತುಗಳ ಮೇಲೆ ಅಲಕ್ಷ್ಯಭಾವವನ್ನು ತಾಳುವುದಕ್ಕೆ ಉತ್ತಮ ಸಾಧನವಾಗಿ ಒದಗುವುದೇ ಆಸನ. ಧ್ಯಾನಾಭ್ಯಾಸಕ್ಕಾಗಿ ಸುಖಕರವಾದ ಮತ್ತು ಸ್ಥಿರವಾದ ಸಿದ್ಧಾಸನ, ಪದ್ಮಾಸನ, ಸಿಂಹಾಸನ, ಭದ್ರಾಸನಾದಿಗಳು ಸಹಾಯಕವಾಗುತ್ತವೆ.

ಉಚ್ಛ್ವಾಸ - ನಿಃಶ್ವಾಸಗಳ ಗತಿಯ ನಿಯಂತ್ರಣವನ್ನು ಪ್ರಾಣಾಯಾಮ ಎನ್ನುತ್ತಾರೆ. ವಾಯುವಿನ ಬೀಸುವಿಕೆಯಿಂದ ಬೆಂಕಿಯ ಸುತ್ತಲಿನ ಬೂದಿಯ ಘಟಕ ಮರೆಯಾಗಿ ಅದು ಪ್ರಜ್ವಲಿಸತೊಡಗುವ ರೀತಿಯಲ್ಲಿಯೇ ಪ್ರಾಣಾಯಾಮದಿಂದಾಗಿ ಯೋಗವು ತನ್ನ ಅಜ್ಞಾನಾಚ್ಛಾದಿತ ಕತ್ತಲೆಯನ್ನು ಕಳಚಿಕೊಂಡು ವಿವೇಕಯುತವಾಗಿ ಬೆಳಗತೊಡಗುತ್ತದೆ.

''ಚಿತ್ತಸ್ಯಾಂತರ್ಮುಖೀಭಾವಃ ಪ್ರತ್ಯಾಹಾರಸ್ತು ಸತ್ತಮ'' ಎಂಬ ವಾಣಿಯಂತೆ ಮನಸ್ಸು ಒಳಮುಖಿಯಾಗಿ ಚಲಿಸುವ ಪ್ರಕ್ರಿಯೆಯೇ ಪ್ರತ್ಯಾಹಾರ. ಶರೀರದ ಇಂದ್ರಿಯಗಳೆಲ್ಲ ತಂತಮ್ಮ ಗ್ರಹಿಕೆಗಳಿಂದ ಸಂಬಂಧವನ್ನು ಬಿಡಿಸಿಕೊಂಡು ಮನಸ್ಸಿನ ರೂಪದ ಅನುಕರಣೆಯನ್ನು ಮಾಡುವುದು ಪ್ರತ್ಯಾಹಾರದ ಸಾಧನೆಯ ಲಕ್ಷಣವಾಗಿರುತ್ತದೆ.

ಮನಸ್ಸನ್ನು ಒಂದು ಸ್ಥಾನದಲ್ಲಿ ಸ್ಥಿರವಾಗಿ ನಿಲ್ಲಿಸುವುದಕ್ಕೆ ಧಾರಣಾ ಎನ್ನುತ್ತಾರೆ. 'ಚಿತ್ತಸ್ಯ ನಿಶ್ಚಲೀಭಾವೋ ಧಾರಣಾ ಧಾರಣಂ ವಿದುಃ', 'ದೇಶಬಂಧಶ್ಚಿತ್ತಸ್ಯ ಧಾರಣಾ' ಎಂಬ ನುಡಿಗಳ ಪ್ರಕಾರ ಎತ್ತೆತ್ತಲೋ ಸುತ್ತುವ ಮನಸ್ಸೆಂಬ ಮರ್ಕಟವನ್ನು ಒಂದೇ ಕೇಂದ್ರದಲ್ಲಿ ನೆಲೆಗೊಳಿಸುವ ಸಾಧನೆಯೇ ಧಾರಣಾ.

ಧಾರಣಗೊಳಿಸಿದ ವಿಷಯದ ಕುರಿತಾಗಿ ಸತತವಾದ ಚಿಂತನೆಯೇ ಧ್ಯಾನ. ಧ್ಯಾನದ ಸಮ್ಯಕ್ ವಿಸ್ಮೃತಿಯೇ ಸಮಾಧಿ. 'ಧ್ಯಾನಸ್ಯ ವಿಸ್ಮೃತಿಃ ಸಮ್ಯಕ್ ಸಮಾಧಿ ರಭಿಧೀಯತೇ' ಎಂಬುದಾಗಿ ತ್ರಿಶಿಖಿ ಬ್ರಾಹ್ಮಣೋಪನಿಷತ್ ನಿರ್ವಚನ ನೀಡುತ್ತದೆ. ಅಂದರೆ, ಧ್ಯಾನದಲ್ಲಿ ಮುಳುಗಿದ ಮನಸ್ಸು ತನ್ನ ಇರುವಿಕೆಯನ್ನೇ ಮರೆತುಬಿಡುತ್ತದಲ್ಲ, ಆ ಸ್ಥಿತಿಯೇ ಸಮಾಧಿ, ಇದೇ ಯೋಗದ ಅಂತಿಮ ಅಂಗ.

ಸಂಸಾರೋತ್ತಾರಣೇ ಯುಕ್ತಿ
ಯೋಗಶಬ್ದೇನ ಕಥ್ಯತೇ
ಐಕ್ಯಂ ಜೀವಾತ್ಮನೋ ರಾಹು
ಯೋಗಂ ಯೋಗ ವಿಶಾರದಾಃ

ಯೋಗ ವಾಶಿಷ್ಠದಲ್ಲಿ ಬರುವ ಈ ಶ್ಲೋಕದ ಪ್ರಕಾರ ಸಂಸಾರದಿಂದ ಮೇಲಕ್ಕೇಳುವುದಕ್ಕೆ ಇರುವಂತಹ ಉಪಾಯವನ್ನೇ ಯೋಗವೆಂಬ ಶಬ್ದದಿಂದ ಕರೆಯಲಾಗುತ್ತದೆ. ಜೀವಾತ್ಮವು ಪರಮಾತ್ಮನ ಜತೆ ಲೀನವಾಗುವುದೇ ಯೋಗವೆಂದು ಗುರುತಿಸಲ್ಪಡುತ್ತದೆ. ಯೋಗಸಾಧನೆಯಿಂದ ಜೀವ, ಬ್ರಹ್ಮ - ಬಿಂಬ, ಪ್ರತಿಬಿಂಬಗಳಾಗುತ್ತವೆ.

ಶ್ರೀಮದ್ಭಾಗವತದಲ್ಲಿ ಹೇಳಿದಂತೆ -

ಯೋಗಾಸ್ತ್ರಯೋ ಮಯಾ ಪ್ರೋಕ್ತಂ
ನೃಣಾಂ ಶ್ರೇಯೋವಿಧಿತ್ಸಯಾ
ಜ್ಞಾನಂ ಕರ್ಮಂ ಚ ಭಕ್ತಿಶ್ಚ
ನೋಪಾಯೋಽಸ್ತಿ ಕರ್ಹಿಚಿತ್

ಮನುಷ್ಯನ ಶ್ರೇಯಸ್ಸಿನ ಸಾಧನೆಗೆ ಹೇಳಿರುವಂತಹ ಮೂರು ವಿಧದ ಯೋಗಗಳೆಂದರೆ - ಜ್ಞಾನಯೋಗ, ಕರ್ಮಯೋಗ ಮತ್ತು ಭಕ್ತಿಯೋಗ. ಯೋಗವನ್ನು ಬಿಟ್ಟರೆ ಮುಕ್ತಿ ಪಥದಲ್ಲಿ ಬೇರೆ ದಾರಿಗಳಿಲ್ಲ, ಉಪಾಯಗಳಿಲ್ಲ.

ಬುದ್ಧಿರ್ಯುಕ್ತೋ ಜಹಾತೀಹ
ಉಭೇ ಸುಕೃತದುಷ್ಕೃತೇ
ತಸ್ಮಾದ್ಯೋಗಾಯ ಯುಜ್ಯಸ್ವ
ಯೋಗಃ ಕರ್ಮಸು ಕೌಶಲಂ

''ಬುದ್ಧಿಯನ್ನು ಹೊಂದಿದ ಮನುಷ್ಯನು ವರ್ತಮಾನದಲ್ಲಿಯೇ ಪಾಪ ಮತ್ತು ಪುಣ್ಯಗಳ ಬಗೆಗೆ ನಿರ್ಲಿಪ್ತತೆಯನ್ನು ಹೊಂದುತ್ತಾನೆ. ಆದ್ದರಿಂದ ನೀನು, ಅಂತಹ ಬುದ್ಧಿಯ ಸಮತೆ ಅರ್ಥಾತ್ ಯೋಗವನ್ನು ಅನುಸರಿಸು. ಏಕೆಂದರೆ ಯೋಗವು ಕರ್ಮದಲ್ಲಿನ ಕುಶಲತೆಯೇ ಆಗಿದೆ'' ಎಂಬುದಾಗಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುವ ಮೂಲಕ ಯೋಗವೆಂದರೆ ತನ್ನ ಕರ್ತವ್ಯವನ್ನು ಕೌಶಲದಿಂದ ನಿಭಾಯಿಸುವುದೇ ಆಗಿದೆಯೆಂದು ಸ್ಪಷ್ಟಪಡಿಸುತ್ತಾನೆ. ಈ ಮಾತುಗಳನ್ನು 'ಕರ್ಮಗಳಲ್ಲಿ ಕುಶಲತೆಯೇ ಯೋಗ' ಮತ್ತು 'ಕರ್ಮಗಳಲ್ಲಿ ಯೋಗವೇ ಕುಶಲತೆ' - ಹೀಗೆ ಎರಡೂ ರೀತಿಯಲ್ಲಿ ಅರ್ಥೈಸಿಕೊಳ್ಳಲು ಸಾಧ್ಯವಿದೆ.

ಯೋಗಸ್ಥಃ ಕುರು ಕರ್ಮಾಣಿ
ಸಂಗಂ ತ್ಯಕ್ತ್ವಾ ಧನಂಜಯ
ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ
ಸಮತ್ವಂ ಯೋಗ ಉಚ್ಯತೇ

''ಎಲೈ ಧನಂಜಯನೇ, ನೀನು ಮೋಹವನ್ನು ತ್ಯಜಿಸಿ ಸಿದ್ಧಿ - ಅಸಿದ್ಧಿಗಳನ್ನು ಸಮವಾಗಿ ಪರಿಗಣಿಸುವ ಸಮಚಿತ್ತಸ್ಥಿತಿಯನ್ನು ಅರ್ಥಾತ್ ಯೋಗವನ್ನು ಅಭ್ಯಸಿಸು, ಆದರಿಸು'' ಎಂಬ ಶ್ರೀಕೃಷ್ಣನ ಮಾತು, ಯೋಗವೆಂದರೆ ಸಮಚಿತ್ತತೆ ಎಂಬ ಅತ್ಯಂತ ಸರಳವಾದ ಅರ್ಥವನ್ನು ನಮ್ಮೆದುರು ತೆರೆದಿಡುತ್ತದೆ. ಇಂದಿನ ದಿನಗಳಲ್ಲಿ ಯೋಗ ನಮಗೆ ಎಷ್ಟು ಅನಿವಾರ್ಯ ಎಂಬುದನ್ನು ಮನಕ್ಕೆ ತಂದುಕೊಳ್ಳಬಹುದು.






# ಶ್ರೀಕಾಳಹಸ್ತಿ

- ಅಣ್ಣಾಸ್ವಾಮಿ ಮೊದಲಿಯಾರ್.

ತಿರುಪತಿ - ತಿರುಮಲೆ ಜಗತ್ಪ್ರಸಿದ್ಧ ಯಾತ್ರಾಸ್ಥಳ. ಜಗತ್ ಪಿತ, ಜಗನ್ನಾಥ, ಜಗದೀಶ್ವರ, ಜಗದ್ರಕ್ಷಕ, ಜಗದೋದ್ಧಾರಕ ಶ್ರೀ ವೆಂಕಟೇಶ್ವರಸ್ವಾಮಿಯ ದರ್ಶನ ಮಾತ್ರದಿಂದ ಕೋಟ್ಯಾನುಕೋಟಿ ಭಗವದ್ಭಕ್ತರು ಪುನೀತರಾಗುತ್ತಿದ್ದಾರೆ.

ಜಾಗೃತಕ್ಷೇತ್ರವಾದ ತಿರುಪತಿಯ ಆಸುಪಾಸಿನಲ್ಲಿ ಪಲವಾರು ಪುಣ್ಯಕ್ಷೇತ್ರಗಳು ಇವೆ. ಅವುಗಳಲ್ಲಿ ಕಾಳಹಸ್ತಿ ಹಾಗೂ ತಿರುತ್ತಣಿ ತೀರ್ಥಕ್ಷೇತ್ರಗಳು ಬಹು ಪ್ರಸಿದ್ಧವಾದವು. ಕಾಳಹಸ್ತಿ ಶಿವನ ಆವಾಸಸ್ಥಾನವಾದರೆ ತಿರುತ್ತಣಿ ಸುಬ್ರಹ್ಮಣ್ಯಕ್ಷೇತ್ರ.

ಕಾಳಹಸ್ತಿಯು ದಕ್ಷಿಣ ಕಾಶಿಯೆಂದು ಪ್ರಸಿದ್ಧವಾಗಿದೆ. ಬನಾರಸಿನ ಶಿವಾಲಯದ ಸಮೀಪದಲ್ಲಿ ಗಂಗಾನದಿಯು ಹರಿಯುತ್ತಿದ್ದರೆ ಪಾವನಕರ ಸ್ವರ್ಣಮುಖಿ ನದಿಯು ಕಾಳಹಸ್ತಿಯ ಸನಿಹದಲ್ಲಿ ಹರಿಯುತ್ತಿದೆ. ಇದು ಗಂಗೆಯಂತೆಯೇ ಜೀವನದಿ, ಎಲ್ಲ ಋತುಗಳಲ್ಲಿಯೂ ಈ ನದಿಯಲ್ಲಿ ನೀರು ಹರಿಯುವುದು. ಈ ನದಿಯು ಶಿವಾಲಯದ ಬಳಿ ದಕ್ಷಿಣದಿಂದ ಉತ್ತರ ದಿಕ್ಕಿಗೆ ಹರಿಯುತ್ತದೆ. ಆದ್ದರಿಂದಾಗಿ ಈ ನದಿಗೆ 'ಉತ್ತರವಾಹಿನಿ' ಎಂದೂ ಹೆಸರುಂಟು. ಮುಂದೆ ಉತ್ತರದಿಕ್ಕಿನಿಂದ ಪೂರ್ವಕ್ಕೆ ತಿರುಗಿ ಬಂಗಾಳ ಕೊಲ್ಲಿಯನ್ನು ಸೇರುತ್ತದೆ. ಕಾಶಿಯಲ್ಲಿ ಪಾವನತಮವಾದ ಗಂಗಾನದಿಯೂ ಶಿವಾಲಯದ ಬಳಿ ದಕ್ಷಿಣದಿಂದ ಉತ್ತರಕ್ಕೆ ಹರಿಯುತ್ತದೆ. ನಂತರ ಉತ್ತರ ದಿಕ್ಕಿನಿಂದ ಪೂರ್ವಕ್ಕೆ ತಿರುಗಿ ಬಂಗಾಳ ಕೊಲ್ಲಿಯನ್ನು ಸೇರುತ್ತದೆ. ಹೀಗಾಗಿ ಪುರಾಣಗಳಲ್ಲಿ ಸ್ವರ್ಣಮುಖಿ ನದಿಯನ್ನು ದಕ್ಷಿಣದ ಗಂಗೆಯೆಂದು ಕರೆಯುವರು.

ಗಂಗೆಯಲ್ಲಿ ಸ್ನಾನಮಾಡುವುದರಿಂದ ಪಾಪಗಳನ್ನು ಕಳೆದುಕೊಂಡಂತೆ ಸ್ವರ್ಣಮುಖಿಯಲ್ಲಿ ಸ್ನಾನಮಾಡಿ ಕಾಳಹಸ್ತೀಶ್ವರನ ದರ್ಶನ ಮಾಡಿ ಅನೇಕ ಮಂದಿ ಭಕ್ತರು ತಮ್ಮ ಪಾಪಗಳನ್ನು ತೊಳೆದುಕೊಂಡು ಪುನೀತರಾಗಿದ್ದಾರೆ. ಇಂದ್ರನು ಈ ನದಿಯಲ್ಲಿ ಸ್ನಾನಮಾಡಿ ಗೌತಮರ ಶಾಪವನ್ನು ಕಳೆದುಕೊಂಡನಂತೆ.

ಕಾಳಹಸ್ತಿಯ ಸುತ್ತಮುತ್ತ ಮೂವತ್ತಾರು ಪುಣ್ಯತೀರ್ಥಗಳಿದ್ದು ಭಕ್ತರ ಪಾಪ ವಿಮೋಚನೆ ಮಾಡುತ್ತಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಭಾರದ್ವಾಜತೀರ್ಥ, ಹರಿಹರ ತೀರ್ಥ, ಮಾರ್ಕಂಡೇಯ ತೀರ್ಥ, ಭೈರವ ತೀರ್ಥ, ಪಾತಾಳಗಂಗ, ಬ್ರಹ್ಮತೀರ್ಥ, ಸೂರ್ಯ ಪುಷ್ಕರಿಣಿ, ಚಂದ್ರ ಪುಷ್ಕರಿಣಿ, ಸಹಸ್ರಲಿಂಗತೀರ್ಥ - ಮೊದಲಾದವುಗಳು.

ಸ್ವರ್ಣ ಮುಖಿ ನದಿಯ ನೀರು ಸ್ಫಟಿಕದಂತೆ ತಿಳಿಯಾಗಿದ್ದು, ಹೊನ್ನಿನ ಕಣಗಳನ್ನು ಬೆಟ್ಟಗುಡ್ಡಗಳಿಂದ ಹೊತ್ತು ತರುವುದರಿಂದ ಸೂರ್ಯನ ಬೆಳಕಿನಲ್ಲಿ ಹೊನ್ನಿನ ಹೊಳೆಯಂತೆ ಹೊಳೆಯುತ್ತದೆ. ಸ್ವರ್ಣಮುಖಿಯೆಂದು ಹೆಸರು ಬರಲು ಇದೂ ಒಂದು ಕಾರಣವಾಗಿದೆ. ಆದರೆ





ಈ ಹೊನ್ನಿನ ಕಣಗಳನ್ನು ಬೇರ್ಪಡಿಸಲು ಅಪಾರವಾದ ಹಣ ಮತ್ತು ಶ್ರಮ ಅಗತ್ಯವಾಗಿರುವುದರಿಂದ ಯಾರೂ ಅಂತಹ ಪ್ರಯತ್ನ ಮಾಡಲಿಲ್ಲ.

ಸ್ವರ್ಣಮುಖಿ ನದಿಯ ಬಗ್ಗೆ ಅದರ ಜನನದ ಬಗ್ಗೆ ಒಂದು ಕತೆಯಿದೆ- ಪುರಾಣ ಪ್ರಸಿದ್ಧ ಕಾಳಹಸ್ತಿಯಲ್ಲಿ ಶಿವನು ಪಾರ್ವತೀಸಮೇತ ನೆಲೆಸಿದ ಮೇಲೆ ಸುತ್ತಲೂ ಇದ್ದ ಗಜಾರಣ್ಯದಲ್ಲಿ ಋಷಿಗಳು, ಶಿವಗಣಗಳು, ಆಶ್ರಮಗಳನ್ನು ಕಟ್ಟಿಕೊಂಡು ಯಜ್ಞ, ಯಾಗ, ವ್ರತ, ಶಿವಪೂಜೆಗಳಲ್ಲಿ ತೊಡಗಿದ್ದರು. ಸ್ನಾನ ಮಾಡಿ ತಮ್ಮ ದೇವತಾಕಾರ್ಯದಲ್ಲಿ ತೊಡಗಲು ಸಮೀಪದಲ್ಲಿ ನದಿಯಿರಲಿಲ್ಲ. ಕಾಡಿನಲ್ಲಿ ಬಹಳ ದೂರ ನೀರಿನಾಸರೆಗಾಗಿ ನಡೆದು ಹೋಗಬೇಕಾಗಿದ್ದಿತು. ಕಾಡಿನಲ್ಲಿ ಆನೆಗಳ ಹಿಂಡು ಹೆಚ್ಚಾಗಿದ್ದು, ದುಷ್ಟಮೃಗಗಳೂ ಇದ್ದವು. ಅಗಸ್ತ್ಯ ಮಹರ್ಷಿಯು ತಮ್ಮ ಪತ್ನಿ ಲೋಪಾಮುದ್ರೆಯೊಡನೆ ತೀರ್ಥಯಾತ್ರೆ ಮಾಡುತ್ತಾ ಕಾಳಹಸ್ತಿಗೆ ಬಂದು ಶಿವನ ದರ್ಶನ ಮಾಡಿ ಸಂತುಷ್ಟರಾಗಿ ಮುನಿಗಳ ಆಶ್ರಮಕ್ಕೆ ಭೇಟಿ ನೀಡಿದರು. ಮುನಿಗಳು ಅಗಸ್ತ್ಯರಿಗೆ ತಮ್ಮ ಕಷ್ಟಸುಖಗಳ ಬಗ್ಗೆ ತಿಳಿಸುತ್ತಾ ಹತ್ತಿರದಲ್ಲಿ ಸ್ನಾನಕ್ಕೆ ನದಿಯಿಲ್ಲದಿರುವ ಕೊರತೆಯನ್ನು ವಿವರಿಸುವರು. ಅಗಸ್ತ್ಯರು ವಿಂಧ್ಯಪರ್ವತಕ್ಕೆ ಹೋಗಿ ಘನಘೋರ ತಪಸ್ಸು ಮಾಡಿದರು. ಬ್ರಹ್ಮದೇವರು ಪ್ರತ್ಯಕ್ಷರಾದಾಗ ಕಾಳಹಸ್ತಿಯ ಬಳಿ ಗಂಗೆ ಹರಿಯಬೇಕೆಂಬ ತಮ್ಮ ಕೋರಿಕೆಯನ್ನು ಮುಂದಿಟ್ಟರು. ಬ್ರಹ್ಮದೇವರು ಗಂಗಾದೇವಿಗೆ ಕಾಳಹಸ್ತಿಯ ಬಳಿ ಹರಿದು ಶಿವನ ಪಾದಗಳನ್ನು ತೊಳೆದು ಪಾವನಳಾಗು ಎಂದು ಹೇಳುತ್ತಾರೆ. ಶಿವನನ್ನು ಅಗಲಿದ್ದ ಗಂಗೆಯು ಸಂತಸದಿಂದ ಇಳಿದು ಬಂದು ಸ್ವರ್ಣವರ್ಣದಿಂದ ಕಾಳಹಸ್ತಿಯನ್ನು ಸುತ್ತುವರಿದು ಹರಿದಳು. ಹೀಗೆ ದೇವಗಂಗೆಯು ಸ್ವರ್ಣಮುಖಿಯಾಗಿ ಕಾಳಹಸ್ತಿಯ ಸಮೀಪದಲ್ಲಿ ಹರಿಯುತ್ತಿದ್ದಾಳೆ.

ಪಂಚ ಭೂತಗಳ ಪ್ರಧಾನಾಂಶಗಳಾಗಿ ಪಂಚ ಶೈವಕ್ಷೇತ್ರಗಳಿವೆ. ಭೂಮಿ, ನೀರು, ಬೆಂಕಿ, ಗಾಳಿ, ಆಕಾಶಗಳಿಗನುಗುಣವಾಗಿ ಐದು ಶಿವಾಲಯಗಳಿವೆ. ಕಾಳಹಸ್ತಿಯಲ್ಲಿರುವ ಶಿವ ವಾಯುಸ್ವರೂಪಿ. ವಾಯುವಿನಿಂದ ಪೂಜಿಸಲ್ಪಟ್ಟವನು. ವಾಯುವನ್ನು ಪ್ರಧಾನಾಂಶವಾಗಿ ಉಳ್ಳವನು. ಈಗಲೂ ಗರ್ಭಗುಡಿಯಲ್ಲಿ ವಾಯುವಿನಿಂದ ಬೆಳಗಿಸಲ್ಪಟ್ಟ ಜ್ಯೋತಿ ಉರಿಯುತ್ತಿದೆ. ಈ ಜ್ಯೋತಿ ಸರ್ವದಾ ಗಾಳಿಗೊಡ್ಡಿದಂತೆ ವಿಚಲಿತವಾಗಿ ಉರಿಯುತ್ತಿದೆ. ಗರ್ಭಗುಡಿಯಲ್ಲಿ ಬೆಳಕಿಂಡಿಗಳಾಗಲೀ, ಕಿಟಕಿಗಳಾಗಲೀ ಇಲ್ಲದೆ ಹೋದರೂ ಜ್ಯೋತಿ ಅಲ್ಲಾಡುತ್ತಲೇ ಇರುವುದು, ನೆಟ್ಟಗೆ ನಿಲ್ಲುವುದೇ ಇಲ್ಲ. ಲಿಂಗದಿಂದಲೇ ಗಾಳಿಯು ಬರುತ್ತಿರುವುದೆಂಬ ನಂಬಿಕೆ ಪರಂಪರೆಯಾಗಿದೆ. ಆದ್ದರಿಂದ ಈ ಶಿವಲಿಂಗಕ್ಕೆ ವಾಯುಲಿಂಗವೆಂಬ ಹೆಸರು ಬಂದಿದೆ.

ಪಾಂಡವರಲ್ಲಿ ಒಬ್ಬನಾದ ಅರ್ಜುನನು ತೀರ್ಥಯಾತ್ರೆ ನಿಮಿತ್ತವಾಗಿ ಇತ್ತ ಬಂದಾಗ ಕಾಳಹಸ್ತಿಯ ಸಮೀಪದಲ್ಲಿದ್ದ ಕೈಲಾಸಗಿರಿಯ ಭಾರದ್ವಾಜ ಮುನಿಗಳ ಆಶ್ರಮಕ್ಕೆ ಬಂದು ಅವರನ್ನು ಸೇವಿಸಿದಾಗ ಅವರಿಂದ ಕಾಳಹಸ್ತಿಯ ಮಹಿಮೆಯನ್ನು, ಸ್ವರ್ಣಮುಖಿಯ ಮಹತ್ವವನ್ನು ತಿಳಿದು ಕಾಳಹಸ್ತಿ ಕ್ಷೇತ್ರದರ್ಶನ ಮಾಡಿದ ಬಗ್ಗೆ ಸ್ಕಂದ ಪುರಾಣದಲ್ಲಿ ವಿವರವಾಗಿ ತಿಳಿಸಲಾಗಿದೆ.

ಕಾಳಹಸ್ತಿಯ ಸಮೀಪದಲ್ಲಿರುವ ಬೆಟ್ಟದ ಮೇಲೆ ಕಣ್ಣಪ್ಪನ ದೇವಾಲಯವಿದೆ. ಹತ್ತಿರದ ಬೆಟ್ಟದ ಮೇಲೆ ದುರ್ಗಾದೇವಿ ಹಾಗೂ ಬ್ರಹ್ಮ ದೇವಾಲಯಗಳಿವೆ. ಸುಬ್ರಹ್ಮಣ್ಯ ದೇವಾಲಯವಿದೆ. ಶಿವಗಣಗಳು, ಮುನಿಗಳು, ಸ್ಥಾಪಿಸಿದ ಶಿವಲಿಂಗಗಳಿವೆ. ಋಷ್ಯಾಶ್ರಮಗಳಿವೆ. ಮಂಟಪಗಳಿವೆ.

ಕ್ಷತ್ರಿಯ ರಾಜನಾದ ವಿಶ್ವಾಮಿತ್ರನು ದೇವಲೋಕದ ಗೋಮಾತೆಗಾಗಿ ವಸಿಷ್ಠರೊಡನೆ ಯುದ್ಧಮಾಡಿ, ಋಷಿಯ ಮಕ್ಕಳನ್ನು ಕೊಂದುಹಾಕಲು, ದುಃಖ ಪೀಡಿತರಾದ ವಸಿಷ್ಠ ಮಹರ್ಷಿಗಳು ಶಿವನನ್ನು ಕುರಿತು ಹಲವು ವರ್ಷ ತಪಸ್ಸು ಮಾಡಿದರು. ಈಶ್ವರನು ಪ್ರತ್ಯಕ್ಷನಾದನು. ಐದು ಹೆಡೆಯ ನಾಗನಿಂದ ಆವೃತನಾಗಿರುವ ಪಂಚಮುಖ ನಾಗಲಿಂಗ ರೂಪದಲ್ಲಿ ಪ್ರಕಟನಾದ ಶಿವನನ್ನು ಕುರಿತು ವಸಿಷ್ಠರು ಹೇಳುವರು - ''ಸ್ವಾಮಿ; ನಾನು ಸದಾಕಾಲವೂ ನಿನ್ನ ಪೂಜೆ ಮಾಡಿ ಮುಕ್ತಿ ಪಡೆಯಬೇಕು. ಆದ್ದರಿಂದ ನೀನು ಇಲ್ಲಿಯೇ ನೆಲೆಸಬೇಕು.'' ವಸಿಷ್ಠರು ಕೇಳಿದ ವರವನ್ನು ಒಪ್ಪಿದ ಶಿವನು ಕಾಳಹಸ್ತಿಯಲ್ಲಿ ನೆಲೆಸಿದನು. ಈಶ್ವರನನ್ನು ಅನುಸರಿಸಿ ಪಾರ್ವತಿ, ಗಣೇಶ, ವೀರಭದ್ರ, ಸುಬ್ರಹ್ಮಣ್ಯ - ವೊದಲಾದ ದೇವತೆಗಳು ಶಿವಗಣಗಳು ಬಂದು ನೆಲೆಸಿದರು. ಆದ್ದರಿಂದ ಈ ಕ್ಷೇತ್ರವು ದಕ್ಷಿಣ ಕಾಶಿಯೆಂದು ಪ್ರಸಿದ್ಧವಾಯಿತು. ಈ ಕ್ಷೇತ್ರದಲ್ಲಿ ಪಾರ್ವತಿಯು ಜ್ಞಾನ ಪ್ರಧಾನಳಾಗಿದ್ದು ''ಜ್ಞಾನಪ್ರಸೂನಾಂಬಿಕೆ'' ಎಂದು ಪ್ರಸಿದ್ಧಳಾಗಿದ್ದಾಳೆ.

ಶಿವನ ಮಹಿಮೆಗಳನ್ನು ವರ್ಣಿಸುವ ಶಿವಪುರಾಣದಲ್ಲಿ ಈ ಕ್ಷೇತ್ರದ ಬಗ್ಗೆ ಉಲ್ಲೇಖಗಳಿವೆ. ಶಿವನು ಎಂಟು ರೂಪದಲ್ಲಿ ಆವಿರ್ಭವಿಸಿದ ಎಂಬುದು ಪುರಾಣಪ್ರಸಿದ್ಧ. ಭೂಮಿಯ ರೂಪದಲ್ಲಿ 'ಶರ್ವ'ನೆಂದೂ ನೀರಿನ ರೂಪದಲ್ಲಿ 'ಭವ'ನೆಂದೂ ಅಗ್ನಿಯ ರೂಪದಲ್ಲಿ 'ರುದ್ರ'ನೆಂದೂ ಗಾಳಿಯ ರೂಪದಲ್ಲಿ 'ಉಗ್ರ'ನೆಂದೂ ಆಕಾಶರೂಪದಲ್ಲಿ 'ಭೀಮ'ನೆಂದೂ, - ಹೀಗೆಯೇ ತನ್ನ ಎಂಟು ರೂಪದಲ್ಲಿ ಅವತರಿಸಿದ್ದಾನೆ. ಈ ಎಂಟು ರೂಪದಲ್ಲಿ ಉಗ್ರ ಅಥವಾ ಗಾಳಿಯ ರೂಪದಲ್ಲಿ ಕಾಳಹಸ್ತಿಯಲ್ಲಿ ನೆಲೆಸಿದ್ದಾನೆ.

ಕಾಳಹಸ್ತಿಯ ಶಿವಲಿಂಗವು ನಾಗರೂಪದಲ್ಲಿರುವುದರಿಂದಲೂ, ನಾಗಲಿಂಗನಾಗಿ ನೆಲೆಸಿರುವುದರಿಂದಲೂ, ಈ ಕ್ಷೇತ್ರವು ರಾಹು-ಕೇತು ಕ್ಷೇತ್ರವೆಂದೂ ಪ್ರಸಿದ್ಧವಾಗಿದೆ. ರಾಹು ಅಥವಾ ಕೇತುವಿನ ಪೂಜೆ ಇಲ್ಲಿ ಮಾಡಿದರೆ ಅಧಿಕ ಪರಿಣಾಮಕಾರಿ ಎಂದು ಭಕ್ತಾದಿಗಳು ಇಲ್ಲಿ ರಾಹುಕೇತು ಪರಿಹಾರ ಪೂಜೆ ಮಾಡುವರು.

ಓಂಕಾರವು ಅ,ಉ,ಮ ಅಕ್ಷರಗಳಿಂದ ಉಂಟಾಗಿದೆ. ಈ ಪ್ರಣವಾಕ್ಷರ ಸ್ವರೂಪನು ಶಿವ. ಎಂದರೆ ಓಂಕಾರದಲ್ಲಿ ಶಿವನು ನೆಲೆಸಿದ್ದಾನೆ.

"ಓಂ ನಮಃ ಶಿವಾಯ" ಎಂಬ ಮಂತ್ರವನ್ನು ಶ್ರದ್ಧಾಭಕ್ತಿಗಳಿಂದ ಜಪಿಸಿದರೆ ಶಿವನ ಪೂರ್ಣಾನುಗ್ರಹಕ್ಕೆ ಪಾತ್ರರಾಗುವರು.

ಶ್ರೀ ಕಾಳಹಸ್ತೀಶ್ವರನೆಂಬ ಹೆಸರು ಈ ಕ್ಷೇತ್ರದಲ್ಲಿ ಶಿವನಿಗೆ ಹೇಗೆ ಬಂದಿತು ಎಂಬ ಬಗ್ಗೆ ಕಥೆಗಳಿವೆ.

ದೇವಲೋಕದ ಶಿಲ್ಪಿ ವಿಶ್ವಕರ್ಮನ ಮಗ ಊರ್ಣನಾಭನು ಶ್ರೇಷ್ಠಶಿಲ್ಪಿಯಾಗಿದ್ದನು. ಅವನಿಗೆ ವಿದ್ಯಾಗರ್ವವು ಬೆಳೆದು ಎಲ್ಲರನ್ನೂ ಧಿಕ್ಕರಿಸುತ್ತಿದ್ದನು. ಒಮ್ಮೆ ಬ್ರಹ್ಮದೇವನನ್ನು ಧಿಕ್ಕರಿಸಿ ಸೃಷ್ಟಿಗೆ ಪ್ರತಿಸೃಷ್ಟಿ ಮಾಡತೊಡಗಿದನು. ಇದರಿಂದ ಕೋಪಗೊಂಡ ಬ್ರಹ್ಮದೇವನು ಭೂಲೋಕದಲ್ಲಿನ ಗಜಾರಣ್ಯದಲ್ಲಿ ಜೇಡರ ಹುಳುವಾಗಿ ಹುಟ್ಟುವಂತೆ ಅವನಿಗೆ ಶಾಪನೀಡುವನು. ಊರ್ಣನಾಭನು ಗಜಾರಣ್ಯದಲ್ಲಿ ಶ್ರೀ ಎಂಬ ಹೆಸರಿನ ಜೇಡರ ಹುಳುವಾಗಿ ಬಿಲ್ವ ಗಿಡದ ಎಲೆಯ ಮರೆಯಲ್ಲಿ ನೆಲೆಸುವನು. ಒಬ್ಬ ಸನ್ಯಾಸಿಯು ದೇವರ ಪೂಜೆಗೆಂದು ಬಿಲ್ವದ ಪತ್ರೆಗಳನ್ನು ಕೀಳುವಾಗ ಜೇಡನು ಇದ್ದ ಎಲೆಯನ್ನೂ ಕಿತ್ತು ಬುಟ್ಟಿಯಲ್ಲಿ ಹಾಕಿಕೊಂಡು ಹೋಗುತ್ತ ಒಂದು ಸ್ವರ್ಣಮುಖಿ ನದಿಯಲ್ಲಿ ಬುಟ್ಟಿ ಸಮೇತನಾಗಿ ಮುಳುಗು ಹಾಕುವನು. ಸ್ವರ್ಣಮುಖೀನದಿಯ ನೀರಿನ ಸ್ಪರ್ಶವಾದಾಗ ಜೇಡರ ಹುಳುವಿಗೆ ತನ್ನ ಪೂರ್ವಜನ್ಮದ ನೆನಪು ಮರಳಿಬರುವುದು. ಸನ್ಯಾಸಿಯು ತಾನು ತಂದಿಪ್ಪ ಹೂವು ಮತ್ತು ಪತ್ರೆಗಳಿಂದ ಶಿವನನ್ನು ಅರ್ಚಿಸುತ್ತಾನೆ. ಆಗ ಜೇಡರ ಹುಳು ಬಿಡಿಸಿಕೊಂಡು ಲಿಂಗದ ಸಮೀಪದ ಮರವನ್ನೇರುತದೆ. ಶಿವಲಿಂಗವು ಮಳೆಗಾಳಿ ಬಿಸಿಲುಗಳಲ್ಲಿ ನೆರಳಿಲ್ಲದಿರುವುದನ್ನು ಕಂಡು ಮರುಗಿ ತನ್ನ ನೂಲಿನಿಂದ ಶಿವಲಿಂಗದ ಮೇಲೆ ದೇವಾಲಯದಂತೆ ಸುಂದರವಾಗಿ ಹೆಣೆಯುತ್ತಾನೆ. ಅವನ ಭಕ್ತಿ ಮತ್ತು ಕೌಶಲ್ಯಗಳಿಗೆ ಮರುಳಾದ ಶಿವನು ಅವನನ್ನು ಪರೀಕ್ಷಿಸಲು ಬೆಂಕಿಯನ್ನುಂಟುಮಾಡಿ ಅವನು ರಚಿಸಿದ್ದ ನೂಲಿನ ಆಲಯವನ್ನು ಸುಟ್ಟುಬಿಡುತ್ತಾನೆ. ಅತಿಯಾದ ದುಃಖದಿಂದ ಜೇಡನು ಪ್ರಲಾಪಿಸಲು ಶಿವನು ಪ್ರತ್ಯಕ್ಷನಾಗಿ ಏನು ವರಬೇಕು ಎಂದು ಕೇಳಲು ಜೇಡನು ಕೈವಲ್ಯ ಬೇಕು ಎನ್ನುವನು. ಶಿವನು ಅವನನ್ನು ತನ್ನಲ್ಲಿ ಐಕ್ಯ ಮಾಡಿಕೊಳ್ಳುವನು. ಅಂದಿನಿಂದ ಕಾಳಹಸ್ತೀಶ್ವರನಿಗೆ ಶ್ರೀಕಾಳಹಸ್ತೀಶ್ವರ ಎಂಬ ಹೆಸರಾಗುವುದು.

ಕೈಲಾಸದಲ್ಲಿ ಕಾಳನೆಂಬ ಸರ್ಪವು ಶಿವನ ಸೇವೆ ಮಾಡಿಕೊಂಡು ಅವನ ಪ್ರೀತಿಗೆ ಪಾತ್ರನಾಗಿದ್ದಿತು. ಒಂದು ದಿನ ಪಾತಾಳದಲ್ಲಿದ್ದ ತನ್ನಪ್ರಿಯೆಯನ್ನು ಕಾಣಲು ಹೋಗಿ ಮೈಮರೆತು ಮೂರನೆಯ ದಿನ ಶಿವನ ಸೇವೆಗೆ ತಡವಾಗಿ ಬರಲು, ಕೋಪಗೊಂಡ ಶಿವನು ಭೂಲೋಕದಲ್ಲಿನ ಗಜಾರಣ್ಯದಲ್ಲಿ ಹುಟ್ಟುವಂತೆ ಶಾಪವಿತ್ತನು. ಕಾಳನು ಪಾಶ್ಚಾತ್ತಾಪದಿಂದ ಕೂಡಿ, ಶಿವನ ಕೃಪೆಗೆ ಮತ್ತೆ ಪಾತ್ರನಾಗಬೇಕೆಂಬ ತವಕದಿಂದ ದಿನವೂ ಸ್ವರ್ಣಮುಖಿಯಲ್ಲಿ ಸ್ನಾನಮಾಡಿ ಮುತ್ತು ರತ್ನಗಳಿಂದ ಶಿವನನ್ನು ಪೂಜಿಸಿ, ಬಿಸಿಲು ಮಳೆ ಬೀಳದ ಹಾಗೆ ತನ್ನ ಹೆಡೆಯನ್ನು ತೆರೆದು ನೆರಳು ಹಿಡಿದು ರಾತ್ರಿಯ ವರೆಗೆ ಇದ್ದು ಹೋಗುತ್ತಿದ್ದನು.

ಕೈಲಾಸದಲ್ಲಿ ಹಸ್ತಿ ಎಂಬ ಶಿವಗಣದವನು ಒಬ್ಬನಿದ್ದನು. ಈತನು ಪರಮೇಶ್ವರನ ಆಪ್ತಸೇವಕ. ಒಂದು ದಿನ ಶಿವ ಪಾರ್ವತಿಯರು ಪ್ರಣಯದಲ್ಲಿದ್ದಾಗ ಈತನು ಅವರ ಶಯ್ಯಾಗೃಹವನ್ನು ಪ್ರವೇಶಿಸಿದನು. ಇದರಿಂದ ಕೋಪಗೊಂಡ ಪಾರ್ವತಿಯು ಭೂಲೋಕದ ಗಜಾರಣ್ಯದಲ್ಲಿ ಆನೆಯಾಗಿ ಹುಟ್ಟುವಂತೆ ಅವನನ್ನು ಶಪಿಸಿದಳು.

ಹಸ್ತಿಯು ಭೂಲೋಕದಲ್ಲಿ ಜನಿಸಿದರೂ ಪೂರ್ವಜನ್ಮದ ನೆನಪು ಇದ್ದಿತು. ಅವನು ಪ್ರತಿದಿನವೂ ಬ್ರಾಹ್ಮೀ ಮುಹೂರ್ತದಲ್ಲಿ ಸ್ವರ್ಣಮುಖಿ ನದಿಯಲ್ಲಿ ಸ್ನಾನಮಾಡಿ ತಾವರೆ ಹೂ, ಬಿಲ್ವ ಪತ್ರೆಗಳನ್ನು ತಂದು ಶಿವಲಿಂಗವನ್ನು ಪೂಜಿಸುತ್ತಿದ್ದನು.

ಕಾಳನು ಹಸ್ತಿಯು ಪೂಜಿಸಿದ ಹೂವು ಎಲೆಗಳನ್ನು ತೆಗೆದುಹಾಕಿ ಶುದ್ಧಗೊಳಿಸಿ, ಮಣಿರತ್ನಗಳಿಂದ ಶಿವಲಿಂಗವನ್ನು ಪೂಜಿಸುತ್ತಿದ್ದನು. ಒಂದುದಿನ ಕಾಳನು ಹೊಂಚು ಹಾಕಿ ನೋಡಿ ಆನೆಗೆ ತಕ್ಕ ಪಾಠ ಕಲಿಸಬೇಕೆಂದು ಬಗೆದು ಸಣ್ಣ ಆಕಾರ ಪಡೆದು ಆನೆಯ ಸೊಂಡಿಲಿನಲ್ಲಿ ಸೇರಿಕೊಂಡು ಬಾಧೆ ಉಂಟು ಮಾಡಿದನು. ಇಬ್ಬರಿಗೂ ಸೆಣಸಾಟವಾಯಿತು. ನೋವು ತಾಳಲಾರದೆ ಹಸ್ತಿಯು ಶಿವಲಿಂಗದ ಬಳಿ ಬಂದು ಶಿವಧ್ಯಾನ ಮಾಡುತ್ತ ಅಸು ನೀಗಿತು.

ಈಶ್ವರನು ಪ್ರತ್ಯಕ್ಷನಾಗಿ ಕಾಳ ಮತ್ತು ಹಸ್ತಿಯರನ್ನು ಕೈಲಾಸಕ್ಕೆ ಕರೆದೊಯ್ದನು. ಇವುಗಳ ಜ್ಞಾಪಕಾರ್ಥವಾಗಿ ಗಜಚರ್ಮಾಂಬರ ಧಾರಿಯಾದನು. ಕಾಳನನ್ನು ಕೊರಳಿನಲ್ಲಿ ಧರಿಸಿದನು. ಹೀಗೆ ಶ್ರೀಕಾಳಹಸ್ತೀಶ್ವರನೆಂದು ಹೆಸರಾಯಿತು.

ಗಜಾರಣ್ಯದಲ್ಲಿ ಬೇಡರ ಕುಲದ ನಾಯಕ ನಾಗಿ ಕಣ್ಣಪ್ಪನೆಂಬುವವನಿದ್ದನು. ಒಂದು ದಿನ ಈತನು ತನ್ನ ಪರಿವಾರ ಸಮೇತನಾಗಿ ಬೇಟೆಗೆ ಹೊರಟನು. ಬೇಟೆ ನಡೆದಿರುವಾಗ ಕಣ್ಣಪ್ಪನು ತನ್ನ ಪರಿವಾರದಿಂದ ಬೇರೆಯಾಗಿ, ಬೇಟೆ ಸಿಗದೆ ದಾರಿತಪ್ಪಿ ನಡೆಯುತ್ತ ನಾಗಲಿಂಗವಿದ್ದ ಕಡೆಗೆ ಬಂದನು. ಲಿಂಗದ ಬಳಿಯಿದ್ದ ಬಿಲ್ವದ ಮರವನ್ನೇರಿ ಬೇಟೆಗಾಗಿ ಕಾಯುತ್ತಿ ಕುಳಿತನು. ನಿದ್ದೆ ಬಾರದಾಯಿತು. ಬೇಸರ ನೀಗಲೆಂದು ಬಿಲ್ವದ ಮರದ ಎಲೆಗಳನ್ನು ಕಿತ್ತು ಲಿಂಗದ ಮೇಲೆ ಎಸೆಯ ತೊಡಗಿದನು. ನಂತರ ಬೆಳಗಾದಾಗ ಲಿಂಗದ ಮೇಲಿನ ಭಕ್ತಿಯಿಂದ ಸ್ವರ್ಣ ಮುಖಿನದಿಯಲ್ಲಿ ಸ್ನಾನ ಮಾಡಿ ಲಿಂಗಕ್ಕೆ ನೈವೇದ್ಯ ಮಾಡಿ ತಾನೂ ಪ್ರಸಾದ ಸ್ವೀಕರಿಸಿದನು. ಇದು ದೈನಂದಿನ ವ್ಯವಹಾರ ವಾಯಿತು. ಅಲ್ಲಿನ ಅರ್ಚಕರಿಗೆ ಈ ತಂತು ಸರಿಹೋಗಲಿಲ್ಲ. ಶಿವನು ಕಣ್ಣಪ್ಪ ನೀಡಿದ ನಿವೇದನೆಯನ್ನು ಸ್ವೀಕರಿಸುವನೇ ಎಂಬುದು ಅವರ ಪ್ರಶ್ನೆ. ಒಂದು ದಿನ ಕಣ್ಣಪ್ಪನು ನೈವೇದ್ಯ ನೀಡಿದಾಗ ಶಿವನು ಸ್ವೀಕರಿಸಲಿಲ್ಲ. ಬದಲಿಗೆ ಲಿಂಗದ ಕಣ್ಣಿನಿಂದ ನೀರು ಸುರಿಯ ಹತ್ತಿತು. ಮುಗ್ಧ ಭಕ್ತನು ಕಣ್ಣಪ್ಪ ತನ್ನ ಕಣ್ಣನು ಬಾಣದಿಂದ ಹೆಕ್ಕಿ ತೆಗೆದು ಲಿಂಗಕ್ಕೆ ಅರ್ಪಿಸಿದ. ಸುರಿಯುತ್ತಿದ್ದ ಕಣ್ಣೀರು ನಿಂತಿತಾದರೂ ಮತ್ತೊಂದು ಕಣ್ಣಿನಿಂದ ನೀರೂರಲು ಆರಂಭವಾಯಿತು. ಕಣ್ಣಪ್ಪನು ತನ್ನ ಮತ್ತೊಂದು ಕಣ್ಣನ್ನು ತೆಗೆದು ನಿವೇದಿಸಿದ. ಭಕ್ತಿಗೆ ಮೆಚ್ಚಿದ ಶಿವನು ಕಣ್ಣಪ್ಪನಿಗೆ ಮುಕ್ತಿಯನ್ನು ಪ್ರದಾನಿಸಿದ.

# ಸಪ್ತಗಿರಿ

## ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಲ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು. ತಮಿಳು, ಹಿಂದಿ, ಆಂಗ್ಲಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು,**
ಸಪ್ತಗಿರಿ,
ತಿ.ತಿ. ದೇವಸ್ಥಾನಗಳು, ತಿರುಪತಿ - 517507,
ಚಿತ್ತೂರು ಜಿಲ್ಲೆ, ಆಂ.ಪ್ರ.

ಕಣ್ಣಪ್ಪನು ಪೂರ್ವ ಜನ್ಮದಲ್ಲಿ ಪಾಂಡವರಲ್ಲನು ಅರ್ಜುನ. ಪಾಶುಪತಾಸ್ತ್ರಸಂಗ್ರಹದ ಮೊದಲು ಪಾರ್ಥನು ಶಿವನೊಡನೆ ಯುದ್ಧಮಾಡುತ್ತಾನೆ. ಅವನ ಪರಾಕ್ರಮ ಕಂಡು ಬೆರಗಾದ ಪಶುಪತಿಯು ಪಾಶುಪತಾಸ್ತ್ರ ನೀಡಿದ್ದೇ ಅಲ್ಲದೆ ಕಲಿಯುಗದಲ್ಲಿ ಅರ್ಜುನನು ಬೇಡರ ಕಣ್ಣಪ್ಪನಾಗಿ ಹುಟ್ಟಿದಾಗ ಮುಕ್ತಿಯನ್ನು ನೀಡುವುದಾಗಿ ಮಾತು ಕೊಟ್ಟಿದ್ದನೆಂದೂ ಪ್ರತೀತಿಯುಂಟು.

ಇಂತಹ ಪುರಾಣಪ್ರಸಿದ್ಧ ಕಾಳಹಸ್ತಿಯು ಚಿತ್ತೂರು ಜಿಲ್ಲೆಯಲ್ಲಿದೆ. ಕಾಳಹಸ್ತಿಗೆ ಹೋಗಲು ಚೆನ್ನೈ, ಗೂಡೂರು, ನೆಲ್ಲೂರು, ಕಡಪ, ಚಿತ್ತೂರು, ಬೆಂಗಳೂರು - ಮೊದಲಾದ ಕಡೆಗಳಿಂದ ಬಸ್‌ಗಳಿವೆ.

ಬಹಳ ಹಿಂದೆ ಪಲ್ಲವ ರಾಜರು ಕಾಳಹಸ್ತೀಶ್ವರ ದೇವಾಲಯ ನಿರ್ಮಾಣ ಮಾಡಿದರು. ನಂತರ ತೊಂಡಮಾನನು ದುರಸ್ತಿ ಗೊಳಿಸಿದ್ದೇ ಅಲ್ಲದೆ ವಿಸ್ತರಿಸಿದನು. ಕ್ರಿ.ಶ. 13 ನೇ ಶತಮಾನದಲ್ಲಿ ಚೋಳರ ಕಾಲದಲ್ಲಿ ಈ ದೇವಾಲಯದ ಮುಖ್ಯ ಭಾಗಗಳ ನಿರ್ಮಾಣವಾಯಿತು. ಯಾದವರಾಯನೆಂಬ ದೊರೆಯು ಹೊರಪ್ರಾಕಾರ ಹಾಗೂ ನಾಲ್ಕು ಗೋಪುರಗಳನ್ನು ನಿರ್ಮಿಸಿದನು. ಕ್ರಿ.ಶ. 1516 ರಲ್ಲಿ ವಿಜಯನಗರದ ರಾಜ ಕೃಷ್ಣದೇವರಾಯನು 120 ಅಡಿ ಎತ್ತರದ ಗೋಪುರವನ್ನೂ, ಸಾವಿರಕಾಲು ಮಂಟಪವನ್ನೂ ಕಟ್ಟಿಸಿದನು. ನಂತರದ ರಾಜ ಅಚ್ಯುತರಾಯನು ಕ್ರಿ.ಶ. 1529 ರಲ್ಲಿ ಕಾಳಹಸ್ತಿಯ ಸನ್ನಿಧಿಯಲ್ಲಿ ಪಟ್ಟಾಭಿಷೇಕ ಮಾಡಿಸಿಕೊಂಡನು. ಈತನು ಆಲಯವನ್ನು ಅಭಿವೃದ್ಧಿ ಪಡಿಸಿದನು. ಕ್ರಿ.ಶ. 1912 ರಲ್ಲಿ ದೇವಕೋಟೆಯ ನಟ್ಟುಕೋಟೈ ಚೆಟ್ಟಿಯಾರ್ ತನ್ನ ಸ್ವಂತ ಸಂಪತ್ತಿನಲ್ಲಿ ಒಂಭತ್ತು ಲಕ್ಷ ರೂಪಾಯಿಗಳನ್ನು ವೆಚ್ಚಮಾಡಿ ಕಾಳಹಸ್ತಿ ದೇವಾಲಯದ ಜೀರ್ಣೋದ್ಧಾರ ಮಾಡಿದನು.

ಶಂಕರಾಚಾರ್ಯರು ತಮ್ಮ ಶಿವಾನಂದ ಲಹರಿಯಲ್ಲಿ ಬೇಡರ ಕಣ್ಣಪ್ಪನ ಬಗ್ಗೆ ಹೇಳಿದ್ದಾರೆ. ಕಾಳಹಸ್ತಿ ಕ್ಷೇತ್ರಕ್ಕೆ ಆಗಮಿಸಿದ್ದ ಶಂಕರಾಚಾರ್ಯರು ''ಜ್ಞಾನ ಪ್ರಸೂನಾಂಬಿಕಾ'' ದೇವಾಲಯದಲ್ಲಿ ಶ್ರೀಚಕ್ರ ಪ್ರತಿಷ್ಠಾಪನೆ ಮಾಡಿದ್ದಾರೆ. ಕಾಳಹಸ್ತಿ ದೇವಾಲಯದಲ್ಲಿ ಸ್ಫಟಿಕ ಲಿಂಗವನ್ನೂ ಪ್ರತಿಷ್ಠಾಪನೆ ಮಾಡಿರುವರು.

ತೆಲುಗಿನಲ್ಲಿ ಶ್ರೀಕಾಳಹಸ್ತೀಶ್ವರ ಶತಕಮು - ಶತಕ ಕಾವ್ಯವನ್ನು ಬರೆದ ಮಹಾಕವಿ ಧೂರ್ಜಟಿ - ಸ್ಥಳದ ಮಹಾತ್ಮೆಯನ್ನು ಕೊಂಡಾಡಿದ್ದಾನೆ. ರಾಮಲಿಂಗಸ್ವಾಮಿಗಳೂ, ಪಟ್ಟಿನತ್ತಾರರೂ ತಮ್ಮ ಹಾಡುಗಳಲ್ಲಿ ಕಾಳಹಸ್ತಿಯನ್ನು ಬಗೆ ಬಗೆಯಾಗಿ ವರ್ಣಿಸಿದ್ದಾರೆ. ತಮಿಳಿನ ಪುರಾತನರಲ್ಲಿ ಹೆಸರಾದ ನಾಯನ್ಮಾರರು - ಸಂಬಂಧರ್, ಮಾಣಿಕ್ಯವಾಚಕರ್ ಸುಂದರರ್, ಅಪ್ಪರ್ ಅವರು ತಮ್ಮ ತೇವಾರಗಳಲ್ಲಿ ಸ್ವಾಮಿಯ ದಿವ್ಯದರ್ಶನವನ್ನು ಕುರಿತು ಹೇಳಿದ್ದಾರೆ.

ಕ್ರಿ.ಪೂ. 3 ನೇ ಶತಮಾನದಲ್ಲಿದ್ದ ಪಾಂಡ್ಯರಾಜ್ಯದಲ್ಲಿದ್ದ ಕವಿ ನಕ್ಕೀರಾರ್ ತಮಿಳಿನಲ್ಲಿ ಕಾಳಹಸ್ತೀಶ್ವರನನ್ನು ಕುರಿತು ನೂರು ಹಾಡುಗಳನ್ನು ಬರೆದಿದ್ದಾನೆ.

ಕಾಳಹಸ್ತೀಶ್ವರ [illegible]ದಲ್ಲಿ ಆಗಮೋಕ್ತ ಅರ್ಚನೆ [illegible] ಬೆಳಗಿನಿಂದ ಸಂಜೆಯವರೆಗೆ ನಡೆಯುತ್ತವೆ. ಪ್ರತಿದಿನವೂ ಪಂಚಕಾಲ ಅಭಿಷೇಕವನ್ನು ಆಗಮೋಕ್ತವಾಗಿ ಮಾಡುವರು.

ನಾಗಲಿಂಗಕ್ಕೆ ಮಹಾಶಿವರಾತ್ರಿಯ ಸಮಯದಲ್ಲಿ ಬ್ರಹ್ಮೋತ್ಸವ ನಡೆಯುತ್ತದೆ. ನವರಾತ್ರಿಯ ಸಮಯದಲ್ಲಿ ಜ್ಞಾನ ಪ್ರಸೂನಾಂಬಿಕೆಯ ಉತ್ಸವಗಳು ನಡೆಯುವುವು.

ಸಂಕ್ರಾಂತಿ ಹಾಗೂ ಮಹಾಶಿವರಾತ್ರಿ ಸಂದರ್ಭಗಳಲ್ಲಿ ಇಲ್ಲಿ ಗಿರಿಪ್ರದಕ್ಷಿಣೆ ಉತ್ಸವವು ನಡೆಯುತ್ತವೆ.

ಸ್ವರ್ಣಮುಖಿ ನದಿಯಲ್ಲಿ ಸ್ನಾನಮಾಡಿ ಶ್ರೀಕಾಳಹಸ್ತೀಶ್ವರ ಮತ್ತು ಜ್ಞಾನ ಪ್ರಸೂನಾಂಬಿಕಾ ಅಮ್ಮನವರ ದರ್ಶನ ಪೂಜೆ ಮಾಡಿದವರಿಗೆ ಸುಖ, ಶಾಂತಿ, ಸಂಪತ್ತು, ಸಂತೋಷ ಸಮೃದ್ಧಿ ಪ್ರಾಪ್ತವಾಗುವುವೆಂದು ಪುರಾಣ ಇತಿಹಾಸಗಳು ಹೇಳುತ್ತವೆ. ಲಕ್ಷೋಪಲಕ್ಷ ಭಕ್ತರು ಶ್ರೀಕಾಳಹಸ್ತೀಶ್ವರನ ದರ್ಶನವನ್ನು ಪ್ರತಿದಿನ ವಾರ ಮಾಸ ವರ್ಷಗಳಲ್ಲಿ ಪಡೆಯುತ್ತಿದ್ದಾರೆ.

★★★★★

# ಭಕ್ತಿಮಾರ್ಗ ಪ್ರಸಾರದ - ಶ್ರೀ ವ್ಯಾಸರಾಜರು

- ಹಣಮಂತ ತಾಸಗಾಂವಕರ.

ಸ್ಮರಿಸೈ ಸತತವು ಸಂಸ್ಮರಿಸೈ ಸತತವು
ಯತಿಗಣ ಭೂಷಣ ವ್ಯಾಸಯತೀಂದ್ರರ

ವಿಜಯನಗರ ಸಾಮ್ರಾಟರುಗಳ ಮುಕುಟಗಳಲ್ಲಿಯ ನವರತ್ನ ಕಾಂತಿಯಿಂದ ಪ್ರಕಾಶಗೊಂಡ ಪಾದತಲವುಳ್ಳವರಾದ ವ್ಯಾಸರಾಜರು ಸರ್ವಶಾಸ್ತ್ರಪಾರಂಗತರು. ವಿಷ್ಣು ಸಂಹಿತೆ ಎಂದೇ ಗಣಿಸಲ್ಪಟ್ಟ ಶ್ರೇಷ್ಠ ಗ್ರಂಥ ರಚನಾಕಾರರು. ತಾರ್ಕಿಕಾಗ್ರೇಸರುಗಳನ್ನೆಲ್ಲ ವಾಕ್ಯಾರ್ಥದಲ್ಲಿ ಸೋಲಿಸಿ ಮಧ್ವಮುನಿತ್ರಯರಲ್ಲಿಯ ಚಿಂತಾಮಣಿ ಸ್ವರೂಪರು.

ದಾಸಸಾಹಿತ್ಯ ಪರಂಪರೆಯನ್ನು ಬೆಳೆಸಿದವರು. ಮುನ್ನಡೆಸಿದವರು. ಸಂಘಟಕರು. ನಿರ್ಮಾತರು. ಪುರಂದರ ಕನಕ ದಾಸರಂಥವರ ಮಾರ್ಗದರ್ಶಿಗಳು. ''ಸಾಸಿರ ಜಿಹ್ವೆಗಳುಳ್ಳ ಶೇಷನೇ ಕೊಂಡಾಡಬೇಕು ವ್ಯಾಸ ಮುನಿರಾಯರ ಸನ್ಯಾಸದಿರವ'' ಎಂದು ಹೃದಯಂಗಮವಾಗಿ ಸ್ತುತಿಸಿರುವರು.

**ವಾಕ್‌ಸಿದ್ಧಿಯ ಬ್ರಹ್ಮಣ್ಯತೀರ್ಥಗುರು**

ವ್ಯಾಸರಾಜರ ಜನನವೂ ಕೂಡ ಕೌತುಕದ್ದೇ. ಮೈಸೂರು ಸೀಮೆಯ ಕಾವೇರಿ ತೀರದ ಒಂದು ಗ್ರಾಮ ಬನ್ನೂರು. ಈ ಗ್ರಾಮದ ಕಾಶ್ಯಪ ಗೋತ್ರದ ಸದಾಚಾರಿ ಬ್ರಾಹ್ಮಣ ರಾಮಾಚಾರ್ಯರು. ಅನುಕೂಲೆ, ಸುಶೀಲೆಯಾದ ಮಡದಿ ಲಕ್ಷ್ಮಿಬಾಯಿ. ಪಾಠಪ್ರವಚನ ಹೋಮಹವನಾದಿಗಳಿಂದ, ದಾನಧರ್ಮಗಳಿಂದ ಪುಣ್ಯಕಾರ್ಯ ಕೈಕೊಳ್ಳುತ್ತ ವಿಪ್ರಜೀವನವನ್ನು ಸಾರ್ಥಕಮಾಡಿಕೊಳ್ಳುತ್ತಿದ್ದರು. ಆದರೆ ಇವರಿಗೆ ಮಕ್ಕಳಿಲ್ಲದ ಕೊರಗು, ವಯಸ್ಸು ಕಳೆಯುತ್ತಿತ್ತು. ಅನ್ಯೋನ್ಯವಾಗಿದ್ದ ದಂಪತಿಗಳು ಪ್ರತಿ ನಿತ್ಯ ಅಲ್ಲಿಯ ದೇವಾಲಯ ಪ್ರಾಂಗಣದಲ್ಲಿಯ, ಮಹರ್ಷಿ ಬ್ರಹ್ಮಣ್ಯತೀರ್ಥರ ಪ್ರವಚನಕ್ಕೆ ಹೋಗುತ್ತಿದ್ದರು.

ಹೀಗಿರುತ್ತಿರಲಾಗಿ ಒಂದು ದಿನ ಪತಿ ರಾಮಾಚಾರ್ಯರು ಮರಣ ಹೊಂದಿದರು. ಸಾಧ್ವಿ ಲಕ್ಷ್ಮೀಬಾಯಿ ಅತ್ತೂ ಕರೆದು ಹೈರಾಣಾಗಿ ಪತಿಯೊಡನೆ ತಾನೂ ಸಹಗಮನ ಕೈಕೊಳ್ಳುವುದಾಗಿ ನಿಶ್ಚಯಿಸಿ ನೆರೆದ ಹಿರಿಯರನ್ನು ಕೇಳಿದಳು. ಅವರು ಮಹರ್ಷಿಗಳತ್ತ ದಾರಿ ತೋರಿದರು. ಏನೂ ಅರಿಯದ ಸಾತ್ವಿಕಳಾದ ಹೆಂಡತಿ ಲಕ್ಷ್ಮಿಬಾಯಿ - ಮಹರ್ಷಿ





ಬ್ರಹ್ಮಣ್ಯತೀರ್ಥರಿಗೆ ಸಾಷ್ಟಾಂಗವೆರಗಿದಳು. ಧ್ಯಾನಲೋಕದಲ್ಲೇ ಮೈಮರೆತಿದ್ದ ಮಹರ್ಷಿಗಳು, ಸಹಜವಾಗಿ ''ದೀರ್ಘಸುಮಂಗಲೀಭವ'' ಎಂದು ಬಿಟ್ಟರು. ಅವರ ಆಶೀರ್ವಾದದಿಂದ ಚಕಿತಳಾದ ಮಹಿಳೆ, ಸ್ವಾಮೀ ನಾನು ಸಹಗಮನಕ್ಕೆ ಹೊರಟಿರುವೆ ಎಂದಳು - ಅತಿ ದುಃಖಿತಳಾಗಿ. ಅಂತಃಕರುಣೆ, ವಾತ್ಸಲ್ಯಭರಿತದಿಂದ ಶ್ರೀಗಳು - ನನ್ನ ಬಾಯಿಂದ ಆ ನಮ್ಮ ಸ್ವಾಮಿಯು ಹೀಗೆ ನುಡಿಸಿದ್ದಾನೆ. ನಡೆ ನೋಡೋಣವೆಂದು ಬಿರ ಬಿರನೆ ನಡೆದರು. ನೆರೆದ ಜನತೆಗೆಲ್ಲಾ ಕೌತುಕ, ಶವದರ್ಶನ ಸನ್ಯಾಸಿಗಳಿಗೆ ನಿಷಿದ್ಧ. ಆದರೂ ಸ್ವಾಮಿಯಾಜ್ಞೆ, ಶವ ವಾಹಕರನ್ನು ಕೂಗಿ ನಿಲ್ಲಿಸಿದರು.

ಸಂಜೀವಿನಿಯ ಸ್ತುತಿ ಮಾಡುತ್ತ ಕಮಂಡಲೊಳಗಿನ ತೀರ್ಥೋದಕ ಸಿಂಪಡಿಸಿದರು. ಜನರೆಲ್ಲ ಉಸಿರು ಬಿಗಿ ಹಿಡಿದು ನೋಡುತ್ತಿದ್ದಂತೆಯೇ ಆಶ್ಚರ್ಯಕರ ಘಟನೆ ಜರುಗಿತು. ಶವವಾಗಿದ್ದ ರಾಮಾಚಾರ್ಯರು ನಿದ್ರೆಯಿಂದ ಎದ್ದಂತೆ ಎಚ್ಚರಗೊಂಡವರಾಗಿ ಸುತ್ತೆಲ್ಲ ಕಣ್ಣಾಡಿಸಿದರು. ಪರಿಸ್ಥಿತಿಯ ಅರ್ಥವಾಗಿ ಎದುರಿಗಿದ್ದ ಬ್ರಹ್ಮಣ್ಯತೀರ್ಥರಿಗೆ ವಂದಿಸಿದರು. ಅತಿ ಸಂತೋಷಗೊಂಡ ಪತ್ನಿ ಲಕ್ಷ್ಮೀ ಬಾಯಿಯೂ ಶ್ರೀಗಳ ಕಾಲುಗಳನ್ನು ಗಟ್ಟಿಯಾಗಿ ಹಿಡಿದು, ಆನಂದ ಭಾಷ್ಪ ಸುರಿಸಿದಳು. ಪತಿ - ಪತ್ನಿಯರು ಶ್ರೀಗಳನ್ನು ಪ್ರತ್ಯಕ್ಷದೇವರಂತೆ ಕಂಡು ಅವರ ಪಾದಗಳಲ್ಲಿ ಹೊರಳಾಡಿದರು. ವಾತ್ಸಲ್ಯದಿಂದ ಶ್ರೀಗಳು ಅವರನ್ನು ಆಶೀರ್ವದಿಸುತ್ತ, ದಿಗ್ಗಜರಾದ ಸುಪುತ್ರರನ್ನು ಪಡೆಯುವಿರಿ, ಎಂದು ಮೈದಡವಿ ಎಬ್ಬಿಸಿದರು. ಶ್ರೀ ಶ್ರೀಗಳ ಹರಕೆ ಹುಸಿಯಾಗುವುದೇ. ಕಾಲಾನಂತರ ಜನಿಸಿದವರೇ, ಬ್ರಹ್ಮಣ್ಯತೀರ್ಥರ ಅನುಗ್ರಹ ಹೊಂದಿದ ವ್ಯಾಸರಾಜರು. ಇವರು 22 ರ ಏಪ್ರಿಲ್ 1447 ರಂದು ಜನಿಸಿದರು. ಅತ್ಯಂತ ಸುಂದರ, ಏಕಪಾಠಿ. ಸೂಕ್ಷ್ಮಗ್ರಾಹಿಯಾಗಿದ್ದ ಬಾಲ ವ್ಯಾಸರು ಉಪನೀತರಾಗಿ ಬ್ರಹ್ಮವರ್ಚಸ್ಸಿನಿಂದ ಕಂಗೊಳಿಸ ಹತ್ತಿದರು. ಅಂದಿನ ಪದ್ಧತಿಯಂತೆ ಶಿಕ್ಷಣಕ್ಕಾಗಿ ಗುರುಕುಲವಾಸಗೈದರು.

ಸರ್ವ ಶಾಸ್ತ್ರಗಳನ್ನೂ ಕರತಲಾಮಕ ಮಾಡಿಕೊಂಡು ವಿದ್ಯಾಸಂಪನ್ನರಾದರು. ಇವರ ಏಳ್ಗೆಯನ್ನು ಗಮನಿಸುತ್ತಿದ್ದ ಬ್ರಹ್ಮಣ್ಯತೀರ್ಥರು ವ್ಯಾಸರಾಜರನ್ನು ಮಾತಿನಂತೆ ತಮಗೊಪ್ಪಿಸಲು, ಬನ್ನೂರಲ್ಲಿಯ ಅವರ ಮಾತಾಪಿತೃಗಳನ್ನು ಆಮಂತ್ರಿಸಿದರು. ವಿದ್ಯಾವಿನಯ, ಗಾಂಭೀರ್ಯ, ವಟು ವಾಮನ ಮೂರ್ತಿಯನ್ನು ಪ್ರೇಮ ಪೂರ್ವಕ ಆಶೀರ್ವದಿಸಿದರು. ಪರಮಹಂಸ ಲಕ್ಷಣವಾದ ಚತುರ್ಥಾಶ್ರಮವನ್ನು ವಿಧಿಪೂರ್ವಕ ನೆರವೇರಿಸಿದರು. ವ್ಯಾಸತೀರ್ಥರೆಂದು ನಾಮಕರಣ ಮಾಡಿದರು. ಮಹಾಮಂತ್ರಗಳನ್ನು ಉಪದೇಶಿಸಿದರು. ವೇದಾಂತ ಸಾಮ್ರಾಜ್ಯ ಪಟ್ಟಾಭಿಷಿಕ್ತರನ್ನಾಗಿಸಿದರು. ಶಾಸ್ತ್ರ ವ್ಯಾಸಂಗ, ದೇಶಪರ್ಯಟನೆ, ಪ್ರಾರಂಭಿಸಿದರು. ಗುರ್ವಾಜ್ಞೆಯಂತೆ ವ್ಯಾಸರಾಜರು ಮುಳಬಾಗಿಲಿನ ಶ್ರೀಪಾದರಾಜರಲ್ಲಿ ಅಧ್ಯಯನ ಆರಂಭಿಸಿದರು. ಕಠಿಣತರ ಷಡ್ದರ್ಶನಗಳನ್ನು ಲೀಲಾಜಾಲವಾಗಿ ಅಭ್ಯಸಿಸಿದರು.

ಧರ್ಮಪ್ರಚಾರಾರ್ಥ ಶಿವಕಂಚಿ ವಿಷ್ಣುಕಂಚಿ ಸಂಚರಿಸಿದರು. ಮಧ್ವಸಿದ್ಧಾಂತವನ್ನು ಪ್ರತಿಪಾದಿಸಿದರು. ವಿಖ್ಯಾತರಾದ ವ್ಯಾಸತೀರ್ಥರನ್ನು ಹಲವು ರಾಜರು ವೇದಘೋಷ ಪೂರ್ಣಕುಂಭಗಳೊಂದಿಗೆ ಮರ್ಯಾದೆ ಮಾಡಿದರು. ಶ್ರೀಪಾದರಾಜರಲ್ಲಿ ವ್ಯಾಸಂಗ ಗೈಯ್ಯುತ್ತಿದ್ದಾಗ ವ್ಯಾಸತೀರ್ಥರು ಗುರುಗಳಲ್ಲಿಟ್ಟ ಅಪೂರ್ವ ಗುರುಭಕ್ತಿ, ಅಂತೇ ಗುರುಗಳಾದ ಶ್ರೀಪಾದರಾಜರ ಶಿಷ್ಯ ವಾತ್ಸಲ್ಯಗಳು ಅನ್ಯೋನ್ಯವಾಗಿದ್ದವು. ಅದನ್ನೇ ವ್ಯಾಸತೀರ್ಥರು ಹೀಗೆ ಬಣ್ಣಿಸಿದ್ದಾರೆ -

ವಾದಿಗಜ ಮಸ್ತಕಾಂಕುಶ
ಸುಜನ ಬುಧಗೇಯ
ಮೇದಿನೀ ಸುರವಂದ್ಯ
ಶ್ರೀಪಾದರಾಯ
ಸಕಲ ಶಾಸ್ತ್ರಕಲಾಪ ಸನ್ಯಾಸಕುಲದೀಪ
ಸಕಲ ಸತ್ಯಸ್ಥಾಪ ಸುಜ್ಞಾನ ದೀಪ

ಜಗತ್ಕಲ್ಯಾಣಾರ್ಥವೇ ಜನಿಸಿ, ಶ್ರೀಪಾದ ರಾಜರಿಂದ ತ್ರಿಲೋಕವಂದಿತರೆಂದು ಅನುಗ್ರಹಗೊಂಡ ವ್ಯಾಸತೀರ್ಥರಿಗೆ ಆಶ್ರಮಗುರುಗಳಾದ ಬ್ರಹ್ಮಣ್ಯತೀರ್ಥರು ಮಂಗಳ ಮುಹೂರ್ತದಲ್ಲಿ ಸಮಸ್ತ ಸನ್ಮಾನದಿಂದ ಪಟ್ಟಾಭಿಷೇಕ ಮಹೋತ್ಸವ ವೈಭವದಿಂದ ನೆರವೇರಿಸಿ, ವ್ಯಾಸರಾಜರೆಂದು ಅಭಿಧಾನದಿಂದ ಆಶೀರ್ವದಿಸಿ ಸಂಸ್ಥಾನದ ಮಹಾಧಿಪತಿಗಳೆಂದು ನಿಯಮಿಸಿ ಗೌರವಿಸಿದರು.

**ಸಂಚಾರ :**

ವ್ಯಾಸರಾಜರು ಕನ್ಯಾಕುಮಾರಿಯಿಂದ ಹಿಮಾಲಯ ಪರ್ವತದವರೆಗೂ ಸಂಚಾರಗೈದರು. ವಿದ್ಯೆ ಹಾಗೂ ಧರ್ಮವನ್ನು ವ್ಯಾಪಕವಾಗಿ ಪ್ರಚಾರ ಕೈಗೊಳ್ಳಲು ವಿದ್ಯಾಮಂದಿರಗಳನ್ನು ನಿರ್ಮಿಸಿದರು. ಪ್ರತಿವಾದಿಗಳನ್ನು ಜಯಿಸಿ, ಅವರ ವಿದ್ವತ್ತಿಗೆ ಮನ್ನಣೆ ಮರ್ಯಾದೆ ಗೈಯ್ಯುತ್ತಿದ್ದರು. ವೇದಾಂತವಿದ್ಯಾಪ್ರಸಾರಣಕ್ಕೆಂದೇ ದೇಶಾದ್ಯಂತ ಎಂಟು ವಿದ್ಯಾಪೀಠಗಳನ್ನು ಸ್ಥಾಪಿಸಿದರು. ಇವುಗಳಿಗೆ ಉಪಕುಲಪತಿಗಳನ್ನಾಗಿ - ಹರಿದ್ವಾರದಲ್ಲಿ ಸತ್ಯನಾಥರನ್ನು, ಗಯಾದಲ್ಲಿ ಹರಿ ಮಿಶ್ರರನ್ನು, ಕಾಶಿಯಲ್ಲಿ ಜಯದೇವರನ್ನು, ಬಂಗಾಲದಲ್ಲಿ ಈಶ್ವರ ಸೂರಿಯನ್ನು ಕುಂಭಕೋಣದಲ್ಲಿ ವಿಜಯೀಂದ್ರರನ್ನು, ಉಡುಪಿಯಲ್ಲಿ ವಾದಿರಾಜರನ್ನು, ಮುಳ ಬಾಗಿಲಲ್ಲಿ ಪ್ರಜ್ಞಾನಿಧಿಗಳನ್ನು, ಕಂಚಿಯಲ್ಲಿ ಶ್ರೀನಿವಾಸತೀರ್ಥರನ್ನು, ನಿಯಮಿಸಿದ್ದರೂ ಇವೆಲ್ಲ ವುಗಳಿಗೆ ವಿಜಯನಗರದ ಕೇಂದ್ರ ವಿಶ್ವವಿದ್ಯಾಲಯ ಮಾರ್ಗದರ್ಶಿಯಾಗಿದ್ದು, ವ್ಯಾಸರಾಜರೇ ಇದಕ್ಕೆ ಕುಲಪತಿಗಳಾಗಿದ್ದರು.

ದೇಶದಾದ್ಯಂತ - ಏಳುನೂರಾ ಮೂವತ್ತೆರಡು ಸ್ಥಳಗಳಲ್ಲಿ ಪ್ರಾಣದೇವರ ಪ್ರತಿಷ್ಠೆಮಾಡಿದರು. ತಿರುಪತಿಯಲ್ಲಿ ಹನ್ನೆರಡು ವರ್ಷಗಳಕಾಲ ಶ್ರೀನಿವಾಸನ ಉಪಾಸನೆ ಕೈಕೊಂಡು ದೇವಸ್ಥಾನದ ಆಡಳಿತದಲ್ಲಿ ಅದ್ಭುತ ಸುಧಾರಣೆ ಮಾಡಿದರು.

**ವಿಜಯನಗರ ಸಾಮ್ರಾಜ್ಯದ ರಾಜಗುರು :**

ವ್ಯಾಸರಾಜರು ವಿಜಯನಗರ ಸಾಮ್ರಾಜ್ಯದ ಧರ್ಮಗುರುಗಳಾಗಿದ್ದರು. ಹಿಂದೂ

ಸಾಮ್ರಾಜ್ಯದ ಧಾರ್ಮಿಕ ಸಂರಕ್ಷಣೆ, ಪುನರುತ್ಥಾನದಂಥ ಮಹಾಕಾರ್ಯಗಳ ಹೊಣೆ ಇವರ ಮೇಲಿತ್ತು. ಪಂಡಿತ ಪ್ರಪಂಚದ ಪ್ರಚಂಡ ಶಕ್ತಿ, ಕರ್ನಾಟಕ ರತ್ನ ಸಿಂಹಾಸನಾಧೀಶ್ವರ ವಿಜಯನಗರದವರ ರಾಜದರ್ಬಾರಿನಲ್ಲಿ, ಅಪರೋಕ್ಷಜ್ಞಾನಿಗಳಾದ ವ್ಯಾಸರಾಜರಿಗೆ - ''ವಿಜಯನಗರಾಖ್ಯ ಕರ್ನಾಟಕ ಸಾಮ್ರಾಜ್ಯ ಷಟ್ ಚಕ್ರವರ್ತಿ ಘೋಷಕ''ವೆಂಬ ಪರಾಕಿತ್ತು. ಕ್ರಿ.ಶ. 1527 ರ ನವೆಂಬರ ಐದರ ಶಾಸನದಲ್ಲಿ ಶ್ರೀಕೃಷ್ಣದೇವರಾಯ ವ್ಯಾಸರಾಜರ ಕುರಿತಾಗಿ ಹೀಗೆ ಬರೆಸಿದ್ದಾನೆ-

ನಿಗಮಾಗಮ ನಿರ್ಣೀತ
ನಿರ್ಜರಾಧೀಶ ಮಂತ್ರಿಣೇ
ನೃಪೇಂದ್ರ ಮಕುಟೀರತ್ನ
ನೀರಾಜಿತ - ನಿಜಾಂಘ್ರಯೇ
ನಿರಹಂಕಾರ ಚಿತ್ತಾಯ
ನೀತಿ ಮಾರ್ಗೋಪದೇಶಿನೇ
ಶೇಷಾಯ ನರಶೇಷಾಯ
ಶಿಕ್ಷಿತಾಂತಕ ವೈರಿಣೇ
ಪುರಾಣಪುರುಷ ಧ್ಯಾನ
ಪುಷ್ಪತ್ಪುಲಕ ಮೂರ್ತಯೇ
ಬ್ರಹ್ಮಣ್ಯತೀರ್ಥ ಶಿಷ್ಯಾಯ
ಬ್ರಹ್ಮ ನಿರ್ಮಲ ಮೂರ್ತಯೇ
ವ್ಯಾಸ ತೀರ್ಥ ಯತೀಂದ್ರಾಯ
ವಿದ್ವದಿಂದೀವರೇಂಗವೇ

ಇದರಿಂದ ಇವರ ಸಮಗ್ರ ವ್ಯಕ್ತಿತ್ವದ ಅರಿವಾಗುತ್ತದೆ.

ಕೃಷ್ಣದೇವರಾಯನ ತಂದೆ ಸಾಮ್ರಾಟ ನರಸಾನಾಯಕನು ಪ್ರತಿನಿತ್ಯವೂ ವ್ಯಾಸರಾಜ ರಿಂದ ರಾಜ್ಯಾಡಳಿತದ ಬಗ್ಗೆ ಸಲಹೆ - ಆಜ್ಞೆಗಳನ್ನು ಪಡೆಯುತ್ತಿದ್ದ. ಅಂತೇ ಪ್ರಜೆಗಳೂ ಕೂಡ ಇವರಲ್ಲಿ ಅಪಾರ ವಿಶ್ವಾಸ ಹೊಂದಿದ್ದರು.

ಕ್ರಿ.ಶ. 1520 ರಲ್ಲಿ ವಿಜಯನಗರದ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ಕನಕ ರತ್ನಾಭಿಷೇಕ ಮಾಡಿ ಗೌರವಿಸಿದ್ದರು. ಕೃಷ್ಣದೇವರಾಯನಿಗೆ ಬಂದಿದ್ದ ಕುಹುಯೋಗ ಸಂಕಟವನ್ನು ನಿವಾರಿಸಿದ ವ್ಯಾಸರಾಜರನ್ನು ರತ್ನಾಭರಣಗಳಿಂದ ತೂಗಿ, ಅನೇಕ ಭೂಮಿ - ಗ್ರಾಮಗಳನ್ನು ದಾನವಿತ್ತನು.

ವ್ಯಾಸರಾಜರು ವಿದ್ವಾಂಸರು, ಪಂಡಿತರು, ಕಲಾಕಾರರಿಗೆ ನೀಡಿದ ದತ್ತಿದಾನ ಪ್ರಶಸ್ತಿಗಳ ವರ್ಣನೆಯನ್ನು ಅದ್ಭುತವಾಗಿ ಸೋಮನಾಥ ಕವಿಯು ಬಣ್ಣಿಸಿದ್ದಾನೆ.

**ದಾಸಕೂಟ :**

ವ್ಯಾಸಕೂಟ - ದಾಸಕೂಟ ಎರಡನ್ನೂ ಉನ್ನತಕ್ಕೆ ಒಯ್ದ ಅಗಾಧ ಪಾಂಡಿತ್ಯ, ಅಪಾರಭಕ್ತಿ ಯತಿವರ್ಯರಿಗೆ ವಿದ್ಯಾಗುರುವಾಗಿದ್ದ ವ್ಯಾಸರಾಜರು, ಕನ್ನಡದ ಕೀರ್ತನೆಗಳಿಗೂ ದಾಸಸಾಹಿತ್ಯವೆಂದು ಮನ್ನಿಸಿ, ಗೌರವಿಸಿ ಭಕ್ತಿ ಪಂಥ ನಿರ್ಮಾಣಮಾಡಿದರು.

ಸಾರಸ್ವತ ಪ್ರಪಂಚಕ್ಕೆ ರತ್ನತ್ರಯವೆನ್ನಿಸಿದ, ''ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ'' ರಚಿಸಿದ ವಿದ್ಯಾವಿಶಾರದರು, ಕನ್ನಡದಲ್ಲೂ ಪದಪದ್ಯರಚಿಸಿದವರು. ವೃತ್ತ ನಾಮದ ಹೊಸ ಸಂಪ್ರದಾಯವನ್ನು ದಾಸಸಾಹಿತ್ಯದಲ್ಲಿ ಅಳವಡಿಸಿದರು.

ಶಾಸನವೊಂದರಲ್ಲಿ ಇವರನ್ನು ಕುರಿತಾಗಿ ಹೀಗಿದೆ -

''ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ಪದವಾಕ್ಯ ಪ್ರಮಾಣ, ದುರ್ವಾದಿ ಗರ್ವ ಸರ್ವಸ್ವಾಪಹಾರ, ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ, ಸಕಲ ವಿದ್ವಜ್ಜನ ಮನಃ ಪದ್ಮವನ ಸೌಪಸ್ತಿಕ ಶ್ರೀಮದ್ ವ್ಯಾಸತೀರ್ಥ ಶ್ರೀಪಾದ ಒಡೆಯರು'' ಎಂದು ಗೌರವದಿಂದ ಕೊಂಡಾಡಿದ್ದಾರೆ.

ವಾದಿರಾಜರು, ಪುರಂದರದಾಸರು, ಕನಕದಾಸರು ಮೊದಲಾದ ದಾಸವರೇಣ್ಯರಿಗೆ ಪ್ರೇರಕಶಕ್ತಿಯಾಗಿ ನಿಂತು ದಾಸಕೂಟವನ್ನೂ ಬೆಳಗಿದಂಥವರು. ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಭಕ್ತಿರಸಭರಿತ ಕೀರ್ತನೆಗಳನ್ನು ರಚಿಸಿದರು. ಇವರ ಕೃತಿಗಳಲ್ಲಿ ಭಕ್ತನ ಆರ್ತತೆ, ನಿವೇದನೆ. ಆತ್ಮಶೋಧನೆ, ಪಶ್ಚಾತ್ತಾಪ ತಳಮಳಗಳು ಮೇಳೈಸಿವೆ. 'ನರನಾದ ಮೇಲೆ ಹರಿನಾಮ ಜಿಹ್ವೆಯೊಳಿರಬೇಕು' ಎಂದು ಹೇಳುತ್ತ -

ಶಾಂತಿ ಶಮೆದಮೆ ಹಿಡಿಯಲುಬೇಕು
ಭ್ರಾಂತಿ ಕ್ರೋಧವ ಕಳೆಯಲು ಬೇಕು
ಸಂತತ ಸನ್ಮಾರ್ಗದಲಿರಬೇಕು

ಎಂದಿರುವರು. ದಾಸ್ಯಭಾವ ಹರಿದಾಸ ಸಾಹಿತ್ಯದ ಜೀವಸೆಲೆ. ಶ್ರೀಹರಿಯೇ ಒಡೆಯ. ತಾನವನ ದಾಸ, ಹಾಡಿ ನಲಿದ ಭಕ್ತರೇ ಹರಿದಾಸರು. ಹೀಗೆ ದಾಸ ಪರಂಪರೆಯು ಸಂಘಟಿತ, ನಿರ್ಮಾತೃವಾದವರು.

ಶ್ರೀಕೃಷ್ಣ, ಸಿರಿಕೃಷ್ಣ ಅಂಕಿತದಿಂದ ಕೀರ್ತನೆ ರಚಿಸಿದ್ದಾರೆ.

ಎನ್ನ ಬಿಂಬ ಮೂರುತಿಯ ಪೂಜಿಪೆನಾನು
ಮನಮುಟ್ಟಿ ಅನುದಿನ ಮರೆಯದೆ ಮರೆಯದೆ

ಶ್ರೀನಿವಾಸನ ಕುರಿತಾಗಿ ಸಂಸ್ಕೃತದಲ್ಲಿ-

ಪ್ರಾತಃಸ್ಮರಾಮಿ ರಮಯಾಸಹ
ವೆಂಕಟೇಶಮ್
ಮಂದಸ್ಮಿತಂ ಮುಖಸರೋರುಹ
ಕಾಂತಿರಮ್ಯಂ

ಹಂಪೆಯಲ್ಲೇ ಪ್ರತಿಷ್ಠಾಪಿತ - ಯಂತ್ರೋದ್ಧಾರಕಹನುಮಂತನ ಕುರಿತಾಗಿ-

ನಮಾಮಿ ದೂತಂ ರಾಮಸ್ಯ
ಸುಖದಂ ಚ ಸುರದ್ರುಮಂ
ಪೀನವೃತ್ತಮಹಾಬಾಹುಂ
ಸರ್ವಶತ್ರು ನಿವಾರಣಂ

ಎಂದು ಕೊಂಡಾಡಿದ್ದಾರೆ. ಹಂಪೆಯ ಅಧಿದೈವ ಶ್ರೀ ವಿರೂಪಾಕ್ಷನ ಕುರಿತಾಗಿ - ನಮೋ ಪಾರ್ವತೀಪತೆ ನುತ ಜನಪರ ನಮೋ ವಿರೂಪಾಕ್ಷ ರವಿಮಹೇಮಣಿ ನಲ್ಲಮಾಲೆ ಭಕುತಿಕೊಡು ನಮೋ ವಿರೂಪಾಕ್ಷ - ಎಂದು ಸ್ತುತಿಸಿದ್ದಾರೆ.

ಇನ್ನೊಂದು ಕೀರ್ತನೆಯಲ್ಲಿ -

ಜಿಜ್ಞಾಸುವಿಗೆ ಜ್ಞಾನ ಕಾರಣ
ಜ್ಞಾನಿಗೆ ಅಪರೋಕ್ಷ ಕಾರಣ
ಅಪರೋಕ್ಷಗೆ ಅಧಿಕಾರಾಂತ ಕಾರಣ
ಮುಕ್ತಗೆ ತಾನೆ ಫಲರೂಪ

ತಿರುಮಲೆ - ತಿರುಪತಿ ದೇವಸ್ಥಾನಗಳು, ತಿರುಪತಿ.



# ಸ್ವಾಮಿಯ ಪುಷ್ಪಕೈಂಕರ್ಯ

ವೆಂಕಟಾದ್ರಿ ಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ ।
ವೆಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ ॥

ಭೂತ ಭವಿಷ್ಯಗಳಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯಂತಹ ದೇವರು ಇತರವಿಲ್ಲ ಎಂಬ ಅರ್ಥದ ಈ ಶ್ಲೋಕದ ಮೂಲ ಶ್ರೀ ವೆಂಕಟೇಶ್ವರಸ್ವಾಮಿ. ಸಾವಿರ ವರ್ಷದ ಹಿಂದೆಯೇ ಯಾಮುನಾಚಾರ್ಯರಿಂದ ಪ್ರೋತ್ಸಾಹಿತರಾದ ತಿರುಮಲನಂಬಿ ಈ ದೇವರಿಗೆ ಪುಷ್ಪಕೈಂಕರ್ಯ ಮಾಡಿ ಧನ್ಯರಾದರು. ನಂತರ ಅನಂತಸೂರಿ ರಾಮಾನುಜರಿಂದ ಆಜ್ಞಪ್ತರಾಗಿ ತಿರುಮಲೆಯಲ್ಲಿ ಒಂದು ತುಲಸೀ ತೋಟವನ್ನೇರ್ಪಡಿಸಿ ಹೂಗಳನ್ನು ಬೆಳೆಸಿ ಸ್ವಾಮಿಗೆ ಅರ್ಪಿಸಿ ತೃಪ್ತಿ ಹೊಂದಿದ್ದುಂಟು. ಆ ನಂತರ ತಿರುಮಲೆಯ ತುಂಬ ತುಲಸೀತೋಟಗಳಾಗಿ, ಹಲವು ಭಕ್ತರು ತೋಟದ ಮಾಲಿಗಳಾಗಿ, ಮಾಲೆಕಾರರಾಗಿ ಸ್ವಾಮಿಯ ಸೇವೆಯಲ್ಲಿ ಸಂದುಬಂದರು. ತರಿಗೊಂಡವೆಂಗಮಾಂಬ ಮುಂತಾದ ಪ್ರಾತಃಸ್ಮರಣೀಯರು ಈ ಸೇವೆಯಲ್ಲಿ ಸವೆದವರೇ. ಇಂತಹ ಸ್ವಾಮಿಯ ಸಾರ್ಥಕ ಸುಮ ಸೇವೆಯನ್ನು ಪುಷ್ಪಕೈಂಕರ್ಯವನ್ನು ಸರ್ವರೂ ಮಾಡಬೇಕೆಂದು ಆಶಿಸಿ ಈ ಹಲವು ಅವಕಾಶಗಳನ್ನು ಕಲ್ಪಿಸಲಾಗಿದೆ.

**1. ಪುಷ್ಪಾಂಜಲಿ ಯೋಜನೆ :** ಒಂದು ಸಾವಿರದ ಗುಣಕಗಳಲ್ಲಿ ಲಕ್ಷ ರೂಪಾಯಿಗಳ ವರೆಗೆ ಸಲ್ಲಿಸಬಹುದು. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ.ಯ ಹಣ ವನ್ನು ಬ್ಯಾಂಕಿನಲ್ಲಿ ಠೇವಣಿಯಿಟ್ಟು ಬರುವ ಹಣದಲ್ಲಿ ಸುಗಂಧ ಸುಮಗಳನ್ನು ಬೆಳೆದು ಭಕ್ತರು ಕೋರಿದ ದಿನ ಸ್ವಾಮಿಗೆ ಸಮರ್ಪಿಸಲಾಗುತ್ತದೆ.

**2. ಪುಷ್ಪ ಕೈಂಕರ್ಯ :** ಭಕ್ತರು ಐದು ಕಿಲೋಗ್ರಾಂಗಳಿಗೆ ಕಡಿಮೆಯಾಗದಂತೆ ಬಿಡಿ ಹೂವುಗಳನ್ನು ಪ್ರತ್ಯಕ್ಷವಾಗಿ ತಂದು ತಿರುಮಲೆಯ ಉದ್ಯಾನ ವನ ವಿಭಾಗದಲ್ಲಿ ನೀಡಬಹುದು. ಅವಸರಕ್ಕೆ ತಕ್ಕಂತೆ ಈ ಹೂವುಗಳನ್ನು ಕಟ್ಟಿ ಸ್ವಾಮಿಗೆ ಸಮರ್ಪಿಸ ಲಾಗುವುದು.

**3. ಪುಷ್ಪವರ್ಧಿನಿ ಯೋಜನೆ :** ಭಕ್ತರು ತಾವೇ ಬೆಳೆಸಿದ ಹೂವುಗಳನ್ನು ಸ್ವಾಮಿಗೆಂದು ತಿರುಮಲೆಗೆ ಕಳುಹಿಸಬಹುದು. ಎ.ಪಿ.ಎಸ್.ಆರ್.ಟಿ.ಸಿ. ಬಸ್‌ಗಳಲ್ಲಿ ಈ ಹೂವುಗಳನ್ನು ಉಚಿತವಾಗಿ ತಿರುಮಲೆಗೆ ಕಳುಹಿಸಬಹುದು. ಹೀಗೆ ಬಂದ ಹೂವುಗಳನ್ನು ಉದ್ಯಾನವನ ಶಾಖೆಯವರು ಸ್ವಾಮಿ ಸೇವೆಗೆ ಕಳುಹಿಸುವರು.

ಸ್ವಾಮಿಯ ತೋಮಾಲೆಸೇವೆ, ಊಂಜಲ್‌ಸೇವೆ, ಪೂಲಂಗಿಸೇವೆ (ಗುರುವಾರ) ಪದ್ಮಾವತೀ ಪರಿಣಯ, ಪವಿತ್ರೋತ್ಸವ, ಪುಷ್ಪಪಲ್ಲಕ್ಕಿ, ಬ್ರಹ್ಮೋತ್ಸವ, ಪುಷ್ಪಯಾಗ ಮೊದಲಾದವುಗಳಿಗಾಗಿ ಹೆಚ್ಚಿನ ಹೂವು ಅಗತ್ಯ. ತಮ್ಮ ಅನುಕೂಲವಿದ್ದಂತೆ ಹೂವುಗಳನ್ನು ಕಳುಹಿಸಬಹುದು.

ವಿವರಗಳಿಗೆ,
**ಉದ್ಯಾನವನಾಧಿಕಾರಿ,**
ತಿ.ತಿ.ದೇ. ಉದ್ಯಾನ ವಿಭಾಗ, ತಿರುಮಲೆ.

ಸಿರಿಕೃಷ್ಣನ ಪಾದಸೇವೆ
ಇದರ ತೂಕಕ್ಕೆ ಸಾಕೆ ಕೈವಲ್ಯ

ತಮ್ಮ ಪ್ರಿಯ ಶಿಷ್ಯರಾದ ಪುರಂದರದಾಸರ ಕೀರ್ತನೆಗಳನ್ನು ''ಪುರಂದರೋಪನಿಷತ್ತು'' ಎಂದೇ ಗೌರವಿಸಿದ್ದಾರೆ. ಅಲ್ಲದೆ ಅವರ ಕುರಿತು ಕೀರ್ತನೆ ರಚಿಸಿ ಶಿಷ್ಯನ ಮೇಲ್ಮೆಯನ್ನು ಕೊಂಡಾಡಿದ್ದಾರೆ.

ಕಂಗಳಿಗೆ ಹಬ್ಬವಾಯಿತಯ್ಯ
ಮಂಗಳಾತ್ಮಕ ಪುರಂದರದಾಸರನು ಕಂಡು

ಹಂಸನಾಮಕ ಪರಮಾತ್ಮ ಚತುರ್ಮುಖ ಬ್ರಹ್ಮದೇವರು ಹೀಗೆ ಬಂದ ಪರಂಪರೆಯಲ್ಲೇ ಶ್ರೀ ವ್ಯಾಸರಾಜಮಠ ಸಂಸ್ಥಾನವಿದೆ. ಈ ಸಂಸ್ಥಾನದಲ್ಲಿ ಇವರು ಕ್ರಿ.ಶ. 1466 ರಿಂದ 1539 ರ ವರೆಗೆ ವಿರಾಜಿಸಿದರು. ವ್ಯಾಸರಾಜರು ವೃದ್ಧಾಪ್ಯದಿಂದ ಬಳಲಿ ಲೋಕಕೆಲಸಗಳಲ್ಲಿ ನಿರಾಸಕ್ತರಾದರು. ಉಪಾಸ್ಯಮೂರ್ತಿಯ ಆರಾಧನೆಯಲ್ಲಿ ಆಸಕ್ತರಾಗಿದ್ದರು. ನಿಶ್ಶಕ್ತಿ ನಿತ್ರಾಣಗಳಿಂದಾಗಿ ತೊಂಭತ್ತೂರು ವರ್ಷಗಳ ವ್ಯಾಸರಾಜರು ಸಂಸ್ಥಾನದ ಸರ್ವಸ್ವವನ್ನೂ ಉತ್ತರಾಧಿಕಾರಿಗೆ ವಹಿಸಿದರು.

ತುಂಗಭದ್ರೆಯ ತೀರ ನವ ವೃಂದಾವನದಲ್ಲಿ 1539 ಮಾರ್ಚ್ 8 ರಂದು ಪರಂಧಾಮಗೈದರು. ಶಿಷ್ಯರೆಲ್ಲ, ರಾಜ ಪ್ರಮುಖರು, ಪುರವಾಸಿಗಳು ಆಗಮಿಸಿ ಗುರು ಮಹಿಮೆ ಕೊಂಡಾಡತೊಡಗಿದರು.

ನವವೃಂದಾವನದಿ ವಿರಾಜಿಪಯತಿ
ಯಾರೆಲೆ ಪೇಳಮ್ಮ
ಕವಿಜನ ನಾಯಕ ಪವನಮತ
ಸಮುದ್ಭವ ಅಭಿನವ
ವ್ಯಾಸಾರ್ಯ ಕಾಣಮ್ಮ

ಇಂಥ ಅಪರೋಕ್ಷ ಜ್ಞಾನಿ, ವಿದ್ಯಾ ಸಿಂಹಾಸನಾಧೀಶ ವ್ಯಾಸರಾಜರಿಗೆ ನಮೋ ನಮಃ

★★★★★



ತಿರುಪತಿ ಶ್ರೀ ಕೋದಂಡರಾಮಸ್ವಾಮಿ
ಆಲಯದಲ್ಲಿ ಈಚೆಗೆ ನಡೆದ
ಸೀತಾರಾಮಕಲ್ಯಾಣ



ಶ್ರೀರಾಮ ಪಟ್ಟಾಭಿಷೇಕ



ಹನುಮಂತವಾಹನ

ತಿರುಮಲೆಯಲ್ಲಿ ಈಚೆಗೆ ನಡೆದ
ಶ್ರೀ ಪದ್ಮಾವತೀ ಪರಿಣಯ ದೃಶ್ಯ.



ಸ್ವಾಮಿಯನ್ನು ಸಂದರ್ಶಿಸಿ
ಇನ್‌ಚಾರ್ಜ್ ಇ.ಓ.
ಶ್ರೀ ಬಾಲಸುಬ್ರಹ್ಮಣ್ಯಂ ಅವರಿಂದ
ಪ್ರಸಾದ ಸ್ವೀಕರಿಸುತ್ತಿರುವ
ಭಾರತದ ಉಪರಾಷ್ಟ್ರಪತಿ
ಶ್ರೀ ಕೃಷ್ಣಕಾಂತ್.





# ಭಾರತೀಯ ಸಂಸ್ಕೃತಿ - ನೆಲೆ ಹಾಗೂ ನಿಲುವು

– ಡಾ|| ಎಚ್. ವಿ. ನರಸಿಂಹಮೂರ್ತಿ.

ಭಾರತೀಯ ಸಂಸ್ಕೃತಿಯು ಜಗತ್ತಿನ ಪ್ರಾಚೀನ ಸಂಸ್ಕೃತಿಗಳಲ್ಲಿ ಒಂದು. ಅದಕ್ಕೆ ಪ್ರಮುಖ ಆಧಾರವಾದ ಋಗ್ವೇದವು ಈ ಜಗತ್ತಿನ ಅತ್ಯಂತ ಪ್ರಾಚೀನ ಗ್ರಂಥ ಎನ್ನುವುದರಲ್ಲಿ ಸಂಶಯವಿಲ್ಲ. ಸಂಶೋಧನೆಗಳು ಮುಂದುವರಿದಷ್ಟೂ ಋಗ್ವೇದದ ಕಾಲವು ಹಿಂದಕ್ಕೆ ಹೋಗುತ್ತದೆ. ಅದನ್ನು ಕಂಡು ವಿಸ್ಮಿತರಾಗದವರಿಲ್ಲ. ಭಾರತೀಯ ಸಂಸ್ಕೃತಿಯು ಎಷ್ಟು ಹಿಂದೆ ಹುಟ್ಟಿತೆಂಬುದರ ಬಗ್ಗೆ ಇದಮಿತ್ಥಂ ಎಂದು ನಿಶ್ಚಿತವಾಗಿ ನುಡಿಯುವ ಪ್ರಯತ್ನ ಮಾಡುತ್ತಿದ್ದ ಸಾಹಸಬುದ್ಧಿಯುಳ್ಳವರು ಕೂಡ ಅದು ತಮ್ಮ ನಿರ್ಧಾರಕ್ಕೆ ಸಿಕ್ಕದಷ್ಟು ಪ್ರಾಚೀನವೆಂಬುದನ್ನು ಮನಗಂಡಿದ್ದಾರೆ. ಭಾರತೀಯ ಸಂಸ್ಕೃತಿಯು ತೀರ ಈಚಿನದೆಂದು ಸಿದ್ಧಾಂತ ಮಾಡಿ ತೃಪ್ತಿಪಟ್ಟುಕೊಳ್ಳಲು ಮೊದಲಿನಿಂದಲೂ ಪ್ರಯತ್ನಿಸುತ್ತ ಬಂದಿರುವವರು ಪಾಶ್ಚಾತ್ಯವಿದ್ವಾಂಸರು. ಅವರಲ್ಲಿ ಕೆಲವರು ನಿಜವಾಗಿಯೂ ತ್ರಿಕರಣಶುದ್ಧವಾಗಿ ಪ್ರಯತ್ನಿಸಿ ಸತ್ಯಾನ್ವೇಷಣಕ್ಕೆ ಹೊರಟವರು. ಉಳಿದ ಬಹುಮಂದಿ ವಿದ್ವಾಂಸರು ಭಾರತೀಯ ಸಂಸ್ಕೃತಿಯು ಅತ್ಯಂತ ಪ್ರಾಚೀನವೆಂದು ಒಪ್ಪಿಕೊಳ್ಳಲು ಇಷ್ಟವಿಲ್ಲದೆ ಅದು ಕೇವಲ ಇತ್ತೀಚಿನದೆಂದು ತೋರಿಸಿಕೊಡಲು ಪ್ರಯತ್ನಿಸಿದವರು. ಆದರೆ ಹರಪ್ಪ ಮುಂತಾದ ಕಡೆಗಳಲ್ಲಿ ದೊರೆತ ಅವಶೇಷಗಳೇ ಮೊದಲಾದ ಸಾಧನಗಳಿಂದ ಭಾರತೀಯ ಸಂಸ್ಕೃತಿಯು ಅತ್ಯಂತ ಪ್ರಾಚೀನವಾದುದು ಎಂಬುದನ್ನು ನಿರೂಪಿಸಲು ಬಹಳ ಅನುಕೂಲವಾಯಿತು.

ಭಾರತೀಯ ಸಂಸ್ಕೃತಿಯು ಅತ್ಯಂತ ಪ್ರಾಚೀನವಾಗಿರುವಂತೆ ಅತ್ಯಂತ ಭವ್ಯವಾಗಿಯೂ ಅತ್ಯಂತ ರಮ್ಯವಾಗಿಯೂ ಇದೆ. ಇತರ ಹಲವಾರು ಪ್ರಾಚೀನ ಸಂಸ್ಕೃತಿಗಳು ನಿರ್ನಾಮವಾಗಿ ಅಳಿಸಿ ಹೋಗಿದ್ದರೂ ಭಾರತೀಯ ಸಂಸ್ಕೃತಿಯು ಸಚೇತನವಾಗಿ ಇನ್ನೂ ಉಳಿದೇ ಇದೆ. ಕೇವಲ ಐಹಿಕ ಸಾಧನೆಗಳ ವಿಷಯವನ್ನೇ ತೆಗೆದುಕೊಂಡು ಪರಿಗಣಿಸಿದರೂ ಕೂಡ ಇದು ಋಗ್ವೇದದ ಕಾಲಕ್ಕೇ ರಾಜಕೀಯ, ಸಾಮಾಜಿಕ, ಔದ್ಯೋಗಿಕ ಕ್ಷೇತ್ರಗಳಲ್ಲಿ ಎಷ್ಟು ಪರಿಣಾಮ ಪರವಾದ ಪ್ರಗತಿ ಸಾಧನೆಯಾಗಿದ್ದಿತೆಂಬುದನ್ನು ಯೋಚಿಸಿದರೆ ನಿಜವಾಗಿಯೂ ಆಶ್ಚರ್ಯವಾಗುತ್ತದೆ. ಇತರ ದೇಶಗಳಲ್ಲಿ ಲೋಹಗಳನ್ನು ಅದಿರಿನಿಂದ ಬೇರೆ ಮಾಡುವುದೂ ಹಾಗೆ ಮಾಡಿದ ಶುದ್ಧ ಲೋಹವನ್ನು ಬಳಸುವುದೂ, ಕಬ್ಬಿಣದಿಂದ ಉಕ್ಕು ಮಾಡುವುದೂ ಎಷ್ಟು ಈಚೆಗೆ ಪ್ರಾರಂಭವಾಯಿತು ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ನೋಡಿದರೆ ಋಗ್ವೇದದಲ್ಲಿ ವಾಣಿ ಎಂಬ ನೂರು ತಂತಿ ವಾದ್ಯವೂ ವೀಣೆಯೆಂಬ ವಾದ್ಯವೂ ವರ್ಣಿತವಾಗಿರುವುದನ್ನೂ, ಹಲವು ಲೋಹಗಳು ಬಳಕೆಯಲ್ಲಿದ್ದುದಾಗಿ ಹೇಳಿರುವುದನ್ನೂ ಕಂಡು ವಿಸ್ಮಯ ಹೊಂದದಿರುವುದು ಹೇಗೆ! ವಾಣವೆಂಬ ವಾದ್ಯದ ತಂತಿಗಳಿಗೂ ವೀಣೆಯ ತಂತಿಗಳಿಗೂ ಉಪ್ಪನ್ನುಪಯೋಗಿಸುವುದು ಅಷ್ಟು ಪ್ರಾಚೀನ ಕಾಲದಲ್ಲಿಯೇ ನಮ್ಮ ಪೂರ್ವಿಕರಿಗೆ ತಿಳಿದಿದ್ದಿತು ಎಂಬ ಸಂಗತಿಯು ಆಶ್ಚರ್ಯಕರವಾದುದು.

ಏಕಂ ಸತ್ ವಿಪ್ರಾ ಬಹುಧಾ ವದಂತಿ ಎಂಬ ಉದಾತ್ತ ತತ್ತ್ವವು ನಮ್ಮ ನಾಡಿನಲ್ಲಿ ಎಷ್ಟು ಪ್ರಾಚೀನಕಾಲದಲ್ಲಿನಿರೂಪಿತವಾಯಿತೆಂಬುದು ಮತ್ತೂ ಆಶ್ಚರ್ಯಕರವಾದುದು. ಎಲ್ಲಕ್ಕೂ ಮಿಗಿಲಾಗಿ ಧಾರ್ಮಿಕ ವಿಚಾರಗಳಲ್ಲಿ ಆಲೋಚನಾ ಸ್ವಾತಂತ್ರ್ಯವು ಎಲ್ಲರಿಗೂ ಇದ್ದುದು ಬಹಳ ಪ್ರಮುಖವಾದ ಒಂದು ಸಂಗತಿ. ಇತರ ದೇಶಗಳಲ್ಲಿನಡೆದ ಘಟನೆಗಳನ್ನು ಗಮನಿಸಿದರೆ ಇದರಲ್ಲಿ ಲೇಶಮಾತ್ರವು ಅತಿಶಯೋಕ್ತಿ ಇಲ್ಲವೆಂಬುದು ವ್ಯಕ್ತವಾಗುತ್ತದೆ. ಆಲೋಚನಾ ಸ್ವಾತಂತ್ರ್ಯವೆಂಬುದು ಹಾಗಿರಲಿ, ಧಾರ್ಮಿಕ ವಿಚಾರಗಳಲ್ಲಿ ಅಲ್ಪಸ್ವಲ್ಪ ಭಿನ್ನಾಭಿಪ್ರಾಯ ಪಟ್ಟವರಿಗೂ ಸಾವು ತಪ್ಪುತ್ತಿರಲಿಲ್ಲ. ಒಟ್ಟು ಪಾಶ್ಚಾತ್ಯ ಸಂಸ್ಕೃತಿಯ ಮೂಲಾಧಾರವಾದ ಭವ್ಯ ಸಂಸ್ಕೃತಿಯೆಂದು ಹೆಮ್ಮೆಯಿಂದ ಉದ್ಘೋಷಿತವಾದ ಗ್ರೀಸ್ ದೇಶದ ಸಂಸ್ಕೃತಿಯಲ್ಲಿ ಕೂಡ ಆ ದೋಷವಿದ್ದು ಮಹಾಪುರುಷ ಸಾಕ್ರಟೀಸನು ಅನ್ಯಾಯವಾದ ಮರಣದಂಡನೆಗೆ ಗುರಿಯಾಗಿ ಪ್ರಾಣವನ್ನರ್ಪಿಸಬೇಕಾಯಿತು. ಇದಕ್ಕೆ ತದ್ವಿರುದ್ಧ ಔದಾರ್ಯ ಭಾರತದಲ್ಲಿ. ಸೇಶ್ವರ ಸಾಂಖ್ಯ - ನಿರೀಶ್ವರ ಸಾಂಖ್ಯ - ಎರಡಕ್ಕೂ ಇಂಬು ದೊರೆತ ಭರತಖಂಡದಲ್ಲಿ, ಪೂರ್ವಮಿಮಾಂಸಾ ಉತ್ತರ ಮೀಮಾಂಸಾ ಸಿದ್ಧಾಂತಗಳೆರಡಕ್ಕೂ ಪ್ರೋತ್ಸಾಹ ದೊರೆತ ಭರತಖಂಡದಲ್ಲಿ ವೇದ ಪ್ರಾಮಾಣ್ಯವನ್ನೇ ಆಗಲೀ, ವೇದವು ಅಪೌರುಷೇಯವೆಂಬುದನ್ನೇ ಆಗಲೀ ಒಪ್ಪದೇ ಹೋದ ಗೌತಮ ಬುದ್ಧನನ್ನು ಕೂಡ ಮಹಾವಿಷ್ಣುವಿನ ಅವತಾರವೆಂದು ಉದ್ಘೋಷಿಸಿ, ಆಲೋಚನಾ ಸ್ವಾತಂತ್ರ್ಯದ ಪರಾಕಾಷ್ಠೆಯ ವಿಜಯ ಧ್ವಜವನ್ನೆತ್ತಿ ಮೆರೆಸಿದ ಭರತಖಂಡದಲ್ಲಿ ಅನ್ಯಥಾ ನಡೆಯುವುದು ಶಕ್ಯವೇ ಇಲ್ಲ. ಇರುತ್ತಿರಲಿಲ್ಲ.

ಸಮಸ್ತವಿಧವಾದ ಅಭ್ಯುದಯ ಸಾಧನೆಗೂ, ಜನಜೀವನದ ಆಗುಹೋಗುಗಳಿಗೂ ಮನುಷ್ಯ ಪ್ರಯತ್ನದ ಜೊತೆಗೆ ಭಗವತ್ಪ್ರಸಾದದ ಅಗತ್ಯವೂ ಇದೆ. ಈ ಭಾವನೆಯು ಭಾರತೀಯ ಸಂಸ್ಕೃತಿಯ ನಿಲುವುಗಳಲ್ಲಿ ಒಂದಾಗಿದೆ. ಪೌರುಷದಿಂದಲೇ ಸಮಸ್ತವೂ ಸಾಧ್ಯವೆಂಬುದು ಪಾಶ್ಚಾತ್ಯ ಸಂಸ್ಕೃತಿಯ ಕಾರ್ಯಸೂತ್ರ. ಭಗವಂತ ಒಬ್ಬ ಇದ್ದಾನೆ ಎಂಬುದನ್ನು ನಂಬದಿರುವವರೂ, ಮನುಷ್ಯನು ಕೋರಿದುದನ್ನೆಲ್ಲ ಸಾಧಿಸುವುದು ಶಕ್ಯವಿಲ್ಲವೆಂದೂ, ಅಜ್ಞಾತವಾದ ಯಾವುದೋ ಒಂದು ಶಕ್ತಿಯು ಮನುಷ್ಯ ಜೀವನದ ಆಗುಹೋಗುಗಳನ್ನು ನಿಯಂತ್ರಿಸು



ದೆಂಬುದನ್ನೂ ನಂಬದೆ ಯತ್ನವಿಲ್ಲ. ಮನುಷ್ಯ ಪ್ರಯತ್ನದಿಂದಲೇ ಎಲ್ಲವೂ ಸಾಧ್ಯವಾಗುತ್ತದೆ ಎಂಬ ಪಕ್ಷದಲ್ಲಿ ಸಂಸ್ಕೃತವನ್ನು ಅಭ್ಯಾಸ ಮಾಡಿದವರೆಲ್ಲರೂ ಕಾಳಿದಾಸ ವಾಲ್ಮೀಕಿಗಳೇ ಆಗಬಹುದಾಗಿದ್ದಿತು. ಷೇಕ್ಸ್‌ಪಿಯರ್ ಮಹಾ ಕವಿಯು ಅಮರನಾಗಬೇಕಾದ ಅಗತ್ಯವೇ ಇಲ್ಲದೆ ಆಂಗ್ಲಭಾಷೆ ಕಲಿತವರೆಲ್ಲರೂ ಅವನಂತೆಯೇ ನಾಟಕಗಳನ್ನು ಬರೆಯಬಹುದಾಗಿದ್ದಿತು. ವಿದ್ವಾಂಸರ ಮಕ್ಕಳಲ್ಲಿ ದಡ್ಡರೇ ಇಲ್ಲದೆ ಅವರೆಲ್ಲರೂ ತಂದೆಯನ್ನು ಮೀರಿಸ ಬಹುದಾಗಿದ್ದಿತು. ಅನುಕೂಲದೈವ ಆಗಿರುವವರ ಪ್ರಯತ್ನಗಳು ಫಲಿಸುವುವು. ಪ್ರತಿಕೂಲ ದೈವರಾದವರ ಪ್ರಯತ್ನಗಳು ವಿಫಲವಾಗುವುವು. 'ತೇನ ವಿನಾ ತೃಣಮಪಿ ನ ಚಲತಿ' ಎಂಬ ಉದಾತ್ತ ತತ್ವವನ್ನು ಮನಗಂಡು, ದೈವ ನಿರ್ಭರಚಿತ್ತರಾಗಿ, ಪ್ರಯತ್ನ ಮಾಡುವುದು ಮೇಲು - ಎಂಬ ಭಾವನೆಯಿಂದಿರುವುದು ವಿವೇಕ.

ಹೀಗೆಂದ ಮಾತ್ರಕ್ಕೆ ಮನುಷ್ಯ ಪ್ರಯತ್ನವನ್ನು ಕಡೆಗಂಡಂತೆ ಅರ್ಥವಲ್ಲ. ಮನುಷ್ಯ ಪ್ರಯತ್ನಗಳು ಎಷ್ಟೇ ಪ್ರಬಲವಾಗಿರಲಿ ಅವುಗಳಿಂದಲೇ ಉದ್ದಿಷ್ಟಾರ್ಥವು ಎಲ್ಲ ಸಂದರ್ಭಗಳಲ್ಲಿಯೂ ನೆರವೇರುವುದಿಲ್ಲ. ನಮ್ಮ ಪ್ರಯತ್ನಕ್ಕೆ ಮೀರಿದ ಮತ್ತಾವುದೋ ಶಕ್ತಿಯು ನಮ್ಮ ಭಾಗ್ಯ ಪಂಕ್ತಿಯನ್ನು ರೂಪಿಸುತ್ತದೆಂಬುದನ್ನು ಪ್ರಪಂಚದ ವಿವೇಕಿಗಳೆಲ್ಲರೂ ಮನಗಂಡಿದ್ದಾರೆ. ಆ ಶಕ್ತಿಯನ್ನೇ ಭಗವಂತನ ಕೈವಾಡ ಎನ್ನಬಹುದು. ದೇವರಿದ್ದಾನೆ ಎಂದು ಸಮರ್ಥಿಸುವುದು ಶಕ್ಯವಿಲ್ಲವೆಂದು ವಾದ ಹೂಡುವವರಿಗೂ ಪ್ರಾಚೀನಕಾಲದ ನಮ್ಮ ಹಿರಿಯರು ಉತ್ತರ ಹೇಳಿದ್ದಾರೆ. ''ನಾಸ್ತಿ ಚೆನ್ನಾಸ್ತಿನೋ ಹಾನಿಃ ಅಸ್ತಿ ಚೇ ನ್ನಾಸ್ತಿಕೋ ಹತಃ'' (ಭಗವಂತ ಇಲ್ಲವೆಂದಾದರೆ ಆತ ಇರುವನೆಂದು ನಂಬಿ ನ್ಯಾಯವಾಗಿ ನಡೆದ ನಮಗೆ ಯಾವ ಬಗೆಯ ಹಾನಿಯೂ ಆಗಲಾರದು. ಆತ ಇರುವ ನೆಂದಾದರೆ ಅನ್ಯಾಯಾಚರಣೆ ಮಾಡಿದ ನಾಸ್ತಿಕನಿಗೆ ಕೇಡು ತಪ್ಪದು. ಭಗವಂತನ ಅಸ್ತಿತ್ವ ಒಂದೆಡೆಯಿರಲಿ. ಆತ ಇಲ್ಲವೆಂಬ ಭಾವನೆ ಬಲಿತಷ್ಟೂ, ಪೌರುಷದಿಂದಲೇ ಸಮಸ್ತವೂ ಸಾಧ್ಯ ಎಂಬ ಭಾವನೆಯು ರೂಢಮೂಲ ಆದಷ್ಟೂ ಮಾನವನ ದುರಹಂಕಾರ ಪ್ರವೃತ್ತಿಯು ವೃದ್ಧಿಯಾಗಿ, ಸ್ವಾರ್ಥಸಾಧನೆಯೇ ಪರಮಾರ್ಥ ವೆನಿಸುವ ಸಂಭವವುಂಟು. ಭಗವಂತ ನಿರುವನೆಂಬ ಭಾವನೆ ಬಲಿತಷ್ಟೂ ಪೌರುಷದ ಜೊತೆಗೆ ಭಗವಂತನ ಕೃಪೆಯೂ ಸೇರಿದಲ್ಲದೆ ಯಾವುದೂ ಸಾಧ್ಯವಾಗದು ಎಂಬ ಭಾವನೆ ರೂಢ ಮೂಲವಾದಷ್ಟೂ, ಮಾನವನ ಹೃದಯದಲ್ಲಿ ವಿನೀತವೃತ್ತಿಯು ವೃದ್ಧಿ ಯಾಗುವುದು. ಪರೋಪಕಾರವೇ ಪುಣ್ಯ ಸಾಧಕವಾದ ಪರಮಾರ್ಥವೆಂಬುದು ಖಚಿತವಾಗುವುದು.

ಅದರ ಪರಾಕಾಷ್ಠೆಯೆಂದರೆ ಈ ಜಗತ್ತಿನಲ್ಲಿ ಸುಖವಾಗಿ ಬಾಳಲು ಮನುಷ್ಯರಂತೆಯೇ ಪಶು - ಪಕ್ಷಿಗಳೇ ಮೊದಲಾದ ಸಮಸ್ತ ಪ್ರಾಣಿಗಳಿಗೂ ಹಕ್ಕಿದೆಯೆಂಬ ಮನೋಧರ್ಮ. ''ಅಹಿಂಸಾ ಪರಮೋಧರ್ಮಃ'' ಎಂಬ ಉದಾತ್ತ ಭಾವನೆ. ಶ್ರೀರಾಮಚಂದ್ರನೇ ಮುಂತಾದ ಅವತಾರ ಪುರುಷರೂ ಕೂಡ ಮೃಗಗಳೂ ತರುಲತೆಗಳೂ ತಮ್ಮ ಬಂಧುಗಳೆಂಬ ಭಾವನೆಯಿಂದ ವರ್ತಿಸಿದ ಅನುಕಂಪದ ಬುದ್ಧಿ. ಈ ಬಗೆಯ ಅನುಕಂಪ ಭಾವವೂ, ಬಂಧುಸರಣಿಯೂ ಮಿಲ್ಟನ್ನನ ಪ್ಯಾರಡೈಸ್ ಲಾಸ್ಟ್‌ನ ಆಡಮ್‌ನಿಗಿಲ್ಲ. ಆ ಮಹಾವ್ಯಕ್ತಿಯನ್ನು ಕಂಡರೆ ಪ್ರಾಣಿಗಳಿಗೆಲ್ಲ ಭಯ. ಈ ಪ್ರಪಂಚದಲ್ಲಿ ಸುಖವಾಗಿ ಬಾಳಲು ಮಾನವರಂತೆಯೇ ಸಮಸ್ತ ಪ್ರಾಣಿಗಳಿಗೂ ಹಕ್ಕಿದೆಯೆಂಬ ಮತ್ತು ಈ ಪ್ರಪಂಚ ಸೃಷ್ಟಿಯಾಗಿರುವುದು ಮಾನವ ವರ್ಗದ ಉಪಭೋಗಕ್ಕೆ ಮಾತ್ರವೇ ಅಲ್ಲವೆಂಬ ಉದಾತ್ತ ಭಾವನೆಯು ಅಲ್ಪಸ್ವಲ್ಪವಾದರೂ ಪಾಶ್ಚಿಮಾತ್ಯರಿಗೆ ಸ್ಫುರಿಸಿದ್ದೇ ಹತ್ತೊಂಭತ್ತನೆಯ ಶತಮಾನದಲ್ಲಿ. ಕ್ರಿಸ್ತ ಪೂರ್ವದ ಅನೇಕ ಶತಮಾನಗಳ ಹಿಂದೆಯೇ ಭಾರತೀಯರು ಇದನ್ನು ಮನಗಂಡು ಕಾರ್ಯಕ್ಷೇತ್ರಕ್ಕೆ ತಂದಿದ್ದರು. ಇದು ಭಾರತೀಯ ಸಂಸ್ಕೃತಿಯ ಅಮೋಘವಾದ ವೈಶಿಷ್ಟ್ಯ. ಇದಕ್ಕಾಗಿ ಭಾರತೀಯರು ಈ ವೈಶಿಷ್ಟ್ಯವನ್ನು ಮತ್ತೆ ಮತ್ತೆ ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡರು. ಪಾಶ್ಚಾತ್ಯರು ಇನ್ನಾದರೂ ಇದನ್ನು ಕಾರ್ಯರೂಪಕ್ಕೆ ತಂದರೆ ಮನುಕುಲಕ್ಕೆ ಮಂಗಳವಾಗಲು ಸಾಧ್ಯ.

ಸ್ವದೇಶ ಪ್ರೇಮದೊಡನೆ ವಿಶ್ವಪ್ರೇಮವನ್ನು ಮನದಲ್ಲಿಟ್ಟುಕೊಂಡು ವರ್ತಿಸಬೇಕೆಂಬುದು ಭಾರತೀಯ ಸಂಸ್ಕೃತಿಯ ನಿಲುವು. ಈ ವಿಚಾರದಲ್ಲಿ ಭರತಖಂಡದಂತೆ ಮತ್ತಾವ ದೇಶವೂ ವರ್ತಿಸಿಲ್ಲ. ಹಿಂದಿನ ಶತಮಾನ ಗಳಲ್ಲಿಯಾಗಲೀ, ಈಚಿನ ಶತಮಾನಗಳಲ್ಲಿ ಯಾಗಲೀ ಪಾಶ್ಚಾತ್ಯ ಜನಾಂಗಗಳ ದೃಷ್ಟಿ ಕೇವಲ ಸಂಕುಚಿತವಾದ ದೃಷ್ಟಿ. ಅವುಗಳ ದೃಷ್ಟಿಯಲ್ಲಿ ಸ್ವದೇಶ ಅಭಿವೃದ್ಧಿಯಾದರೆ ಸಾಕು, ಇತರ ದೇಶಗಳು ಹಾಳಾದರೂ ಚಿಂತೆಯಿಲ್ಲ. ಯೂರೋಪಿನ ಯಾವ ದೇಶವನ್ನು ನೋಡಿದರೂ ಇದೇ ಬಗೆಯ ಸಂಕುಚಿತ ದೃಷ್ಟಿ ಕಂಡುಬರುತ್ತದೆ. ಅಂತರರಾಷ್ಟ್ರೀಯ ಮನೋಭಾವದಿಂದ ವರ್ತಿಸಬೇಕೆಂಬುದು ಈಚಿನ ಪ್ರಯತ್ನವಷ್ಟೆ. ಈ ಬಗೆಯ ವಿಶ್ವಪ್ರೇಮದಿಂದ ವರ್ತಿಸುವು ದಾಗಲೀ, ದುರ್ಬಲವರ್ಗಗಳಿಗೆ ನ್ಯಾಯವು ದೊರೆಯುವ ಭರವಸೆಯಾಗಲೀ ಇನ್ನೂ ಬಹುಕಾಲದ ಮೇಲೆ ಸಾಧ್ಯವಾಗುವುದಾದರೆ ಅದು ನಿಜವಾಗಿಯೂ ಆಶ್ಚರ್ಯದ ಸಂಗತಿಯೇ! ಪ್ರಾಚೀನ ಭರತಖಂಡವು ''ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ'' ಎಂದೂ, (ಜನನಿಯೂ ಜನ್ಮಭೂಮಿಯೂ ಸ್ವರ್ಗಕ್ಕಿಂತ ಶ್ರೇಷ್ಠ)

ತ್ವತ್ ವೃಕ್ಷಾಃ ಕಲ್ಪವೃಕ್ಷಾಶ್ಚ
ಚಿಂತಾಮಣಿ ಶಿಲಾಶ್ಶಿಲಾಃ
ತ್ವತ್ ವನಂ ನಂದನಂ ಸಾಕ್ಷಾತ್
ಸಾಕ್ಷಾತ್ ತ್ವಂ ಸ್ವರ್ಗದೇವತಾ

-ನಿನ್ನ ಮರಗಳೆಲ್ಲವೂ ಕಲ್ಪವೃಕ್ಷಗಳೇ. ನಿನ್ನ ಶಿಲೆಗಳೆಲ್ಲ ಚಿಂತಾಮಣಿಗಳು. ನಿನ್ನ ಉದ್ಯಾನ ವನಗಳೆಲ್ಲ ನಂದನ ವನಗಳು. ನೀನೋ ಸ್ವರ್ಗದೇವತೆ ಎಂದು ತಾಯಿನಾಡ - ಬಗ್ಗೆ ಉದ್ಘೋಷ ಮಾಡಲಾಗಿದೆ. ಇಂದಿನ

ಭಾರತೇತರ ಬಹುತೀಕ ಮಂದಿಯ ಊಹೆಗೂ ಸಾಧ್ಯವಲ್ಲದ ರೀತಿಯಲ್ಲಿ ದೇಶಪ್ರೇಮದಿಂದ ವರ್ತಿಸಿ ಅಭ್ಯುದಯ ಸಾಧನೆಯಲ್ಲಿ ತೊಡಗಿಸಿಕೊಳ್ಳಲಾಗಿದೆ.

ಹೀಗೆ ಸ್ವದೇಶ ಪ್ರೇಮದ ಉದ್ದೀಪ್ತಿಯಿದ್ದರೂ ಪ್ರಾಚೀನ ಭಾರತದ ದೃಷ್ಟಿಯು ಮಾತ್ರ ಉದಾರವಾದ ವಿಶ್ವಪ್ರೇಮದ ದೃಷ್ಟಿ. ಒಟ್ಟು ಮನುಷ್ಯ ವರ್ಗದ ಕಲ್ಯಾಣ ಸಾಧನೆಯೇ ಅದರ ಆಕಾಂಕ್ಷೆ. ''ಲೋಕಾಃ ಸಮಸ್ತಾ ಸುಖಿನೋ ಭವಂತು'', ''ಸರ್ವೇ ಜನಾಃ ಸುಖಿನೋ ಭವಂತು'', ''ಸರ್ವಸ್ಸರ್ವತ್ರ ನಂದತು'' ಎಂಬ ಮಾತುಗಳು ಇಲ್ಲಿ ಕಾರ್ಯಸೂತ್ರಗಳಾದವು. ಇದು ದೌರ್ಬಲ್ಯದ ದೈನ್ಯಾಲಾಪಗಳೆಂದು ಹಿಂದಿನ ತಲೆ ಮಾರುಗಳಲ್ಲಿ ಪಾಶ್ಚಿಮಾತ್ಯರನೇಕರು ಭಾವಿಸಿದ್ದರು. ಕೆಲವೇ ವರ್ಷಗಳ ಹಿಂದೆ ಫ್ರಾನ್ಸ್ ದೇಶದಲ್ಲಿ ನಡೆದ ದಾರ್ಶನಿಕರ ಸಮ್ಮೇಳನದಲ್ಲಿ ನೆರೆದಿದ್ದ ಇಡೀ ಪ್ರಪಂಚದ ನಾನಾ ದೇಶಗಳ ಪ್ರತಿನಿಧಿಗಳಾದ ಪ್ರಚಂಡ ಮೇಧಾವಿಗಳು ಇಂತಹ ಮಾತುಗಳನ್ನು ಕೇಳಿ ಆಶ್ಚರ್ಯಚಕಿತರಾದರಂತೆ. ಪ್ರಾಣಿ ಮಾತ್ರದಲ್ಲಿ ದಯೆ ತೋರುತ್ತಿದ್ದುದೂ, ಸಾಮ್ರಾಟ ಅಶೋಕನು ನಿರ್ಮಿಸಿದ ಪಶು ವೈದ್ಯಶಾಲೆಯು ಜಗತ್ತಿನ ಪಶುವೈದ್ಯಶಾಲೆಯ ಪ್ರಥಮ ಉಲ್ಲೇಖ ಆಗಿದ್ದುದೂ, ಅಶೋಕನೇ ಮೊದಲಾದ ಹಿರಿಯ ಸಾಮ್ರಾಟರೂ ವಿದೇಶೀ ಆಕ್ರಮಣ ಮಾಡುವ ಬಲ ಹೊಂದಿದ್ದರೂ ಅತ್ತ ಗಮನಕೊಡದೆ, ಧರ್ಮಬೋಧಕರನ್ನು ಕಳುಹಿಸಿದುದೂ, ಹರ್ಷವರ್ಧನ ಮುಂತಾದ ಭಾರತದ ರಾಜರ ಆಸ್ಥಾನಗಳಲ್ಲಿಯೂ, ನಾಲಂದ ಮೊದಲಾದ ವಿಶ್ವವಿದ್ಯಾನಿಲಯಗಳಲ್ಲಿಯೂ ವಿದೇಶೀ ರಾಯಭಾರಿಗಳಿಗೆ, ಧರ್ಮ ಚಿಂತಕರಿಗೆ, ವಿದ್ವಾಂಸರಿಗೆ ದೊರೆಯುತ್ತಿದ್ದ ರಾಜಗೌರವ, ರಾಜೋಪಚಾರ ನಡೆಯುತ್ತಿದ್ದು ದಕ್ಕೆ ಕಾರಣ ಈ ವಿಶ್ವಪ್ರೇಮ ದೃಷ್ಟಿ ಮಾತ್ರವೇ, ಇಂದಿಗೂ ಭಾರತವೂ, ಇತರ ದೇಶಗಳೂ ಈ ವಿಶ್ವಪ್ರೇಮದೃಷ್ಟಿಯಿಂದ ಒಟ್ಟು ಮನುಕುಲದ ಏಳಿಗೆಗೆ, ಅಭಿವೃದ್ಧಿಗೆ ಪ್ರಯತ್ನಿಸಿದಲ್ಲಿ ಜಗತ್ತಿನ ಜನಜೀವನ ಸುಖಮಯವಾಗಬೇಕು ಪ್ರಪಂಚದ ಎಲ್ಲೆಡೆ ಯುದ್ಧಭೀತಿ ನಾಶವಾಗಿ ಶಾಶ್ವತಶಾಂತಿ ನೆಲೆಸೀತು.

ಭಾರತೀಯ ಸಂಸ್ಕೃತಿಯ ಮತ್ತೊಂದು ವೈಶಿಷ್ಟ್ಯವೆಂದರೆ ಪ್ರಗತಿಸಾಧನೆಯಲ್ಲಿ ಮುಂದುವರಿದ ಈ ಇಪ್ಪತ್ತೊಂದನೆಯ ಶತಮಾನಕ್ಕೆ ಕೂಡ ಹಲವು ವಿಚಾರಗಳಲ್ಲಿ ಮಾದರಿಯಾಗಿ ಮಾರ್ಗದರ್ಶಿಯಾಗಿರು ವಂತಹ ಅದ್ಭುತ ವಿದ್ಯಾಭ್ಯಾಸದ ಕ್ರಮವನ್ನು ಏರ್ಪಡಿಸಿದ್ದು ಎಂದು ಹೇಳಬೇಕು. ಗುರುವಿಗೆ ಶಿಷ್ಯರ ಯೋಗ್ಯತೆಯನ್ನು ಪರೀಕ್ಷಿಸುವ ಅಧಿಕಾರವಿರಬೇಕು ಎಂಬ ಅಮೋಘ ತತ್ವವನ್ನು ಉದ್ಘೋಷಿಸಿದ ದೇಶ ನಮ್ಮದು, ಅದೂ ಕಠೋಪನಿಷತ್ತಿನ ಆ ಕಾಲದಲ್ಲಿ ಯೋಗ್ಯತಾ ಸಿದ್ಧಿಯಿಲ್ಲದೆ ಗೌರವವು ಸಲ್ಲಬೇಕಾದು ದಿಲ್ಲವೆಂಬುದು ಇದರ ಹಿನ್ನೆಲೆ. ಕಾರ್ಯಾಕಾರ್ಯ ಪರಿಜ್ಞಾನವಿಲ್ಲದ ಅವಲಿಪ್ತನಾದ ಗುರುವನ್ನು ಶಿಕ್ಷಿಸುವುದು ಶಿಷ್ಯನ ಕರ್ತವ್ಯವೆಂದು ಮಹಾಭಾರತದಲ್ಲಿ ಭೀಷ್ಮನು ತನ್ನ ಗುರು ಪರಶುರಾಮನಿಗೆ ತಿಳಿಸುತ್ತಾನೆ. ಭಾರತೀಯ ಸಂಸ್ಕೃತಿಯ ಹಿರಿಮೆಗೆ ಇದೂ ಒಂದು ಸಾಕ್ಷಿ. ಭರತಖಂಡದ ಗುರುಕುಲ ಪದ್ಧತಿಯಂತೂ ಇಡೀ ಪ್ರಪಂಚಕ್ಕೇ ಭಾರತೀಯ ಸಂಸ್ಕೃತಿಯು ದಾನ ಮಾಡಿದ ಪರಮ ಧ್ಯೇಯವೆಂಬುದು ತಜ್ಞರಾದ ಮೇಧಾವಿ ಶ್ರೇಷ್ಠರಲ್ಲಿ ಕೆಲವರ ಅಭಿಪ್ರಾಯ. ಶೀಲ ಭಂಡಾರಿಯಾದ ಸದ್ಗುರುವಿನ ಸಂಸರ್ಗದಲ್ಲಿ ಅಂತೇವಾಸಿಯಾಗಿ ಆತನ ಅನುಭವ ರಾಸಾಯನವನ್ನು ವಿದ್ಯಾನಿಧಿಯನ್ನು - ಪಡೆಯುವ ವಿದ್ಯಾಭ್ಯಾಸ ಕ್ರಮದಲ್ಲಿ ಲಭಿಸುವ ಜ್ಞಾನಸಂಪತ್ತು, ಶೀಲ ಸಂಪತ್ತುಗಳು ಕೇವಲ ಪುಸ್ತಕ ವ್ಯಾಸಂಗದಿಂದಾಗಲೀ ಗುರುವಿನ ಒಡನಾಟವೇ ಇಲ್ಲದೆ ನಡೆಯುವ ಶಿಕ್ಷಣ ಪ್ರಕ್ರಿಯೆಂದಾಗಲೀ ಸರ್ವಥಾ ಲಭಿಸಲಾರ ದೆಂಬುದು ನಿಷ್ಪಕ್ಷಪಾತದಿಂದ ನುಡಿಯುವ ತಜ್ಞರ ಮತ.

ತ್ಯಾಗ ಭೋಗಗಳ ಸಾಮರಸ್ಯಮಯವಾದ ತುಂಬುಜೀವನದ ಪ್ರತಿಪಾದನೆ ಭಾರತೀಯ ಸಂಸ್ಕೃತಿಯ ಖಚಿತ ನಿಲುವು. ಭಾರತದ ಜ್ಞಾನಿಗಳು ಶ್ರೇಯಸ್ಸಿನ ಕಡೆ ಹೆಚ್ಚು ಗಮನ ಕೊಡಬೇಕೆಂದು ಬೋಧಿಸಿದರಾದರೂ ಪ್ರೇಯಸ್ಸನ್ನು ಅಲಕ್ಷ್ಯ ಮಾಡಬೇಕೆಂದು ಅವರೆಂದೂ ತಿಳಿಸಲಿಲ್ಲ. ಅನೇಕ ಋಷಿಗಳು ಕೂಡ ಸಂಸಾರಿಗಳಾಗಿದ್ದರು. ಮಾನವನು ಧರ್ಮ ಪರಾಯಣನಾಗಿ ಬಾಳಬೇಕೆಂಬುದು ಭಾರತೀಯ ಸಂಸ್ಕೃತಿಯ ಜೀವಸ್ವರವೆಂಬುದೂ, ಆದಿಕವಿ ವಾಲ್ಮೀಕಿ ಮಹರ್ಷಿಯು ಮಹಾ ಮಾಂಗಲ್ಯ ಮಾನಿನಿಯಾದ ಜಗಜ್ಜನನಿ ಸೀತಾದೇವಿಯಿಂದ ಧರ್ಮಸಾರಮಿದಂ ಜಗತ್ ಎಂದು ಹೇಳಿಸಿರುವುದೂ ನಿಜವೇ. ಧರ್ಮಗ್ಲಾನಿಯಾಗಿ ಅಧರ್ಮದ ಅಭ್ಯುತ್ಥಾನ ವಾದಾಗಲೆಲ್ಲ, ಯುಗ ಯುಗದಲ್ಲಿಯೂ ಧರ್ಮಸಂಸ್ಥಾಪನೆಗಾಗಿ ತಾನು ಅವತರಿಸುವೆ ನೆಂದು ಭಗವಂತ ಹೇಳಿರುವುದೂ ನಿಜವೇ. ಧರ್ಮವೆಂದರೇನು? ಅಭ್ಯುದಯ ನಿಃಶ್ರೇಯಸಿದ್ಧಿಗಳೆರಡಕ್ಕೂ ಸಾಧಕವಾದು ದಾವುದೋ ಅದೇ ಧರ್ಮ. ಇದೆಷ್ಟು ಉದಾರವಾದ ಭಾವನೆ ಎಂಬುದನ್ನು ವರ್ಣಿಸಲು ಸಾಧ್ಯವಿಲ್ಲ. ಧರ್ಮ ಅರ್ಥ ಕಾಮ ಮೋಕ್ಷ - ಎಂಬ ನಾಲ್ಕು ಪುರುಷಾರ್ಥಗಳಿಗೂ ಮಾನವ ಜೀವನದಲ್ಲಿ ಸಮಾನವಾದ ಯಥಾ ಉಚಿತವಾದ ಸ್ಥಾನಗಳಿರಬೇಕು ಎಂಬುದು ಪ್ರಪಂಚದ ಮತ್ತಾವ ದೇಶದ ಸಂಸ್ಕೃತಿಯಲ್ಲಿಯೂ ಕಂಡು ಬರದಿದ್ದ ಅದ್ಭುತಕಲ್ಪನೆ. ಐಹಿಕ ಜೀವನದಲ್ಲಿ ಅಭ್ಯುದಯ ಸಾಧನೆ ಮಾಡಿ ಶ್ರೇಯಸ್ಸನ್ನು ಸಾಧಿಸಬೇಕು ಎಂಬುದು ಜೀವನದ ಪರಮೋಚ್ಚ ಧ್ಯೇಯ. ವಿದ್ಯಾಭ್ಯಾಸವನ್ನು ಪೂರೈಸಿದ ಸ್ನಾತಕರಿಗೆ ಗುರುವು -

ಸತ್ಯಾನ್ನ ಪ್ರಮದಿತವ್ಯಮ್
ಧರ್ಮಾನ್ನಪ್ರಮದಿತವ್ಯಮ್
ಕುಶಲಾನ್ನಪ್ರಮದಿತವ್ಯಮ್
ಭೂತ್ಯೈ ನ ಪ್ರಮದಿತವ್ಯಂ
ಸ್ವಾಧ್ಯಾಯ ಪ್ರವಚನಾಭ್ಯಾಮ್
ನ ಪ್ರಮದಿತವ್ಯಮ್

- ಸತ್ಯಕ್ಕೆ ತಪ್ಪಿ ನಡೆಯಕೂಡದು. ಧರ್ಮಕ್ಕೆ ತಪ್ಪಿ ನಡೆಯಬಾರದು, ಕಲೆಗಳಿಗೆ ಕೌಶಲಗಳಿಗೆ



ತಪ್ಪಿ ನಡೆಯಬಾರದು, ಪ್ರಕೃತಿಗೆ ತಪ್ಪಿನಡೆಯಬಾರದು, ಅಧ್ಯಯನ ಪ್ರವಚನಗಳಿಗೆ ತಪ್ಪಿ ನಡೆಯಬಾರದು - ಎಂದು ಉಪದೇಶಿಸಿ ಬೀಳ್ಕೊಡುತ್ತಿದ್ದನು. ಹಾಗೆ ವರ್ತಿಸುವುದರಿಂದ ಉಂಟಾಗತಕ್ಕ ಪ್ರಯೋಜನವನ್ನೂ ಗುರುವು ಫಲಶ್ರುತಿಯಲ್ಲಿ ಹೇಳುವನು - ''ನಿನ್ನ ದೇಹವು ಎಲ್ಲ ಕಠಿಣ ಕೆಲಸಗಳಿಗೂ ಸಜ್ಜಾಗಿ ದಾರ್ಢ್ಯದಿಂದ ಇರುವುದು. ನಿನ್ನನಾಲಿಗೆಯು ಸರ್ವದಾ ಅತ್ಯಂತ ಮಧುರವಾದ ಮಾತುಗಳನ್ನೇ ನುಡಿಯುವುದು. ನೀನು ಯಾವಾಗಲೂ ಕಿವಿಯಿಂದ ಶುಭವಾರ್ತೆಗಳನ್ನೇ ಕೇಳುವೆ''. ಇದಕ್ಕಿಂತ ಸರಳ ಸುಂದರವಾದ ಉಚ್ಚಧ್ಯೇಯಗಳನ್ನು ಗೃಹಸ್ಥಾಶ್ರಮ ಸ್ವೀಕಾರ ಮಾಡುವ ಯುವಕರಿಗೆ ಹೇಳುವುದಾದರೂ ಸಾಧ್ಯವೇ?

ಪ್ರಾಚೀನ ಕಾಲದ ಭಾರತೀಯರಿಗೆ ಜೀವನದಲ್ಲಿ ಆಸಕ್ತಿಯೇ ಇರಲಿಲ್ಲವೆಂದೂ, ಎಂದಿಗೆ ಸಾವು ಬಂದೀತೋ ಎಂದು ಬಯಸುವ ನಿರಾಶಾವಾದವು ಅವರದೆಂದೂ ಭಾವಿಸುವ ಮಾತು ಅರ್ಥವಿಲ್ಲದ ಪೊಳ್ಳುಕೂಗು.

ಪಶ್ಯೇಮ ಶರದಶ್ಶತಮ್
ಜೀವೇಮ ಶರದ ಶ್ಶತಮ್
ಶೃಣುಯಾಮ ಶರದಶ್ಶತಮ್
..............................
ಪ್ರಬವಾಮ ಶರದಶ್ಶತಮ್
ಅದೀನಾ ಶರದಶ್ಶತಮ್
ಭೂಯಶ್ಚ ಶರದಶ್ಶತಮ್

**ವೃಕ್ಷೋ ರಕ್ಷತಿ ರಕ್ಷಿತಃ**

**ಹಸಿರಿನಿಂದಲೆ ನೀರು**
**ಹಸಿರಿನಿಂದಲೆ ಬೆಳೆಯು**
**ಹಸಿರಿನಿಂದಲೆ ಉಸಿರು**
**ಹಸಿರಿನಿಂದಲೆಜಗವು**
**ಹಸಿರಿನಿಂದಲೆ ಜೀವ**

- ನೂರು ವರ್ಷ ನೋಡುವುದಾಗಲಿ, ನೂರು ವರ್ಷ ಜೀವಿಸುವ. ನೂರು ವರ್ಷ ಕರ್ಣಪಾಟವ ವಿರಲಿ, ನೂರು ವರ್ಷ ಬೋಧಿಸೋಣ, ನೂರು ವರ್ಷ ದೈನ್ಯ ರಹಿತರಾಗಿರುವ. ನೂರು ವರ್ಷ ಸುಖದಿಂದ ಇರುವಂತಾಗಲಿ, ಈ ಮಾತುಗಳಿಗಿಂತಲೂ ಹೆಚ್ಚಿನ ಹಾರೈಕೆ ಆಶಾವಾದ ಮತ್ತಾವುದು? ಪ್ರೇಯಸ್ಸು ಶ್ರೇಯಸ್ಸುಗಳ ಸಾಮರಸ್ಯವನ್ನು ಕಲ್ಪಿಸುವುದರಲ್ಲಿ, ಆವೆರಡರ ಪರಾಕಾಷ್ಠೆಗಳನ್ನೇ ನಮ್ಮ ಹಿಂದಿನ ಋಷಿಮುನಿಗಳು ಸಾಧಿಸಿದ್ದರು. ಉಪನಿಷತ್ತುಗಳಲ್ಲಿರುವಂತಹ ಶಾಂತಿ - ಸಂಸ್ಕೃತಿದಾಯಕಗಳಾದ ಅಮೃತವಾಣಿಗಳು ಜಗತ್ತಿನ ಮತ್ತೆ ಯಾವ ಗ್ರಂಥದಲ್ಲಿಯೂ ಇಲ್ಲವೆಂದು ಸ್ವದೇಶ ವಿದೇಶಗಳ ಪ್ರಾಜ್ಞರನೇಕರು ಮುಕ್ತಕಂಠದಿಂದ ಹೇಳಿದ್ದಾರೆ.

ಭಗವದ್ಗೀತೆ ಬೋಧಿಸಿದ -

ಯೇ ಯೇ ಯಾಂ ಯಾಂ ತನುಂ ಭಕ್ತಃ
ಶ್ರದ್ಧಯಾರ್ಚಿತುಮಿಚ್ಛತಿ
ತಸ್ಯ ತಸ್ಯಾಚಲಾಂ ಶ್ರದ್ಧಾಂ
ತಾಮೇವ ವಿದಧಾಮ್ಯಹಮ್

- ಎಂಬ ಶ್ಲೋಕವು ಒಟ್ಟು ವಿಶ್ವಕ್ಕೇ ನೀಡಿದಂತಹ ಮಂಗಳಾಶಾಸನ. ಇತರ ದೇಶಗಳ ಮತ್ತಾವ ಧರ್ಮದಲ್ಲಿಯೂ ಇಷ್ಟು ಮಟ್ಟಿನ ಉದಾರಭಾವನೆಯಿಲ್ಲ. ಅಭ್ಯುದಯ ಸಾಧಕ ವಿಚಾರಗಳಲ್ಲಿ ಕೂಡ ಜನಜೀವನದ ಹಲವು ಕ್ಷೇತ್ರಗಳಲ್ಲಿ ಭಾರತೀಯ ಸಂಸ್ಕೃತಿಯು ಪರಿಪೂರ್ಣತೆಯನ್ನೇ ಸಾಧಿಸಿತೆಂದು ಧಾರಾಳವಾಗಿ ಹೇಳಬಹುದು. ಇತ್ತೀಚೆಗೆ ಇತರ ದೇಶಗಳಲ್ಲಿ, ಸಂಶೋಧನೆಗಳಿಂದ ಹೊರಟಿರುವ ಹಲವು ವೈಜ್ಞಾನಿಕ ವಿಚಾರಗಳು ...ರಭಾಷ್ಯಾದಿ ಗ್ರಂಥಗಳಲ್ಲಿವೆ.

ಪ್ರಗತಿ ಪರವಾದ ಪಾಶ್ಚಾತ್ಯ ದೇಶಗಳಲ್ಲಿ ಅಪಾರವಾದ ಯಂತ್ರ ಸಂಪತ್ತು ಸಂಶೋಧನ ಸಾಮರ್ಥ್ಯಗಳು ವೃದ್ಧಿಯಾಗಿದ್ದರೂ ಕೂಡ ಪ್ರಾಚೀನ ಭಾರತದಲ್ಲಿ ನೇಯುತ್ತಿದ್ದಷ್ಟು ಸೂಕ್ಷ್ಮವಾದ, ನವುರಾದ, ತೆಳುವಾದ ಬಟ್ಟೆಯನ್ನು ನೇಯಲು ಅಲ್ಲಿಯವರಿಗೆ ಇಂದಿಗೂ ಸಾಧ್ಯವಾಗಿಲ್ಲ. ವೀಣಾವಾದ್ಯವನ್ನು ಹೋಲುವ ತಂತ್ರೀ ವಾದ್ಯವೂ ಕೊಳಲನ್ನು ಹೋಲುವ ರಂಧ್ರೀ ವಾದ್ಯವೂ ಮೃದಂಗವನ್ನು ಹೋಲುವ ಚರ್ಮವಾದ್ಯವೂ ಇಡೀ ಪ್ರಪಂಚದಲ್ಲಿಯೇ ಮತ್ತಾವ ದೇಶದಲ್ಲಿಯೂ ಇಲ್ಲ. ತುಕ್ಕು ಹಿಡಿಯದಂತಹ ಉಕ್ಕನ್ನು ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿಯೇ ನಮ್ಮ ಪೂರ್ವಿಕರು ಕಂಡು ಹಿಡಿದಿದ್ದರು. ಅದನ್ನು ಪಾಶ್ಚಾತ್ಯರು ಕಂಡು ಕೊಂಡದ್ದು ತೀರ ಈಚೆಗಷ್ಟೆ. ಭಾರತದಲ್ಲಿ ವಾಣಿಜ್ಯ ಕೈಗಾರಿಕೆಗಳು ಯಥೇಷ್ಟವಾಗಿ ವೃದ್ಧಿಹೊಂದಿ ಪರದೇಶಗಳೊಂದಿಗೆ ನಡೆಯುತ್ತಿದ್ದ ವ್ಯಾಪಾರ ವಹಿವಾಟಿನಿಂದ ಭಾರತಕ್ಕೆ ಹೊನ್ನಿನ ಹೊಳೆ ಹರಿದು ಬರುತ್ತಿದ್ದಿತು.

ಅನೇಕ ವಿಚಾರಗಳಲ್ಲಿ ತೀರ ಪ್ರಾಚೀನಕಾಲದಲ್ಲಿಯೇ ಇಂದು ಇತರ ದೇಶಗಳಲ್ಲಿ ಕಂಡು ಬರುವುದಕ್ಕಿಂತಲೂ ಹೆಚ್ಚಿನ ಪ್ರಗತಿ ಸಾಧನೆ ಮಾಡಿದ್ದುದು ಭಾರತೀಯ ಸಂಸ್ಕೃತಿಯ ಹಿರಿಮೆ ಗರಿಮೆಗಳಿಗೆ ಜ್ವಲಂತ ನಿದರ್ಶನ. ಪರದೇಶೀಯರ ಮುತ್ತಿಗೆಗಳು, ಧಾಳಿಗಳೂ, ಆಘಾತಗಳೂ ಸಂಭವಿಸದೆ ಭಾರತೀಯ ಸಂಸ್ಕೃತಿಯು ಏಕಪ್ರಕಾರವಾಗಿ ವೃದ್ಧಿಹೊಂದಿದ್ದರೆ, ಭಾರತೀಯ ಸಂಸ್ಕೃತಿಯ ಅಮೃತ ವಾಹಿನಿಗೆ ಈಚಿನ ಶತಮಾನಗಳ ಹಲವಾರು ದೋಷಪೂರಿತವಾದ ವಿಪರೀತ ವರ್ತನೆಗಳ ರೂಪದ ಕಲ್ಮಷವು ಸೇರದೆ ಹೋಗಿದ್ದರೆ, ಭಾರತವು ಈಗಿನ ಸ್ಥಿತಿಯಲ್ಲಿ ಅಭಿವೃದ್ಧಿಗಾಗಿ ಪರದಾಡಬೇಕಾದ ಹೊತ್ತು ಬರುತ್ತಿರಲಿಲ್ಲ ಎಂದು ಧಾರಾಳವಾಗಿ ಹೇಳಬಹುದು. ಈಗಲೂ ಭಾರತೀಯರಾದ ನಾವೆಲ್ಲ ಎಚ್ಚೆತ್ತು ನಮ್ಮ ಸಂಸ್ಕೃತಿಯಲ್ಲಿ ಸೇರಿರುವ ಕೊಳೆಕಸಗಳನ್ನು ಹೋಗಲಾಡಿಸಿ, ಪ್ರಪಂಚದ ಇತರ ದೇಶಗಳ ಅನುಭವಗಳ ಪ್ರಯೋಜನ ಪಡೆದು, ತ್ರಿಕರಣ ಶುದ್ಧರಾಗಿ ಆತ್ಮೋನ್ನತಿಯನ್ನೂ ದೇಶೋನ್ನತಿಯನ್ನೂ ಸಾಧಿಸುವ ಪ್ರಯತ್ನಕ್ಕೆಗೊಂಡರೆ ಜಗತ್ತೇ ವಿಸ್ಮಯ ಪಡುವಂತೆ ಅಭ್ಯುದಯಸಾಧನೆ ಮಾಡುವುದು ಸರ್ವಥಾ ಅಸಾಧ್ಯವೇನಲ್ಲ.

★★★★★



# ತಿರುಮಲೆ - ತಿರುಪತಿ - ತಿರುಚಾನೂರು


ಮೂಲ : **ಡಾ|| ಎಂ. ರಾಮರಾವ್** ಎಂ.ಎ.ಪಿಹೆಚ್.ಡಿ.

ಅನುವಾದ : **ಎಸ್. ವಿ. ಹೇಮಾವತಿ** ಎಂ.ಎ., ಬಿ.ಎಡ್.


## ತಿರುಮಲೆಯ ಐತಿಹ್ಯಗಳು

ತಿರುಮಲೆಯ ದೇವರು ಶ್ರೀ ವೆಂಕಟೇಶ್ವರಸ್ವಾಮಿಯ ಬಗ್ಗೆ, ಆತ ಇಲ್ಲಿ ಬಂದು ನೆಲೆಸಿದ ಬಗ್ಗೆ, ಹಲವಾರು ಕತೆಗಳು ಐತಿಹ್ಯಗಳು ಪ್ರಚಲಿತವಾಗಿವೆ. ಇವುಗಳನ್ನು ಹಲವು ಪುರಾಣಗಳಲ್ಲಿ ಕಾಣಬಹುದು. ಈ ಎಲ್ಲ ಕತೆ ಐತಿಹ್ಯಗಳನ್ನು ಸಂಗ್ರಹಿಸಿ ವೆಂಕಟಾಚಲ ಮಹಾತ್ಮ್ಯಂ ಎಂಬ ಪುಸ್ತಕದಲ್ಲಿ ನೀಡಲಾಗಿದೆ. ತಿರುಮಲೆಯ ಒಂದು ಶಾಸನದಲ್ಲಿ ಈ ವೇಂಕಟಾಚಲ ಮಹಾತ್ಮ್ಯವನ್ನು ದೇವರ ಮುಂದೆ ಓದಲಾಗುತ್ತಿತ್ತು ಎಂಬ ಉಲ್ಲೇಖವಿದೆ. [illegible] ಮುದ್ರಿತವಾಗಿ [illegible] ಸಿಕ್ಕಿದೆ. [illegible] ಪುಸ್ತಕವು [illegible] ಹೇಳುವುದಿಲ್ಲ. [illegible] ಪುಸ್ತಕದಲ್ಲಿ [illegible], ಪದ್ಮ, ಗರುಡ, ಬ್ರಹ್ಮಾಂಡ, ಮಾರ್ಕಂಡೇಯ, ಹರಿವಂಶ, ವಾಮನ, ಬ್ರಹ್ಮ, ಬ್ರಹ್ಮೋತ್ತರ, ಆದಿತ್ಯ, ಸ್ಕಂಧ ಭವಿಷ್ಯೋತ್ತರ ಪುರಾಣ [illegible] ಭಾಗಗಳು ಇವೆ. [illegible] ತಿರುಮಲೆಯ [illegible], [illegible] ಇಲ್ಲಿನ ತೀರ್ಥಗಳ ಮಹಾತ್ಮ್ಯವನ್ನೂ ಬಣ್ಣಿಸುತ್ತವೆ. ಕೆಲವಂತೂ ವಿಷಯಗಳನ್ನು ಹರಿವಂಶ, ಬ್ರಹ್ಮ, ಬ್ರಹ್ಮಾಂಡ, ಭವಿಷ್ಯೋತ್ತರ ಪುರಾಣಗಳಿಂದ [illegible] ವಿಶೇಷ ಆಸಕ್ತಿದಾಯಕವಾಗಿವೆ.

**ಸ್ವಾಮಿ ಶೇಷಾಚಲಕ್ಕೆ ಬಂದ ಬಗೆ :**

ಬೆಟ್ಟದ ಮೇಲೆ ವೇಂಕಟೇಶ್ವರಸ್ವಾಮಿಯು ನೆಲೆಸಲು ಕಾರಣಗಳನ್ನು ಎರಡು ರೀತಿಯಲ್ಲಿ ನಿರೂಪಿಸಲಾಗಿದೆ.

ವಿಷ್ಣುವು ವೈಕುಂಠವನ್ನು ಬಿಟ್ಟು ಬೇರೆ ಕಡೆ ಸ್ವಲ್ಪಕಾಲ ಇರಬೇಕೆಂದು ಯೋಚಿಸಿ ನಾರದನನ್ನು ಒಂದು ಸೂಕ್ತ ಸ್ಥಳವನ್ನು ತೋರಿಸಬೇಕೆಂದು ಕೇಳಿದನು. ನಾರದನು ಭವಿಷ್ಯ ಕಾಲದಲ್ಲಿ ಶೇಷಾಚಲ ಉಂಟಾಗುವ ಸ್ಥಳವನ್ನು ತೋರಿಸಿದನು. ವಾಯುಶೇಷರು ಪರಸ್ಪರ ಬಲಾಬಲ ಸ್ಪರ್ಧೆಯಲ್ಲಿ ತೊಡಗಿ ಶೇಷನು ಮೇರು ಪರ್ವತವನ್ನು ಸುತ್ತಿಕೊಂಡು ಇದ್ದಾಗ ವಾಯುವು ಪರ್ವತವನ್ನು ಕದಲಿಸಲು ಪ್ರಯತ್ನಿಸಿದನು. ಇದು ಸಾಧ್ಯವಾಗದೆ ಕೊನೆಗೆ ಶೇಷನು ಉಸಿರಾಡಲೆಂದು ಬಾಯಿ ತೆಗೆದಾಗ ವಾಯುವು ತೆರೆದ ಬಾಯಿ ಮೂಲಕ ಶೇಷನ ದೇಹವನ್ನು ಸೇರಿ ಶೇಷ ಸಮೇತವಾದ ಮೇರುಪರ್ವತವನ್ನು ಆಕಾಶದಲ್ಲಿ ಹಾರಿಸಿಕೊಂಡು ಹೋದನು. ಮೇರುಪರ್ವತವು ಶೇಷನನ್ನು ಬಿಟ್ಟುಬಿಡುವಂತೆ ಕೇಳಿದಾಗ ವಾಯುವು ಶೇಷನನ್ನು ಬಿಟ್ಟು ಹೊರಬಂದನು. ಸೋತ ಶೇಷನು ವಿಷ್ಣುವನ್ನು ಕುರಿತು ತಪಸ್ಸು ಮಾಡಿದ. ಪ್ರತ್ಯಕ್ಷನಾದ ವಿಷ್ಣುವು ವರವನ್ನು ಕೊಡಲು ಮುಂದಾದನು. ಶೇಷನು ತಾನು ಪರ್ವತವಾಗುವುದಾಗಿಯೂ ವಿಷ್ಣುವು ತನ್ನ ತಲೆಯ ಮೇಲೆ ನಿಂತು ಅನುಗ್ರಹಿಸಬೇಕೆಂದು ಕೇಳಿಕೊಂಡನು. ನಾರದನು ಹಿಂದೆ ನೀಡಿದ್ದ ಸಲಹೆಯನ್ನು ಮನಸ್ಸಿಗೆ ತಂದುಕೊಂಡ ವಿಷ್ಣುವು ಶೇಷನ ಬೇಡಿಕೆಗೆ ಒಪ್ಪಿ ಶೇಷಾಚಲದ ಮೇಲೆ ನೆಲೆನಿಂತನು. ಈ ಕತೆಯು ಬ್ರಹ್ಮಪುರಾಣದಲ್ಲಿ ಕಂಡುಬರುತ್ತದೆ. ಭವಿಷ್ಯೋತ್ತರ ಪುರಾಣದಲ್ಲಿ ಬೇರೊಂದು ಕಾರಣವನ್ನು ವಿವರಿಸಿ ಶ್ರೀನಿವಾಸನ ನೆಲೆಗೆ ಕಾರಣ ಹೇಳಲಾಗಿದೆ. ಅದರಂತೆ ಕತೆ ಹೀಗೆ ನಡೆಯುತ್ತದೆ.

ಗಂಗಾನದಿ ದಡದಲ್ಲಿ ಒಂದು ಬಾರಿ ಋಷಿಗಳೆಲ್ಲರೂ ಸೇರಿ ಒಂದು ಯಾಗವನ್ನು ಆರಂಭಿಸಿದರು. ಅವರಲ್ಲಿಗೆ ಬಂದ ನಾರದನು ಅವರ ಯಾಗಕ್ಕೆ ಪ್ರೀತನಾಗುವ ದೇವರು ಯಾರೆಂದು ವಿಚಾರಿಸಿದನು. ಋಷಿಗಳು ಈ ಬಗ್ಗೆ ಮೊದಲು ಯೋಚಿಸಿರಲಿಲ್ಲ. ಅವರೆಲ್ಲ ಸೇರಿ ಭೃಗು ಮಹರ್ಷಿಯನ್ನು ಈ ಸಮಸ್ಯೆಗೆ ಉತ್ತರ ಹುಡುಕಲು ಹೇಳಿದರು. ದೈವತ್ರಯರಾದ ಬ್ರಹ್ಮ ವಿಷ್ಣು ಶಿವರಲ್ಲಿ ಯಾರು ಹಿರಿಯರೋ ಅವರೇ ಯಜ್ಞಕ್ಕೆ ಗಮ್ಯರೆಂದು ನಿಶ್ಚಯಿಸಿದ ಭೃಗುವು ಅವರಲ್ಲಿ ಒಬ್ಬರನ್ನು ಸರ್ವೋತ್ತಮನೆಂದು ನಿರ್ಣಯಿಸಲು ತ್ರಿಲೋಕ ಯಾತ್ರೆ ಕೈಗೊಂಡನು. ಬ್ರಹ್ಮಲೋಕಕ್ಕೆ ಹೋದಾಗ ಬ್ರಹ್ಮನು ಒಂದು ಮುಖದಿಂದ ವೇದಗಳನ್ನು ಹೇಳುತ್ತಲೂ, ಇನ್ನೊಂದು ಮುಖದಿಂದ ನಾರಾಯಣ ನಾಮವನ್ನು ಜಪಮಾಡುತ್ತಲೂ, ಮತ್ತೊಂದು ಮುಖದಿಂದ ವಾಣಿಯ ಕಡೆ ನೋಡುತ್ತಲೂ ಇದ್ದು ಭೃಗುವನ್ನು ಗಮನಿಸಲಿಲ್ಲ. ಭೃಗುವು ನಂತರ ಕೈಲಾಸಕ್ಕೆ ಹೋದಾಗ ಶಿವನು ಪಾರ್ವತಿಯೊಂದಿಗೆ ಲೀಲಾನೃತ್ಯದಲ್ಲಿ ತೊಡಗಿದ್ದುದರಿಂದ ಭೃಗುವನ್ನು ಗಮನಿಸಲಿಲ್ಲ. ಬೇಸರಗೊಂಡ ಭೃಗುವು ಅಸಮಾಧಾನದಿಂದ ವೈಕುಂಠಕ್ಕೆ ಬಂದನು. ಲಕ್ಷ್ಮಿಯೊಡನೆ ಸಲ್ಲಾಪದಲ್ಲಿದ್ದ ಹರಿಯೂ ಭೃಗುವನ್ನು ಗಮನಿಸಲಿಲ್ಲ. ಋಷಿಗೆ ಕೋಪ ಅಂಗಾಲಿನಿಂದ ಮೇಲೇರಿ ವಿಷ್ಣುವಿನ ಎದೆಗೆ ಒದ್ದನು. ಕೂಡಲೇ ಎದ್ದವನಂತೆ ನಟಿಸಿದ ಹರಿಯು ಭೃಗುವಿನ ಪಾದವನ್ನು ಒತ್ತುತ್ತ ನೋವಾಯಿತೇ ಎಂದು ವಿಚಾರಿಸಿದ. ಶಾಂತನೂ, ಗರ್ವರಹಿತನೂ ಆದ ವಿಷ್ಣುವೇ ಸರ್ವೋತ್ತಮನೆಂದು ಭೃಗುವು ನಿರ್ಣಯಿಸಿ ತನ್ನ ತೀರ್ಪನ್ನು ಋಷಿಗಳಿಗೆ ಹೇಳಿ ಯಜ್ಞವನ್ನು ಹರಿಗೆ ಅರ್ಪಿಸಲು ಸೂಚಿಸಿದನು. ಆದರೆ ಭೃಗುವಿನಿಂದ ತಾಡಿತನಾದ ವಿಷ್ಣುವಿನ ಬಗ್ಗೆ ಲಕ್ಷ್ಮಿಯು ಅಸಮಾಧಾನ ಹೊಂದಿ ತನ್ನ ನಿತ್ಯನಿವಾಸವಾದ ವಿಷ್ಣು ವಕ್ಷಸ್ಥಳವನ್ನು ಬಿಟ್ಟು ವೈಕುಂಠವನ್ನು ತ್ಯಜಿಸಿ ಕರವೀರಪುರ ಅಥವಾ ಕೊಲ್ಲಾಪುರವನ್ನು ಸೇರಿದಳು. ಲಕ್ಷ್ಮಿಯಿಂದ ಪರಿತ್ಯಕ್ತನಾದ ಹರಿಯು ಅಲ್ಲಲ್ಲಿ ತಿರುಗಾಡುತ್ತ ಶೇಷಾಚಲಕ್ಕೆ ಆಗಮಿಸಿ ಇಲ್ಲಿನ ಪ್ರಕೃತಿಯನ್ನು ಚೆನ್ನಾಗಿದೆಯೆಂದು ಭಾವಿಸಿದ ಮೇಲೆ ಸ್ವಾಮಿಯು ಪುಷ್ಕರಿಣೀತಟದ ಹುತ್ತವೊಂದರಲ್ಲಿ ಯೋಗಧ್ಯಾನ ನಿರತನಾದನು.



**ಸ್ವಾಮಿಗೆ ಆಲಯ ನಿರ್ಮಾಣವಾದರೀತಿ :**

ಶೇಷಾಚಲದ ಮೇಲಿನ ಸ್ವಾಮಿಯನ್ನು ಆರಾಧಿಸಿದ ಹಲವು ರಾಜರ ಬಗ್ಗೆ ಪುರಾಣಗಳು ಹೇಳಿಕೆ ನೀಡುತ್ತ ಬೇರೆ ಬೇರೆಯವರು ಕಟ್ಟಿದ ಆಲಯಗಳ ಬಗ್ಗೆ ಹೇಳುತ್ತವೆ.

**ಶಂಖಿನ ಐತಿಹ್ಯ :** ಕೃತಯುಗದಲ್ಲಿ ಶಂಖಿನೆಂಬ ಸೂರ್ಯವಂಶದ ರಾಜನು ಆಳುತ್ತಿದ್ದನು. ಅವನ ಗುರು ವಸಿಷ್ಠ. ಶಾಶ್ವತವಾದ ಹೆಸರು ಕೀರ್ತಿ ದೊರೆಯುವಂತಹ ಯಾವುದಾದರೂ ಒಂದು ಕೆಲಸ ಮಾಡಬೇಕೆಂದು ಗುರುವನ್ನು ಕೇಳಿದಾಗ ವೆಂಕಟಾದ್ರಿಗೆ ಹೋಗಿ ಸ್ವಾಮಿಯನ್ನು ಪ್ರಾರ್ಥಿಸುವಂತೆ ಅವರು ಸಲಹೆ ನೀಡಿದರು. ಅದರಂತೆಯೇ ರಾಜನು ವೆಂಕಟಾದ್ರಿಗೆ ಬಂದು ತಪಸ್ಸು ಮಾಡಿದನು. ಸ್ವಾಮಿಯು ಒಂದು ವಿಮಾನದಲ್ಲಿ ಬಂದು ಅವನ ಮುಂದೆ ಇಳಿದು ತಾನು ಬಂದಂತಹ ವಿಮಾನದಂತೆಯೇ ಒಂದು ಗೋಪುರವನ್ನು ನಿರ್ಮಿಸಿ ಅದರಲ್ಲಿ ತನ್ನಂತೆಯೇ ಇರುವ ಒಂದು ಮೂರ್ತಿಯನ್ನಿಟ್ಟು ಪೂಜಿಸಲು ಹೇಳಿದನು. ಶಂಖಿನು ಅದರಂತೆ ಗುಡಿಯನ್ನು ನಿರ್ಮಿಸಿ ಸ್ವಾಮಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿದನು. ಕಲ್ಪಾಂತ್ಯದಲ್ಲಿ ದೇವಾಲಯವು ನಾಶವಾಗಿ ವಿಗ್ರಹವು ಮೊಣಕಾಲಿನವರೆಗೆ ಭೂಮಿಯಲ್ಲಿ ಮುಚ್ಚಿ ಹೋಯಿತು. ಮೇಲೆ ಒಂದು ಹುತ್ತ ಬೆಳೆದು ಒಂದು ಹುಣಿಸೆ ಮರವು ನೆರಳು ನೀಡುವಂತೆ ಅದರ ಪಕ್ಕದಲ್ಲೇ ಬೆಳೆಯಿತು.

**ಚೋಳ ರಾಜನ ಕಥೆ :** ಈ ಕಥೆಯು ಬ್ರಹ್ಮಾಂಡ ಪುರಾಣದಲ್ಲಿದೆ. ಅದು ಹೀಗೆ ನಡೆಯುತ್ತದೆ -

ಕಲಿಯುಗದಲ್ಲಿ ಒಬ್ಬ ಚೋಳರಾಜನು ಇದ್ದನು. ಒಮ್ಮೆ ಅವನು ಬೇಟೆಗೆ ಹೋದಾಗ ಶೇಷಾಚಲದಲ್ಲಿ ಅವನು ಅನೇಕ ಪ್ರಾಣಿಗಳನ್ನು ಕೊಂದನು. ಆಯಾಸ ಪರಿಹಾರಕ್ಕೆಂದು ಒಂದೆಡೆ ವಿಶ್ರಮಿಸಿಕೊಳ್ಳುತ್ತಿರುವಾಗ ಒಬ್ಬ ಸುಂದರ ತರುಣಿ ಹೂಗಳನ್ನು ಆಯುತ್ತ ಅಲ್ಲಿಗೆ ಬಂದಳು. ಆಕರ್ಷಿಕನಾದ ರಾಜನು ಅವಳ ಪೂರ್ವೋತ್ತರಗಳ ಬಗ್ಗೆ ವಿಚಾರಿಸಲಾಗಿ ಅವಳು ತಾನು ಧನಂಜಯನೆಂಬ ನಾಗರಾಜನ ಮಗಳೆಂದೂ ಹೇಳುತ್ತ ತನ್ನ ವಿವಾಹದ ಬಗ್ಗೆ ತಂದೆಯನ್ನು ವಿಚಾರಿಸಬೇಕೆಂದು ಹೇಳಿದಳು - ರಾಜನಿಗೆ ಈ ಎಲ್ಲ ಸಾಂಪ್ರದಾಯಿಕ ಆಚರಣೆಗಳಿಗೆ ಬಿಡುವಿಲ್ಲದುದರಿಂದ ಗಾಂಧರ್ವ ರೀತಿಯಲ್ಲಿ ವಿವಾಹವಾದರು. ತರುಣಿಯು ತವರು ಮನೆಗೆ ಹಿಂತಿರುಗಿದಳು. ಹೆಣ್ಣಿನ ತಂದೆ ಮದುವೆಯ ಬಗ್ಗೆ ಸಮ್ಮತಿಯನ್ನೂ ಸಂತಸವನ್ನೂ ಸೂಚಿಸಿದನು. ಆಕೆಗೆ ಒಂದು ಗಂಡು ಮಗುವಾಗಿ ತಾಯಿಯ ಜೊತೆಯಲ್ಲೇ ಬೆಳೆಯಿತು. ದೊಡ್ಡವನಾದ ಮಗನಿಗೆ ತಂದೆಯ ಗುರುತುಗಳನ್ನು ಹೇಳುತ್ತ ತಾಯಿಯು ಅವನನ್ನು ಚೋಳರಾಜರ ಬಳಿಗೆ ಕಳುಹಿಸಿದಳು. ತಾಯಿಯ ಆದೇಶದಂತೆ ತಂದೆಯನ್ನು ಕಂಡು ಮಗ ತನ್ನ ಪರಿಚಯವನ್ನು ನೀಡಿದನು. ಚೋಳರಾಜನಿಗೆ ಹುಡುಗ ಹೇಳುವ ವಿಷಯದ ಬಗ್ಗೆ ಅನುಮಾನ ಬಂದಾಗ ಅಶರೀರವಾಣಿಯೊಂದು ಹುಡುಗನ ಮಾತುಗಳೆಲ್ಲಾ ನಿಜವೆಂದೂ ಅವನಿಗೇ ಪಟ್ಟಾಭಿಷೇಕ ಮಾಡಬೇಕೆಂದು ತಿಳಿಸಿತು. ಅದರಂತೆಯೇ ರಾಜನು ತರುಣನಿಗೆ ಪಟ್ಟಾಭಿಷೇಕ ಮಾಡಿದನು. ಈ ನೂತನ ರಾಜನನ್ನು ಚೋಳ ಚಕ್ರವರ್ತಿಯೆಂದು ಕರೆದರು.

ಚೋಳ ಚಕ್ರವರ್ತಿಯ ಗೋಶಾಲೆಯ ಆಳುಗಳು ಬಂದು ತಾವು ಪ್ರತಿದಿನವೂ ಒಂದು ಹುತ್ತವನ್ನು ಸುತ್ತಿ - ಬರುವಾಗ ತಮ್ಮೊಂದಿಗಿದ್ದ ಹಾಲಿನ ಮಡಕೆಗಳು ಕೆಳಗೆ ಬಿದ್ದು ಒಡೆಯುವುದಾಗಿಯೂ, ಹಾಲು ಹುತ್ತವನ್ನು ಸೇರುತ್ತಿರುವುದಾಗಿ ತಿಳಿಸಿದರು. ಅಂದು ರಾತ್ರಿ ರಾಜನ ಕನಸಿನಲ್ಲಿ ಕಪ್ಪು ಬಣ್ಣದ ಒಬ್ಬ ಆಕರ್ಷಕ ಪುರುಷನು ಕಾಣಿಸಿಕೊಂಡು ತಾನು ಶ್ರೀನಿವಾಸನ ಜೊತೆಗೆ ಶೇಷಾದ್ರಿಯಲ್ಲಿ ಇರುವುದಾಗಿಯೂ ಶ್ರೀನಿವಾಸನು ಶ್ರೀ ಭೂ ಸಮೇತ ಇರುವುದಾಗಿಯೂ ರಾಜನು ಒಂದು ಸ್ವಾಮಿಯನ್ನು ನೋಡಬೇಕೆಂದು ತಿಳಿಸಿದಾಗ ಕನಸು ಮುಂದುವರೆದು ಶೇಷಾದ್ರಿಗೆ ಹೋದ ರಾಜನು ಪ್ರಕಾಶಮಾನವಾದ ಒಂದು ವಿಮಾನವನ್ನು ಕಂಡನು. ಮರುದಿನ ಒಬ್ಬ ಶಬರನು ಬಂದು ರಾಜನಿಗೆ ಒಂದು ಕತೆಯನ್ನು ತಿಳಿಸಿದನು. 'ಸ್ವಾಮಿ ನಾನು ಶೇಷಾದ್ರಿಯಲ್ಲಿ ಇರುವ ಶಬರ. ಅಲ್ಲಿ ನವಣೆಯನ್ನು ಬೆಳೆಯುತ್ತೇನೆ. ಸ್ವಲ್ಪ ಭಾಗವನ್ನು ದೇವರಿಗೆ ಅರ್ಪಿಸಿ, ಮಿಕ್ಕದ್ದನ್ನು ನಾನೇ ಬಳಸುತ್ತೇನೆ. ಒಮ್ಮೆ ಬಿಳಿಯ ಹಂದಿಯೊಂದು ನನ್ನ ಬೆಳೆಯನ್ನು ಹಾಳುಮಾಡುತ್ತಿದ್ದುದನ್ನು ಕಂಡೆನು. ಹಾಗಾಗಿ ಕಾವಲಿಗೆ ನನ್ನ ಮಗನನ್ನು ಇಟ್ಟು ಜೇನು ಹಿಡಿಯಲು ಹೋದೆನು. ಹಿಂತಿರುಗಿ ಬಂದಾಗ ನನ್ನ ಮಗನು ದೇವರಿಗೆ ನಿವೇದನೆ ಮಾಡದೆ ಊಟಮಾಡಿ ಬಿಟ್ಟಿದ್ದನು. ಅವನನ್ನು ಕೊಂದುಬಿಡುವಷ್ಟು ಕೋಪ ಬಂದಿತು. ಆದರೆ ಹುಡುಗನು ಊಟಮಾಡುವ ಮೊದಲೇ ದೇವರು ಊಟಮಾಡಿದ್ದನೆಂದೂ, ಹುಡುಗನ ತಪ್ಪೇನೂ ಇಲ್ಲವೆಂಬ ಆಕಾಶವಾಣಿಯು ಹೇಳಿತು' - ಎಂದನು. ಚೋಳ ಚಕ್ರವರ್ತಿಯು ತನ್ನೊಡನೆ ಸ್ವಾಮಿಗೆ ಒಂದು ಸಾವಿರ ಕೊಡಗಳ ಹಾಲನ್ನು ಕಳುಹಿಸಬೇಕೆಂದು ಮಂತ್ರಿಗಳಿಗೆ ಆಜ್ಞಾಪಿಸಿ ತಾನು ಶಬರನ ಹಿಂದೆ ಶೇಷಾಚಲಕ್ಕೆ ಬಂದನು. ಹುತ್ತವನ್ನು ತೋರಿಸಿದ ಶಬರನು ಅದನ್ನು ಅಗೆಯಬೇಕೆಂದು ಸೂಚಿಸಿದನು. ಆದರೆ ರಾಜನಿಗೆ ಭಯ - ತನ್ನ ಮಂತ್ರಿಗಳು ಕಳಿಸಿದ್ದ ಹಾಲನ್ನು ಹುತ್ತಕ್ಕೆ ನಿವೇದಿಸಲು ಹೇಳಿದನು. ಹಾಲಿನಲ್ಲಿ ಹುತ್ತವು ಕರಗಿತು. ಶಂಖ ಚಕ್ರಗಳನ್ನು ಮೇಲಿನ ಎರಡೂ ಕೈಗಳಲ್ಲಿ ಹೊಂದಿ ಕೆಳಗಿನೆರಡು ಕೈಗಳು ವರದ ಹಸ್ತವೂ ಸೊಂಟದ ಮೇಲಿದ್ದ ಹಸ್ತವೂ ಆಗಿರುವಂತೆ ಸ್ವಾಮಿಯು ಮನೋಹರವಾಗಿ ಕಾಣಿಸಿಕೊಂಡನು. ನಾನಾ ಪ್ರಕಾರವಾಗಿ ಸ್ವಾಮಿಯನ್ನು ಸ್ತುತಿಸಿದ ರಾಜನು, ಸ್ವಾಮಿಯನ್ನು ಹಾಗೆಯೇ ನಿಲ್ಲಲು ಬೇಡಿಕೊಂಡನು. ತಥಾಸ್ತು ಎಂದ ಸ್ವಾಮಿಯು ದಿನವೂ ತನ್ನನ್ನು ಪೂಜಿಸಲು ಚೋಳರಾಜನಿಗೆ ತಿಳಿಸಿದನು. ದಿನವೂ ಚಕ್ರವರ್ತಿ ಪೂಜಿಸುತ್ತಿರುವಾಗ ಸ್ವಾಮಿಯು ಸ್ನೇಹಿತನಂತೆ ಅವನೊಡನೆ ಮಾತುಕತೆಯಾಡುತ್ತಿದ್ದನು.

ಒಮ್ಮೆ ಕೃಷ್ಣಶರ್ಮನೆಂಬ ಬ್ರಾಹ್ಮಣನು ತನ್ನ ಪತ್ನಿ ಹಾಗೂ ಮಗುವಿನೊಡನೆ ರಾಜನ ಬಳಿಗೆ

ಬಂದನು. ತಾನು ಕಾಶೀಯಾತ್ರೆ ಮಾಡುತ್ತಿರುವುದಾಗಿಯೂ, ತಾನು ಬರುವವರೆಗೆ ತನ್ನ ಹೆಂಡತಿ ಹಾಗೂ ಮಗುವನ್ನು ರಾಜನು ತನ್ನ ಆಶ್ರಯದಲ್ಲಿ ಇಟ್ಟುಕೊಂಡು ಪೋಷಿಸಬೇಕೆಂದು ಪ್ರಾರ್ಥಿಸಿದನು. ಇದಕ್ಕೆ ಒಪ್ಪಿಕೊಂಡ ರಾಜನು ಒಂದು ಪ್ರತ್ಯೇಕವಾದ ಮನೆಯನ್ನು ಆ ಹೆಂಗಸಿಗೆ ನೀಡಿ ಆರು ತಿಂಗಳಿಗೆ ಬೇಕಾಗುವ ಸಾಮಗ್ರಿಗಳನ್ನು ಕೊಟ್ಟನು. ನಂತರ ಕಾಲಕ್ರಮದಲ್ಲಿ ಈ ಹೆಂಗಸು ಮತ್ತು ಮಗುವಿನ ಬಗ್ಗೆ ಮರೆತು ಹೋದನು. ಕಾಶೀಯಾತ್ರೆಯಿಂದ ಹಿಂತಿರುಗಿದ ಕೃಷ್ಣಶರ್ಮನು ರಾಜನಲ್ಲಿಗೆ ಬಂದು ತನ್ನ ಹೆಂಡತಿ ಮಗುವಿನ ಬಗ್ಗೆ ವಿಚಾರಿಸಿದಾಗಲೇ ರಾಜನಿಗೆ ಅವರ ನೆನಪು ಬಂದದ್ದು. ಆ ಹೆಂಗಸಿನ ಮನೆಗೆ ಆಳನ್ನು ಕಳಿಸಿ ವಿಚಾರಿಸಲು ಆ ಮನೆಯಲ್ಲಿ ತಾಯಿ ಮಗು ಮರಣ ಹೊಂದಿದ್ದು ಅವರ ಅಸ್ಥಿಗಳು ಮಾತ್ರವೇ ಇರುವುದಾಗಿ ಸೇವಕರು ಬಂದು ತಿಳಿಸಿದರು. ತನ್ನ ತಪ್ಪನ್ನು ಅರಿತ ರಾಜನು ಕೃಷ್ಣಶರ್ಮನಿಗೆ ಈ ವಿವರಗಳನ್ನು ತಿಳಿಸದೆ ಅವರು ಸ್ವಾಮಿಯನ್ನು ನೋಡಲು ಶೇಷಾಚಲಕ್ಕೆ ಹೋಗಿರುವುದಾಗಿಯೂ ಮಾರನೆಯ ದಿನ ಅವರನ್ನು ಭೇಟಿಯಾಗಬಹುದೆಂದು ತಿಳಿಸಿ ಅವನನ್ನು ವಿಶ್ರಾಂತಿಗೆ ಕಳಿಸಿದನು. ತಾನು ಕೂಡಲೇ ಓಡಿ ಬಂದು ಶರಣಾಗಿ ಸ್ವಾಮಿಯನ್ನು ಕಾಪಾಡಬೇಕೆಂದು ಬೇಡಿಕೊಂಡನು. ಸ್ವಾಮಿಯು ತನ್ನ ಸೈನ್ಯಾಧಿಪತಿ ವಿಷ್ವಕ್ಸೇನನನ್ನು ಕರೆದು ಅಸ್ಥಿಕೂಟ ತೀರ್ಥದಿಂದ ನೀರನ್ನು ತಂದು ಪ್ರೋಕ್ಷಿಸಿ ಅವರನ್ನು ಬದುಕಿಸಬೇಕೆಂದು ಆಜ್ಞಾಪಿಸಿದನು. ತಾಯಿ ಮಗು ನಿದ್ದೆಯಿಂದ ಎದ್ದವರಂತೆ ಎಚ್ಚೆತ್ತರು. ಕೃಷ್ಣಶರ್ಮನಿಗೆ ರಾಜನು ಅವರಿಬ್ಬರನ್ನು ಒಪ್ಪಿಸಿದನು.

ಕೆಲಕಾಲಾನಂತರ ಸಿಂಹಾದನೆಂಬ ದೈತ್ಯನು ಬೆಟ್ಟದ ಮೇಲೆ ನೆಲೆಸಿದನು. ಅವನು ತಪಸ್ಸು ಮಾಡಿ ಭೂಮಿಯ ಸ್ವರ್ಗದ ಅಥವಾ ಮರ್ತ್ಯದ ಯಾರೂ ತನ್ನನ್ನು ಕೊಲ್ಲಲಾಗದು ಎಂಬ ವರವನ್ನು ಪಡೆದು ದೇವತೆಗಳನ್ನು ಹಿಂಸಿಸಲು ಪ್ರಾರಂಭಿಸಿದನು. ಆಗ ದೇವತೆಗಳು ಸ್ವಾಮಿಯ ಮೊರೆ ಹೊಕ್ಕರು. ಸ್ವಾಮಿಯು ತನ್ನ ಭಕ್ತನಾದ ಚಕ್ರವರ್ತಿಯ ಬಳಿಗೆ ಹೋಗಿ ತಂತಮ್ಮ ಅಂಶಗಳಿಂದ ಅವನನ್ನು ಸೇರಿ ತಮಗೆ ನೆರವು ನೀಡುವಂತೆ ಅವನನ್ನು ಕೇಳಲು ಹೇಳಿದನು. ಅವರ ಮೊರೆಯನ್ನು ಕೇಳಿದ ರಾಜನು ಶೇಷಾದ್ರಿಗೆ ಬಂದು ಸ್ವಾಮಿಯ ಮಾರ್ಗದರ್ಶನ ಬೇಡಿದನು. ಸ್ವಾಮಿಯು ಆತನಿಗೆ ತನ್ನ ಶಂಖ ಚಕ್ರಗಳನ್ನು ನೀಡಿ ಅಸುರರನ್ನು ಕೊಲ್ಲಲು ಹೇಳಿದನು. ಪಾಪನಾಶನ ತೀರ್ಥದಲ್ಲಿ ದೈತ್ಯನನ್ನು ಎದುರಿಸಿದ ರಾಜನು ಅವನನ್ನು ಸ್ವಾಮಿಯ ಚಕ್ರದಿಂದ ಕೊಂದು ಹಾಕಿದನು. ಹಿಂತಿರುಗಿ ಬಂದು ಸ್ವಾಮಿಗೆ ವಂದನೆಗಳನ್ನು ಹೇಳಿ ಆಯುಧಗಳನ್ನು ಹಿಂತಿರುಗಿಸಿದನು. ಸ್ವಾಮಿಯು ತನ್ನ ಆಯುಧಗಳಿಗೆ ಅವುಗಳ ಹೆಸರಿನ ತೀರ್ಥಗಳಲ್ಲಿ ನೆಲೆಸುವಂತೆ ಹೇಳಿದನು. ತಾನು ಕೆಲವು ದಿನಗಳು ಆಯುಧಗಳಿಲ್ಲದೆ ನಿಲ್ಲುವುದಾಗಿಯೂ ಕಲಿಯುಗದಲ್ಲಿ ತನಗೆ ಬೇರೊಬ್ಬ ವ್ಯಕ್ತಿಯು ಬಂದು ಶಂಖಚಕ್ರಗಳನ್ನು ತೊಡಿಸುವುದಾಗಿಯೂ ತಿಳಿಸಿದನು.

**ರಂಗದಾಸನ ಕತೆ :**

ಈ ಕತೆಯು ಬ್ರಹ್ಮಾಂಡ ಪುರಾಣದಲ್ಲಿದ್ದು ಕತೆ ಹೀಗೆ ನಡೆಯುತ್ತದೆ - ಒಂದು ಕಾಲದಲ್ಲಿ ಚೋಳರಾಜ್ಯದಲ್ಲಿ ಗೋಪೀನಾಥನೆಂಬ ವೈಖಾನಸ ಬ್ರಾಹ್ಮಣನು ಇದ್ದನು. ಈತನು ಶ್ರೀಕೃಷ್ಣನ ಅನನ್ಯ ಭಕ್ತ. ಶ್ರೀಕೃಷ್ಣನು ತನಗೆ ಮುಕ್ತಿಯನ್ನು ಕೊಡಬೇಕೆಂದು ಪ್ರಾರ್ಥಿಸಿದನು. ಶ್ರೀಕೃಷ್ಣನು ಈತನಿಗೆ ಶೇಷಾದ್ರಿ ಪರ್ವತಕ್ಕೆ ಹೋಗಿ ಅಲ್ಲಿನ ಶ್ರೀನಿವಾಸನನ್ನು ಪೂಜಿಸಬೇಕೆಂದೂ ಅಲ್ಲಿ ರಂಗದಾಸನೆಂಬ ಶೂದ್ರನು ಇವನನ್ನು ಭೇಟಿಯಾಗುವುದಾಗಿಯೂ ಈತನು ರಂಗದಾಸನಿಗೆ ಅನುಕೂಲವಾಗಿ ಇರಬೇಕೆಂದು ನುಡಿದನು - ಗೋಪಿನಾಥನು ಶೇಷಾದ್ರಿಬೆಟ್ಟದ ಬುಡಕ್ಕೆ ಬಂದು ರಂಗದಾಸನನ್ನು ಕಂಡನು. ಇಬ್ಬರೂ ಬೆಟ್ಟದ ಮೇಲೇರಿ ಹುತ್ತದಲ್ಲಿ ಮುಳುಗಿದ್ದ ಸ್ವಾಮಿಯ ವಿಗ್ರಹವನ್ನು ಮೇಲಕ್ಕೆ ತೆಗೆದು ಅದನ್ನು ತೆಂಗುಗರಿಯ ಛಾವಣಿಯ ಮಂಟಪದಲ್ಲಿ ಸ್ಥಾಪನೆ ಮಾಡಿ ಸುತ್ತಲೂ ಕಲ್ಲಿನ ಗೋಡೆಯನ್ನು ಕಟ್ಟಿದರು. ರಂಗದಾಸನು ಸ್ವಾಮಿಯ ಪೂಜೆಗೆ ಹೂಗಳನ್ನು ನೀರನ್ನೂ ತಂದುಕೊಡುತ್ತಿದ್ದರು. ಗೋಪಿನಾಥನು ಸ್ವಾಮಿಯನ್ನು ಅರ್ಚನೆ ಮಾಡುತ್ತಿದ್ದನು. ಒಂದು ದಿನ ರಂಗದಾಸನು ಹೂಗಳನ್ನು ತರುತ್ತಿರುವಾಗ ಆಕಾಶದಲ್ಲಿ ಗಂಧರ್ವರು ವಿಷಯಾಸಕ್ತರಾಗಿರುವುದನ್ನು ಕಂಡು ಚಿತ್ತ ಚಾಂಚಲ್ಯವನ್ನು ಹೊಂದಿದನು. ದೇವರ ಬಗೆಗಿನ ಏಕನಿಷ್ಠೆ ಸಡಿಲವಾದದ್ದನ್ನು ಮನಗಂಡು ಈಗಾಗಲೇ ಮಾಡಿದ್ದ ಹಾರಗಳನ್ನು ಬಿಸುಟು ಮತ್ತೆ ಸ್ನಾನಮಾಡಿ ಹಾರಕಟ್ಟಿ ದೇವಾಲಯಕ್ಕೆ ತಂದನು. ಗೋಪಿನಾಥನು ತಡವಾಗಿ ಬಂದ ರಂಗದಾಸನನ್ನು ಬೈದರೂ ನಾಚಿಕೆಯಿಂದಾಗಿ ರಂಗದಾಸನು ತನ್ನ ನಿಧಾನಕ್ಕೆ ಕಾರಣವನ್ನು ಹೇಳಲಿಲ್ಲ.

ಒಂದು ಅಶರೀರವಾಣಿಯು ಹೀಗೆ ಹೇಳಿತು. "ನಿನ್ನ ಚಿತ್ತ ಚಂಚಲವಾಗಿದೆ, ನಿನ್ನಿಂದ ಯಾವುದೇ ಉತ್ತಮ ಕೆಲಸವೂ ಆಗದು. ಆದ್ದರಿಂದ ಒಬ್ಬ ರಾಜನ ಜನ್ಮವನ್ನು ಪಡೆದು ಎಲ್ಲ ಐಹಿಕ ಸುಖಗಳನ್ನೂ ಅನುಭವಿಸಿ ನನಗಾಗಿ ಒಂದು ಸುಂದರವಾದ ದೇವಾಲಯವನ್ನು ನಿರ್ಮಿಸು. ನಿನಗೆ ಶತ್ರುಗಳು ತೊಂದರೆ ಕೊಡುತ್ತಾರೆ. ಆಗ ನನ್ನ ಶಂಖ ಚಕ್ರಗಳನ್ನು ನಿನಗೆ ನೀಡುತ್ತೇನೆ."

ರಂಗದಾಸನು ಮರಣ ಹೊಂದಿದಮೇಲೆ ರಾಜನಾಗಿ ಪುನರ್ಜನ್ಮ ಪಡೆದನು. ಈಗ ಅವನೊಬ್ಬ ಚಕ್ರವರ್ತಿ. ಅವನ ದ್ರಾವಿಡರಾಜ್ಯದ ಜನ ಅವನನ್ನು ತೊಂಡಮಾನ್ ಎಂದು ಗುರುತಿಸಿದರು. ಈತನು ನಾರಾಯಣವನದಲ್ಲಿದ್ದುಕೊಂಡು ಪ್ರತಿದಿನವೂ ಶೇಷಾಚಲಕ್ಕೆ ಹೋಗಿ ಸ್ವಾಮಿಯನ್ನು ಸೇವಿಸುತ್ತಿದ್ದನು. ಕಾಲಕ್ರಮದಲ್ಲಿ ದೇವರಿಗೆಂದು ಎರಡು ಗೋಪುರಗಳು ಎರಡು ಪ್ರಾಕಾರಗಳನ್ನು ಇರುವಂತಹ ಗರ್ಭಗೃಹವನ್ನು ನಿರ್ಮಿಸಿದನು. ಯಾಗಶಾಲೆಯನ್ನು, ಉಗ್ರಾಣ, ಗೋಶಾಲೆಗಳನ್ನು ನಿರ್ಮಿಸಿದನು. ದೇವರಿ ಗೆಂದು ಅನೇಕ ಆಭರಣಗಳನ್ನು ಮಾಡಿಸಿದನು. ಅನೇಕ ಉತ್ಸವಗಳನ್ನು ಉತ್ಸಾಹದಿಂದ ಏರ್ಪಡಿಸಿದನು.



ಒಮ್ಮೆ ಶತ್ರುಗಳು ತೊಂಡಮಾನನ ರಾಜ್ಯವನ್ನು ಆಕ್ರಮಿಸಿ ಅವನಿಗೆ ಕಿರುಕುಳ ಕೊಡಲು ಆರಂಭಿಸಿದರು. ತೊಂಡಮಾನನು ದೇವರ ಬಳಿಗೆ ಹೋಗಿ ಸಹಾಯವನ್ನು ಯಾಚಿಸಿದನು. ದೇವರು ತನ್ನ ಶಂಖ ಚಕ್ರಗಳನ್ನು ಅವನಿಗೆ ಕೊಟ್ಟು ಯುದ್ಧಮಾಡಲು ಹೇಳಿದನು. ದೇವರ ಶಂಖಚಕ್ರಗಳನ್ನು ಬಳಸಿ ಶತ್ರುನಿವಾರಣೆ ಮಾಡಿಕೊಂಡ ತೊಂಡಮಾನನು ದೇವರಿಗೆ ಶಂಖ ಚಕ್ರಗಳಿಲ್ಲದೆ ಹಾಗೆಯೇ ನಿಲ್ಲಬೇಕೆಂದು ಬೇಡಿಕೊಂಡನು. ದೇವರು ಇದನ್ನು ಒಪ್ಪಿಕೊಂಡರು.

**ದೇವರು ಪೆಟ್ಟು ತಿಂದ ರೀತಿ :**

ಭವಿಷ್ಯೋತ್ತರ ಪುರಾಣದಲ್ಲಿ ಕತೆ ಹೀಗಿದೆ-

ಲಕ್ಷ್ಮಿಯು ಬ್ರಹ್ಮ ಶಿವರನ್ನು ಹಸು ಕರುಗಳನ್ನಾಗಿ ಮಾಡಿ ಚೋಳರಾಜನಿಗೆ ವಿಕ್ರಯಿಸಿದಳು. ಬ್ರಹ್ಮ ರೂಪದಲ್ಲಿದ್ದ ಹಸುವು ಶೇಷಾಚಲದಲ್ಲಿ ಸತ್ತಾಡಿ ಹರಿಯು ಧ್ಯಾನಮಗ್ನನಾಗಿದ್ದಂತಹ ಹುತ್ತವನ್ನು ಕಂಡುಕೊಂಡಿತು. ಆ ನಂತರ ಈ ಹಸುವು ತನ್ನ ಹಾಲನ್ನೆಲ್ಲ ಹುತ್ತದಲ್ಲಿ ಸೋರಿಬಿಟ್ಟು ರಾಜನ ಗೌಳಿಗನಿಗೆ ಒಂದು ಹನಿಯನ್ನು ಉಳಿಸಲಿಲ್ಲ. ಗೌಳಿಗನು ಹಾಲನ್ನು ತಾನೇ ಬಳಸುವನೆಂದು ರಾಣಿಯು ದೂರಿದಳು. ಮಾರನೆಯ ದಿನ ಗೌಳಿಯು ಹಸುವನ್ನು ಹಿಂಬಾಲಿಸಿ ಅದು ಹುತ್ತಕ್ಕೆ ಹಾಲು ಎರೆಯುವುದನ್ನು ನೋಡಿ ಕೋಪದಿಂದ ಕೈಯ್ಯಲ್ಲಿದ್ದ ಪರಶುವಿನಿಂದ ಹಸುವಿಗೆ ಹೊಡೆಯಹೋದನು. ಹುತ್ತದಿಂದ ಹೊರಬಂದ ಸ್ವಾಮಿಯು ಹಸುವಿಗೆ ಬೀಳಬೇಕಾದ ಪೆಟ್ಟನ್ನು ತಾನು ಸ್ವೀಕರಿಸಿದನು. ತಲೆಯ ಮೇಲೆ ಉಂಟಾದ ಗಾಯದಿಂದ ರಕ್ತವು ಚಿಮ್ಮಿ ಹರಿಯಿತು. ಈ ದೃಶ್ಯವನ್ನು ಕಂಡ ಗೌಳಿಯು ದಿಗ್ಭ್ರಮೆಯಿಂದ ಸತ್ತನು. ಹಿಂದೆಯೇ ಬಂದ ಚೋಳರಾಜನು ದಿಗ್ಭ್ರಾಂತನಾಗಿ ನಿಂತಾಗ ಸ್ವಾಮಿಯು ಪಿಶಾಚ ಜನ್ಮವನ್ನು ಪಡೆಯುವಂತೆ ಶಪಿಸಿದನು. ನಂತರ ಶಾಪವಿಮೋಚನೆಯನ್ನು ಕುರಿತು ಹೇಳುತ್ತ ತಾನು ಪದ್ಮಾವತಿಯನ್ನು ವಿವಾಹವಾದಾಗ ಆಕಾಶರಾಜನು ತನಗೆ ಕಿರೀಟವನ್ನು ತೊಡಿಸುವನೆಂದೂ, ಆ ಕಿರೀಟವನ್ನು ತಾನು ಪ್ರತಿ ಶುಕ್ರವಾರವೂ ಧರಿಸುವುದಾಗಿಯೂ ಆ ಕಿರೀಟ ಇರುವಷ್ಟು ಹೊತ್ತು ತನಗೆ ನೋವು ತಿಳಿಯದೆಂದೂ, ರಾಜನಿಗೆ ಆ ಹೊತ್ತಿನಿಂದ ಪಿಶಾಚದ ಜನ್ಮಹೋಗಿ ಸದ್ಗತಿ ದೊರೆಯುವುದೆಂದು ಹೇಳಿದನು.

**ಶ್ರೀನಿವಾಸಕಲ್ಯಾಣ :**

ಈ ಕಥೆಯು ಭವಿಷ್ಯೋತ್ತರ ಪುರಾಣದಲ್ಲಿದ್ದು ಕತೆ ಹೀಗೆ ಸಾಗುವುದು.

ಒಂದು ಬಾರಿ ಶೇಷಾಚಲದಲ್ಲಿ ಇದ್ದ ಶ್ರೀನಿವಾಸನು ಸಕಲಾಭರಣ ಭೂಷಿತನಾಗಿ ಬೇಟೆಗೆ ಹೊರಟನು. ಆನೆಗಳನ್ನು ಹಿಂಬಾಲಿಸಿ ಬಹುದೂರ ಹೋದಮೇಲೆ ಒಂದು ಉದ್ಯಾನವನವನ್ನು ಹೊಕ್ಕನು. ಅಲ್ಲಿದ್ದ ಆಕಾಶರಾಜನ ಸಾಕುಮಗಳು ಪದ್ಮಾವತಿ ದೇವಿ ಆನೆಗಳನ್ನು ಕಂಡು ಹೆದರಿ ಆಡುತ್ತಿದ್ದ ತನ್ನ ಸಖಿಯರೊಡನೆ ಒಂದು ಮರದ ಹಿಂದೆ ನಿಂತುಕೊಂಡಳು. ಆಕಾಶರಾಜನೂ ಅವನ ತಮ್ಮ ತೊಂಡಮಾನನೂ ಚಂದ್ರವಂಶದ ಸುವೀರ ರಾಜನ ಮಕ್ಕಳು. ಈ ಹಿಂದೆ ಯಾಗಶಾಲೆಗಾಗಿ ನೆಲವನ್ನು ಅಗೆಯುತ್ತಿರಬೇಕಾದರೆ ಆಕಾಶರಾಜನಿಗೆ ಪದ್ಮಕೋಶದಲ್ಲಿ ಒಂದು ಹೆಣ್ಣು ಮಗು ದೊರೆಯಿತು. ಮಕ್ಕಳಿಲ್ಲದ ರಾಜ ಮಗುವಿಗೆ ಪದ್ಮಾವತಿಯೆಂದು ಹೆಸರಿಟ್ಟು ಪ್ರೀತಿಯಿಂದ ಬೆಳೆಸಿದನು. ನಂತರ ವಸುದಾನ ನೆಂಬ ಮಗನು ಆಕಾಶರಾಜನಿಗೆ ಜನಿಸಿದನು. ಪ್ರಸ್ತುತ ಶ್ರೀನಿವಾಸನು ತಾನು ದೇವಕಿ ವಸುದೇವರ ಮಗನೂ, ಬಲಭದ್ರ ಸುಭದ್ರೆಯರ ಸೋದರನೂ ಆದಂತಹ ಕೃಷ್ಣನೆಂದು ಪರಿಚಯಮಾಡಿಕೊಂಡು ಪದ್ಮಾವತಿಯ ಪಾಣಿಗ್ರಹಣಕ್ಕಾಗಿ ಕೇಳಿದನು. ಇವನು ಯಾರೋ ಉದ್ಧಟನಿರಬೇಕೆಂದು ಪದ್ಮಾವತಿಯ ಸಖಿಯರು ಅವನನ್ನು ಕಲ್ಲುಗಳಿಂದ ಹೊಡೆಯತೊಡಗಿದರು. ಅಂತಹ ಒಂದು ಕಲ್ಲು ತಾಕಿ ಶ್ರೀನಿವಾಸನ ಕುದುರೆಯು ಮರಣಿಸಿತು. ಶ್ರೀನಿವಾಸನು ಉತ್ತರದಿಕ್ಕಿಗೆ ನಡೆದು ನಿರ್ಗಮಿಸಿದನು.

ಸ್ವಾಮಿಯು ವಿರಹತಪ್ತನಾಗಿ ಶೇಷಾಚಲವನ್ನು ಸೇರಿದಾಗ ಅವನನ್ನು ವಿಚಾರಿಸಿದ ವಕುಳ ಮಾತೆಯು ಆತನು ಪದ್ಮಾವತಿಯಲ್ಲಿ ಅನುರಕ್ತನಾಗಿರುವುದನ್ನು ತಿಳಿದುಕೊಂಡಳು. ಸ್ವಾಮಿಯು ವಕುಳ ಮಾಲಿಕೆಗೆ ಆಕಾಶರಾಜನಲ್ಲಿ ಅವನ ಮಗಳನ್ನು ವಿವಾಹಕ್ಕೆಂದು ಕೇಳಲು ಕಳುಹಿಸಿದನು. ತಾನು ಕಣಿ ಹೇಳುವ ಸ್ತ್ರೀಯಂತೆ ವೇಷಧರಿಸಿ ಆಕಾಶರಾಜನ ಪತ್ನಿ ಧರಿಣಿದೇವಿಗೆ ಶ್ರೀನಿವಾಸನ ಗುಣಗಣಗಳನ್ನು ತಿಳಿಸಿ ಪದ್ಮಾವತಿಗೆ ಶ್ರೀನಿವಾಸನೊಂದಿಗೆ ಮದುವೆ ಮಾಡುವುದೇ ಸೂಕ್ತವೆಂದು ಹೇಳಿದನು. ವಕುಳ ಮಾಲಿಕೆಯು ನಾರಾಯಣವನಕ್ಕೆ ಬಂದು ಆಕಾಶರಾಜನನ್ನು ಕೇಳುವುದಕ್ಕೆ ಮೊದಲೇ ಅವರುಗಳು ಮದುವೆ ಮಾಡಲು ಸಿದ್ಧರಾಗಿದ್ದರು. ಶ್ರೀನಿವಾಸನು ತನ್ನ ಸಮಸ್ತ ಬಂಧು ಬಾಂಧವ ದೇವ ದೇವತೆಗಳನ್ನು ಆಹ್ವಾನಿಸಿ ಅವರೆಲ್ಲರ ಸಮಕ್ಷಮದಲ್ಲಿ ಪದ್ಮಾವತಿಯನ್ನು ವಿವಾಹವಾದನು.

**ತೊಂಡಮಾನನು ಆಲಯವನ್ನು ನಿರ್ಮಿಸಿದ ಬಗೆ :**

ಶ್ರೀನಿವಾಸ ಕಲ್ಯಾಣವಾದ ಕೆಲ ಕಾಲದ ನಂತರ ಆಕಾಶರಾಜನು ಮರಣಿಸಲು ತೊಂಡಮಾನನೂ, ವಸುದಾನನೂ ರಾಜ್ಯಕ್ಕಾಗಿ ಜಗಳವಾಡಿದರು. ಪದ್ಮಾವತಿಯ ಪ್ರಭಾವದಿಂದ ಈ ವಿವಾದದಲ್ಲಿ ಶ್ರೀನಿವಾಸನು ನ್ಯಾಯ ಮಾಡಲು ತೊಡಗಿ ರಾಜ್ಯವನ್ನು ಎರಡು ಭಾಗ ಮಾಡಿ ತೊಂಡಮಂಡಲವನ್ನು ತೊಂಡಮಾನನಿಗೂ ನಾರಾಯಣವನವನ್ನು ವಸುಧಾನನಿಗೂ ಸೇರುವಂತೆ ತೀರ್ಪು ನೀಡಿದನು.

ಈ ತೊಂಡಮಾನನೇ ಹಿಂದಿನ ಜನ್ಮದಲ್ಲಿ ರಂಗದಾಸನಾಗಿದ್ದನು. ಹೀಗಾಗಿ ಸ್ವಾಮಿಯು ತನಗಾಗಿ ಒಂದು ನೆಲೆಯನ್ನು ನಿರ್ಮಿಸಬೇಕೆಂದು ತೊಂಡಮಾನನಿಗೆ ಹೇಳಿದನು. ರಂಗದಾಸನು ಅರ್ಥಾತ್ ತೊಂಡಮಾನನು ಸ್ವಾಮಿಯ ಮಾತಿನಂತೆ ಒಂದು ಆಲಯವನ್ನು ನಿರ್ಮಿಸಿದನು.

(ಮುಂದಿನ ತಿಂಗಳು - ಆಲಯ ವಿವರಣೆ)

# ಎಸ್. ವಿ. ನಿತ್ಯಾನ್ನದಾನ ಟ್ರಸ್ಟ್ - ತಿರುಪತಿ

1985 ರ ಏಪ್ರಿಲ್ ಆರರಂದು ತಿರುಮಲೆಯಲ್ಲಿ ಸ್ವಾಮಿಯ ದರ್ಶನ ಮಾಡಿಬಂದ ಯಾತ್ರಿಕರಿಗೆ ಭೋಜನ ನೀಡುವುದರಿಂದ ಎಸ್.ವಿ. ನಿತ್ಯಾನ್ನದಾನ ಯೋಜನೆ ಆರಂಭವಾಯಿತು. ಪರಂಪರೆ ಹಾಗೂ ಸಂಪ್ರದಾಯದಂತೆ ಎಲ್ಲ ಹಿಂದೂ ದೇವಾಲಯಗಳಲ್ಲಿಯೂ ಸ್ವಾಮಿಯ ನಿವೇದಿತ ಆಹಾರವನ್ನು ಪ್ರಸಾದವೆಂದು ಪವಿತ್ರಭಾವದಿಂದ ಸ್ವೀಕರಿಸುವುದು ಆಚಾರವಾಗಿದ್ದು, ಇಂತಹ ಒಂದು ಉನ್ನತ ಉದ್ದೇಶದಿಂದಲೇ ಈ ಯೋಜನೆಯು ಆರಂಭವಾಯಿತು.

1985 ರಲ್ಲಿ ಆರಂಭವಾದಾಗ ಪ್ರತಿನಿತ್ಯ ಎರಡು ಸಾವಿರ ಮಂದಿ ಭಕ್ತರಿಗೆ ಉಚಿತ ಭೋಜನ ಪ್ರಸಾದ ಒದಗಿಸುವ ಈ ಯೋಜನೆಯು ಸ್ಫೂರ್ತಿ, ಸಂಪನ್ಮೂಲ ವ್ಯಾಪ್ತಿಗಳು ದಿನೇ ದಿನೇ ಹೆಚ್ಚಿ ಇಂದು ದಿನವೊಂದಕ್ಕೆ 25000 ಮಂದಿ ಭಕ್ತರಿಗೂ, ಹಬ್ಬ ಹರಿದಿನ ಉತ್ಸವ ದಿನಗಳಲ್ಲಿ 30,000 ಮಂದಿ ಭಕ್ತರಿಗೂ ಉಚಿತ ಭೋಜನಾವಕಾಶ ಕಲ್ಪಿಸಲಾಗುತ್ತಿದೆ.

ಅನ್ನದಾನ ಯೋಜನೆಯಾಗಿದ್ದ ಈ ಕ್ರಮವನ್ನು 1994 ರಲ್ಲಿ ಎಸ್.ವಿ. ಅನ್ನದಾನ ಟ್ರಸ್ಟ್ ಎಂಬ ಹೆಸರಿಗೆ ಬದಲಾಯಿಸಲಾಯಿತು. ತಿ.ತಿ.ದೇ. ಧರ್ಮದರ್ಶಿಗಳ ಮಂಡಳಿಯ ಠರಾವು 959 ದಿನಾಂಕ 7-1-1994 ಪ್ರಕಾರ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳು ಅಧ್ಯಕ್ಷರಾಗಿಯೂ, ತಿ.ತಿ.ದೇ. ಲೆಕ್ಕಾಧಿಕಾರಿಗಳು ಧರ್ಮದರ್ಶಿಗಳಾಗಿಯೂ, ಡ.ಇ.ಓ. ಇದರ ಕಾರ್ಯದರ್ಶಿಯಾಗಿಯೂ ಇದ್ದು ಈ ಟ್ರಸ್ಟ್ ಅನ್ನು ನಡೆಸಬೇಕೆಂದು ತೀರ್ಮಾನವಾಯಿತು. ಇದರ ಕೇಂದ್ರ ಕಚೇರಿಯು ತಿ.ತಿ.ದೇ. ಪರಿಪಾಲನಾಭವನದಲ್ಲಿರುವಂತೆಯೂ 18/1994 ರ ನಂಬರಿನಲ್ಲಿ ಟ್ರಸ್ಟ್ ನೊಂದಾಯಿತವಾಯಿತು. ಆದಾಯಕರ ನಿಯಮದ 80 (ಜಿ) ಕಲಮಿನಂತೆ ಈ ಟ್ರಸ್ಟ್‌ಗೆ ಬರುವ ಎಲ್ಲದಾನಗಳೂ ಕರಮುಕ್ತವಾಗಿರುವುದರಿಂದ ವಿಜಯವಾಡ ವಿಭಾಗದಲ್ಲಿರುವ ಆದಾಯಕರ ಕಮೀಷನರ್ ಅವರಿಗೆ ಈ ಟ್ರಸ್ಟ್‌ನ ಬಗೆಗಿನ ನ್ಯಾಯಿಕ ಪರ್ಯವೇಕ್ಷಣಾಧಿಕಾರವಿದೆ.

**ಟ್ರಸ್ಟ್‌ನ ಉದ್ದೇಶ :**

ಜಾತಿ, ಮತ, ಪಂಥ, ಲಿಂಗ, ವಯೋಭೇದವಿಲ್ಲದೇ ತಿರುಮಲೆಗೆ ಆಗಮಿಸುವ ಎಲ್ಲ ಭಕ್ತಯಾತ್ರಿಕರಿಗೂ ಉಚಿತವಾಗಿ ಭೋಜನ ಸೌಕರ್ಯವನ್ನು ಒದಗಿಸುವುದು.

ಭಾರತಾದ್ಯಂತದಿಂದ ತಿರುಮಲೆಗೆ ಆಗಮಿಸುವ ಭಕ್ತಯಾತ್ರಿಕರಲ್ಲಿ ಅಸಹಾಯಕರಾದವರಿಗೆ ತಿರುಮಲೆಯಲ್ಲಿ ವೈದ್ಯಕೀಯ ಮೊದಲಾದ ಧರ್ಮದ ಅನುಕೂಲಗಳನ್ನು ಮಾಡಿಕೊಡುವುದು.

**ಅನ್ನದಾನ ಕ್ರಮ :**

ಟ್ರಸ್ಟ್‌ನ ನೋಂದಣಿ ಪತ್ರದಲ್ಲಿ ನಮೂದಾಗಿರುವಂತೆ ತಿರುಮಲೆಯ ಅನ್ನದಾನಂ ಕಾಂಪ್ಲೆಕ್ಸ್‌ನಲ್ಲಿ ಅನ್ನದಾನದ ಭೋಜನದ ಏರ್ಪಾಡುಗಳನ್ನು ಮಾಡಲಾಗಿದೆ.

ಈ ಯೋಜನೆಗೆ ದಾನ ನೀಡಿದವರೆಲ್ಲರ ಹೆಸರಿನಲ್ಲಿ ವರುಷದ 365 ದಿನವೂ ಅನ್ನದಾನವನ್ನು ನಡೆಸಲಾಗುತ್ತದೆ.

ಆರಂಭದಲ್ಲಿ ದಿನಕ್ಕೆ ಈ ಮೊದಲೇ ಹೇಳಿದಂತೆ 2000 ಮಂದಿಗೆ ಮಾತ್ರವೇ ಏರ್ಪಾಡಾಗಿದ್ದ ಭೋಜನಾವಕಾಶ ಬೆಳೆದು ಇಂದು ದಿನವಹಿ 25000 ಕ್ಕೆ ಏರಿದೆ. ಬ್ರಹ್ಮೋತ್ಸವ, ವೈಕುಂಠ ಏಕಾದಶಿ, ಜನವರಿ 1 ಮೊದಲಾದ ಉತ್ಸವ ದಿನಗಳಲ್ಲಿ 30,000 ಕ್ಕೂ ಹೆಚ್ಚುವುದು.

**ಸಂಪನ್ಮೂಲ ವಿವರಣೆ :**

ಜಗತ್ತಿನ ಎಲ್ಲ ಭಾಗಗಳಿಂದಲೂ ಅನ್ನದಾನ ಟ್ರಸ್ಟ್‌ಗೆ ದಾನ ನೀಡಬಹುದಾಗಿದೆ. ಅನ್ನದಾನಕ್ಕಾಗಿ ಬರುವ ಎಲ್ಲ ಮೊತ್ತಗಳನ್ನೂ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಠೇವಣಿಯಾಗಿಟ್ಟು





# ಧರ್ಮ ದರ್ಶಿಗಳು :

ಧರ್ಮದರ್ಶಿಗಳ ಮಂಡಳಿಯಲ್ಲಿ ಆರುಮಂದಿ ಧರ್ಮದರ್ಶಿಗಳುಂಟು. ಅವರಲ್ಲಿ ಒಬ್ಬರು ಅಧ್ಯಕ್ಷರು. ಒಬ್ಬರು ಕಾರ್ಯದರ್ಶಿ ಸದಸ್ಯರು.

| | | |
|---|---|---|
| 1. | **ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ** | ಅಧ್ಯಕ್ಷರು |
| 2. | **ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ (ತಿರುಮಲೆ)** | ಸದಸ್ಯರು |
| 3. | **ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ (ತಿರುಪತಿ)** | ಸದಸ್ಯರು |
| 4. | **ತಿ.ತಿ.ದೇ. ಆರ್ಥಿಕ ಸಲಹೆಗಾರು/ಮುಖ್ಯಲೆಖ್ಖ ಪರಿಶೀಲನಾಧಿಕಾರಿ** | ಸದಸ್ಯರು |
| 5. | **ತಿ.ತಿ.ದೇ. ಲೆಕ್ಕಾಧಿಕಾರಿ** | ಸದಸ್ಯರು |
| 6. | **ಡೆ. ಕಾರ್ಯನಿರ್ವಹಣಾಧಿಕಾರಿ** | ಕಾರ್ಯದರ್ಶಿ |

ಧರ್ಮದರ್ಶಿಗಳ ಈ ಮಂಡಳಿಯೊಂದಿಗೇ ಒಂದು ಸಲಹಾ ಮಂಡಳಿಯೂ ಇದೆ. ನಾಲ್ಕು ಮಂದಿಯ ಈ ಸಲಹಾ ಮಂಡಳಿಯು ಟ್ರಸ್ಟ್‌ನ ನಿರ್ವಹಣೆಗೆ ಸೂಕ್ತ ಸಲಹೆಗಳನ್ನು ನೀಡುವುದು.

| | | |
|---|---|---|
| 1. | **ತಿ.ತಿ.ದೇ. ಡೆ.ಇ.ಓ.** | (ಸಾಮಾನ್ಯ ಆಡಳಿತ - ತಿರುಪತಿ) |
| 2. | **ತಿ.ತಿ.ದೇ. ಡೆ.ಇ.ಓ.** | (ತಿರುಮಲೆ ಆಲಯ - ತಿರುಮಲೆ) |
| 3. | **ತಿ.ತಿ.ದೇ. ಡೆ.ಇ.ಓ.** | (ಸ್ವಾಗತ I - ತಿರುಮಲೆ) |
| 4. | **ತಿ.ತಿ.ದೇ. ಡೆ.ಇ.ಓ.** | (ಸ್ವಾಗತ II - ತಿರುಮಲೆ) |

ಅವುಗಳ ಮೇಲೆ ಬರುವ ಬಡ್ಡಿಯನ್ನು ಮಾತ್ರವೇ ಅನ್ನದಾನದ ಏರ್ಪಾಡುಗಳಿಗೆ ಬಳಸಲಾಗುವುದು. ಮೊದಲಿಗೆ ಈ ರೀತಿಯ ದಾನಗಳಿಗೆ ಒಂದು ಕನಿಷ್ಠಮಿತಿ ಇರಬೇಕೆಂದು ಯೋಚಿಸಿ ಒಂದು ಲಕ್ಷ ರೂಪಾಯಿಗಳನ್ನು ಕನಿಷ್ಠವೆನ್ನಲಾಗಿದ್ದಿತಾದರೂ, 1989 ರ ಜನವರಿ 23 ರಂದು ತಿ.ತಿ.ದೇ. ಧರ್ಮದರ್ಶಿ ಮಂಡಳಿಯ ತೀರ್ಮಾನದಂತೆ ಹೆಚ್ಚು ಹೆಚ್ಚಿನ ವಂತಿಗೆಗಳನ್ನು ಆಕರ್ಷಿಸುವ ಉದ್ದೇಶದಿಂದ ಈ ಕನಿಷ್ಠ ಮಿತಿಯನ್ನು ಒಂದು ಸಾವಿರ ರೂಪಾಯಿಗಳು ಎನ್ನಲಾಯಿತು. ಇದರಿಂದಾಗಿ ಅನ್ನದಾನಯೋಜನೆಗೆ ದಾನ ನೀಡುವ ಉದಾರಿಗಳ ಸಂಖ್ಯೆ ಹೆಚ್ಚಿದ್ದೇ ಅಲ್ಲದೆ, ಅನ್ನದಾನ ಯೋಜನೆಯಲ್ಲಿ ಸೇರಿಬರುವ ದಾನಗಳ ಮೊಬಲಗೂ ಸಹ ಹೆಚ್ಚಾಗತೊಡಗಿತು.

**ದಾನಗಳು :**

1985 ರಲ್ಲಿ 60 ಲಕ್ಷ ರೂಪಾಯಿಗಳ ದಾನದ ಇಡುಗಂಟಿನ ನೆರವಿನಿಂದ ಕಿರಿಯ ಪ್ರಮಾಣದಲ್ಲಿ ಆರಂಭವಾದ ಯೋಜನೆ ದಿನೇ ದಿನೇ ಹೆಚ್ಚುಮಂದಿಯನ್ನು ಸೆಳೆಯಿತು. 1999 - 2001 ದಲ್ಲಿ ಅನ್ನದಾನಂ ಟ್ರಸ್ಟ್ ಸ್ವೀಕರಿಸಿದ ಒಟ್ಟು ಮೊತ್ತ - ಎಂಟು ಕೋಟಿ ಮೂವತ್ತು ಲಕ್ಷ ರೂಪಾಯಿಗಳು (ರೂ. 8,30,00,000/-).

**ಠೇವಣಿಗಳು :**

31-1-2001 ರ ಹೊತ್ತಿಗೆ ಅನ್ನದಾನಂ ಟ್ರಸ್ಟ್‌ನಲ್ಲಿ ಠೇವಣಿಯಾಗಿರುವ ಒಟ್ಟು ಮೊತ್ತ ರೂ. 63,55,00,000/- (ಅರವತ್ತಮೂರು ಕೋಟಿ ಐವತ್ತೈದು ಲಕ್ಷ ರೂಪಾಯಿ) ಈ ಹಣವನ್ನು ಬೇರೆ ಬೇರೆ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಠೇವಣಿಗಳಾಗಿಡಲಾಗಿದೆ.

**ಐದುಲಕ್ಷ ಮತ್ತು ಹೆಚ್ಚಿನ ದಾನಗಳು :**

ಐದು ಲಕ್ಷ ರೂಪಾಯಿ ಮತ್ತು ಹೆಚ್ಚಿನ ದಾನಗಳನ್ನು ನೀಡುವ ದಾನಿಗಳಿಗೆ ತಿ.ತಿ.ದೇ. ಉಚಿತ ವಸತಿ, ದರ್ಶನ ಮೊದಲಾದ ಸೌಲಭ್ಯಗಳನ್ನು ಒದಗಿಸುತ್ತದೆ.

1. ತಿರುಮಲೆಯ ಅನ್ನದಾನಂ ಕಾಂಪ್ಲೆಕ್ಸ್‌ನಲ್ಲಿ ಎದ್ದು ಕಾಣುವಂತೆ ದಾನಿಯ ಹೆಸರು ಬರೆಯಲ್ಪಡುತ್ತದೆ.

2. ಎ. ಆರ್. ಪಿ. ಕೌಂಟರ್‌ನ ವಿತರಣೆಯಲ್ಲಿ ಬರುವ ವಸತಿಯನ್ನು ವರ್ಷದಲ್ಲಿ ಮೂರು ದಿನ ಉಚಿತವಾಗಿ ದಾನಿಗಳಿಗೆ ನೀಡಲಾಗುವುದು (ಅವಕಾಶವಿದ್ದಲ್ಲಿ ಶುಲ್ಕಸಹಿತವಾಗಿ ವಿ.ಐ.ಪಿ. ವಸತಿಯನ್ನು ನೀಡಲಾಗುವುದು).

3. ವೈಕುಂಠಂ.ಕ್ಯೂಕಾಂಪ್ಲೆಕ್ಸ್‌ನ ಸೆಲ್ಲಾರ್ ಮೂಲಕ ವರ್ಷಕ್ಕೆ ಮೂರುದಿನ ಐದು ಮಂದಿಗೆ ದರ್ಶನಾವಕಾಶ.

4. ದಾನಿಗೆ ವರ್ಷಕ್ಕೆ ಒಮ್ಮೆ ಒಂದು ಉತ್ತರೀಯವನ್ನು ನೀಡಲಾಗುವುದು.

5. ದಾನಿಗೆ ಪ್ರತಿವರ್ಷವೂ ಒಮ್ಮೆ ಹತ್ತು ಚಿಕ್ಕ ಲಾಡುಗಳನ್ನು ಉಚಿತವಾಗಿ ನೀಡಲಾಗುವುದು.

6. ಚಿನ್ನದ ಮುಲಾಮು ಹಚ್ಚಿದ ಬೆಳ್ಳಿಯ ಸ್ವಾಮಿ ಹಾಗೂ ಅಮ್ಮನವರ ಚಿತ್ರಗಳಿರುವ ಪದಕವನ್ನು ಒಮ್ಮೆ ಮಾತ್ರ ದಾನಿಗೆ ಬಹುಮಾನವಾಗಿ ನೀಡಲಾಗುವುದು.

ಮೇಲಿನ ಎಲ್ಲ ಅವಕಾಶ, ಸೌಲಭ್ಯಗಳೂ, ದಾನಿಗೆ ಅವರ ಜೀವನ ಕಾಲದಲ್ಲಿ ಮಾತ್ರವೂ, ಸಂಯುಕ್ತ ದಾನಿಗಳಿಗೆ / ಕಂಪನಿ / ಸಂಘ ಸಂಸ್ಥೆಗಳಿಗೆ ಇಪ್ಪತ್ತು ವರ್ಷಕ್ಕೆ ಮಾತ್ರವೂ ದೊರೆಯುತ್ತವೆ.

ಸಾವಿರ ರೂಪಾಯಿ ಹಾಗೂ ಅದರ ಗುಣಕಗಳಲ್ಲಿ ದಾನಗಳನ್ನು ನೀಡಿದವರಿಗೂ ಆದಾಯಕರ ವಿನಾಯಿತಿ ದೊರೆಯುತ್ತದೆ. ಇದಕ್ಕಾಗಿ ದಾನಿಗಳು ಯಾರಹೆಸರಿನಲ್ಲಿ ಆದಾಯಕರ ವಿನಾಯಿತಿ ಪತ್ರ ಬೇಕು ಎಂಬುದನ್ನು ಬರೆದು ತಿಳಿಸಬೇಕಾಗುತ್ತದೆ. ★



# 2002 ಮೇ ತಿಂಗಳಿನಲ್ಲಿ ಶ್ರೀವಾರಿಸೇವೆ

ತಿರುಮಲೆ ತಿರುಪತಿ ದೇವಸ್ಥಾನಗಳು ತಿರುಮಲೆಯಲ್ಲಿ ಪ್ರವೇಶಗೊಳಿಸಿರುವ ಶ್ರೀವಾರಿಸೇವೆ ದಿನೇ ದಿನೇ ಜನಪ್ರಿಯತೆಯ ಹೊಸ ಮಜಲುಗಳನ್ನು ಮುಟ್ಟುತ್ತಿರುವುದು, ಪ್ರತಿ ತಿಂಗಳೂ ಗಮನಕ್ಕೆ ಬರುತ್ತಿದೆ. ಮೇ ಜೂನ್ ಜುಲೈ ತಿಂಗಳುಗಳಲ್ಲಿ ಬೇಸಿಗೆಯ ದಿನಗಳು- ಸಾಧಾರಣವಾಗಿ ಯಾತ್ರಿಕರ ಸಂದಣಿ ಹೆಚ್ಚಾಗಿರುತ್ತದೆ. ಇಂತಲ್ಲಿ ಶ್ರೀವಾರಿ ಸೇವೆಯಲ್ಲಿ ಭಾಗವಹಿಸುವವರ - ಸ್ವಚ್ಛಂದ ಸೇವೆಯ ವ್ರತವನ್ನು ನಡೆಸುವ ಭಕ್ತರ ಸಂಖ್ಯೆಯೂ ಅದೇ ಪ್ರಮಾಣದಲ್ಲಿ ಹೆಚ್ಚಿದೆ. ಹಾಗಾಗಿ ಇಡೀ ಶ್ರೀವಾರಿಸೇವಾ ಕಾರ್ಯಕ್ರಮದಲ್ಲಿ ಇದುವರೆಗೆ ಅತಿಹೆಚ್ಚಿನ ಮಂದಿ ಭಾಗವಹಿಸಿದ ತಿಂಗಳು ಮೇ ತಿಂಗಳು ಎಂದಾಯಿತು.

ಮೇ ತಿಂಗಳಿನಲ್ಲಿ ಒಟ್ಟು ಎಂಟುಸಾವಿರ ಮಂದಿ ಶ್ರೀವಾರಿಸೇವೆಯಲ್ಲಿ ಭಾಗವಹಿಸಿದ್ದರು. ಇವರಲ್ಲಿ 3200 ಮಂದಿ ಮಹಿಳೆಯರಾದರೆ 4800 ಮಂದಿ ಪುರುಷರು. ಹಲವು ಕಡೆ ಶ್ರೀವಾರಿಸೇವಕರು ಯಾತ್ರಿಕರ ಸೇವೆಯಲ್ಲಿ ಉತ್ಸಾಹದಿಂದ ತೊಡಗಿ ಸಹಯಾತ್ರಿಕರಿಗೆ ನೆರವಾಗುತ್ತಿದ್ದದ್ದು ಕಂಡುಬಂದಿತು.

ಚೆನ್ನೈನಿಂದ ಶ್ರೀಕೃಷ್ಣಮೂರ್ತಿ ಅವರ ನಾಯಕತ್ವದಲ್ಲಿ 31 ಮಂದಿ ಬಂದಿದ್ದರು. ಅವರಲ್ಲಿ ಬೆಂಗಳೂರಿನವರು ಮೂವರು. ಇಂದ್ರಮ್ಮನವರಿಗೆ 63 ವರ್ಷ ವಯಸ್ಸು. ಮದನ ಚಂದ್ರ ಎಲೆಕ್ಟ್ರಿಕ್ ಕಂಟ್ರಾಕ್ಟರ್, ವಿಜಯ ಕುಮಾರ್ ವಿದ್ಯಾರ್ಥಿ. ಮುವ್ವರಿಗೂ ಇದೊಂದು ವ್ರತದಂತೆ ಕಂಡುಬಂದಿದೆ. ಇಂದಿರಮ್ಮನವರು ಹೇಳಿದ್ದು ಹೀಗೆ ''ಮದರಾಸಿನಲ್ಲಿ ನಮ್ಮವರೆಲ್ಲ ಈ ಮೊದಲೇ ತಿರುಮಲೆಯಲ್ಲಿ ಬಂದು ಸೇವೆ ಸಲ್ಲಿಸಿದ್ದರು ನಮಗೂ ಹೇಳಿದರು. ಹಲವು ಹನ್ನೊಂದು ವ್ರತ ಮಾಡಿದ್ದೇನೆ ನಾನು - ಸೇವಾವ್ರತವನ್ನು ಮಾಡುವುದು ಇತರ ವ್ರತಗಳಿಗಿಂತ ಬೇರೆಯಾದದ್ದು. ಇಲ್ಲಿ ಪರಿಶ್ರಮವಿದೆ. ಆದರೆ ಶ್ರಮವಿಲ್ಲ. ಕಷ್ಟವೇನಿಲ್ಲ. ನನ್ನಂತಹ ವಯಸ್ಸಾದವರೂ ಮಾಡುವಂತಹ ಕೆಲಸಗಳನ್ನೇ ಹೇಳುತ್ತಾರೆ. ಮುಖ್ಯವಾಗಿ ನನಗೆ ಇಷ್ಟವಾದರೆ ಮಾತ್ರವೇ ಮಾಡುವ ಕೆಲಸ. ದೇವರನ್ನು ನೋಡುವ ಜನರಿಗೆ ನೀರು ಕೊಡುವುದಕ್ಕಿಂತ ದೊಡ್ಡ ಪುಣ್ಯದ ಕೆಲಸ ಯಾವುದಿದೆ ಹೇಳಿ.''

ವಿಕಾಸ ತರಂಗಿಣಿಯ ವತಿಯಿಂದ ಅದ್ದಂಕಿಯ ಬೊಮ್ಮನಂಪಾಡು ಗ್ರಾಮದಿಂದ ಬಂದವರು 19 ಮಂದಿ. ಅಂಜಯ್ಯ ಜಯಲಕ್ಷ್ಮಿ ಮಧ್ಯ ವಯಸ್ಕರಾದರೆ ತಿರುಪತಮ್ಮ, ರಾಮಯ್ಯನವರಿಗೆ ವೃದ್ಧಾಪ್ಯ. ಎಲ್ಲ ಒಟ್ಟಿಗೆ ಕೆಲಸ ಮಾಡುತ್ತಿದ್ದರು. 'ದರ್ಶನಕ್ಕೆ ಕಂಕಣ ಕಟ್ಟಿಸಿಕೊಂಡಿದ್ದೇವೆ. ಮಿಕ್ಕ ಎಲ್ಲ ಸಮಯವೂ ಸೇವೆಯಲ್ಲಿ ಕಳೆಯುವುದೇ ಸರಿ. ಬೇರೆ ಕಡೆ ಹೊತ್ತು ಹೋಗದು ಎಂಬುದಷ್ಟೇ ಅಲ್ಲ. ಬೇರೆ ಏನುಮಾಡಿದರೂ ತೃಪ್ತಿಯಿರದು' - ಎಂದರು ರಾಮಯ್ಯ.

**2002 ಮೇ ತಿಂಗಳಿನಲ್ಲಿ ಶ್ರೀವಾರಿಸೇವೆ ಮಾಡಿದ ತಂಡಗಳು**

| | ತಂಡದ ಹೆಸರು | ಊರು | ಸಂಖ್ಯೆ |
|---|---|---|---|
| 1. | ಶ್ರೀವಾರಿ ಸೇವಾಸಮಿತಿ | ಚೆನ್ನೈ (ನಾಲ್ಕುಬಾರಿ) | 21 ಮಂದಿ |
| 2. | ಮೋಹನ್ ವೃಂದ | ಆದಿಲಾಬಾದ್ | 10 ಮಂದಿ |
| 3. | ಕಾಶೀರಾಜು ವೃಂದ | ಮದುರೈ | 10 ಮಂದಿ |
| 4. | ಚಂದ್ರಹಾಸ ವೃಂದ | ಅನಕಾಪಲ್ಲಿ | 7 ಮಂದಿ |
| 5. | ಬಾಲಾಜೀ ವೃಂದ | ಪಿ.ಟಿ.ಯಂ | 10 ಮಂದಿ |
| 6. | ನಗರ ಉತ್ಸವ ಸಮಿತಿ | ಗುಂತಕಲ್ | 12 ಮಂದಿ |
| 7. | ಸ್ವಾಮಿನಾಥನ್ ವೃಂದ | ಚೆನ್ನೈ | 5 ಮಂದಿ |
| 8. | ಎಂ. ರಮೇಶರಾಜು | ಕರ್ನೂಲು | 6 ಮಂದಿ |
| 9. | ನಾಗೇಶ್ವರನ್ | ಗೋಟಿಶೆಟ್ಟಿಪಾಳಯಂ | 5 ಮಂದಿ |
| 10. | ವೆಂಕಟೇಶ್ವರ್ಲು | ಪಳ್ಳಿಪಟ್ಟು | 25 ಮಂದಿ |
| 11. | ರಮಣಮೂರ್ತಿ | ವಿಶಾಖಪಟ್ನಂ | 13 ಮಂದಿ |
| 12. | ಕುಪ್ಪುಲು ವೃಂದ | ಸೇಲಂ (ಮೂರುಬಾರಿ) | 24 ಮಂದಿ |
| 13. | ಸಂಜೀವಿ ವೃಂದ | ವೇಲೂರು | 11 ಮಂದಿ |
| 14. | ಮೋಹನರಾವು ತಂಡ | ಪ್ರೊದ್ದುಟೂರು | 10 ಮಂದಿ |
| 15. | ಅ.ಭಾ. ಅಯ್ಯಪ್ಪ ಸೇವಾಸಮಿತಿ | ಈರೋಡು | 17 ಮಂದಿ |



ಚೆನ್ನೈಯಿಂದ ಬಂದವರಲ್ಲಿ ಸೇಲಂ ನ ತಂಗವೇಲು ಅವರೂ ಒಬ್ಬರು - ಅವರಿಗೆ ಕೆಲಸ ಮಾಡುವ ಉತ್ಸಾಹ. ''ಇಲ್ಲಿಗೆ ಬರುವ ಜನರೆಲ್ಲ ಸ್ವಾಮಿಯ ಭಕ್ತರೇ - ಇಲ್ಲಿ ಬೇರೆ ಯಾವುದೂ ದೊರೆಯದು ಸ್ವಾಮಿಯ ದರ್ಶನ ವಲ್ಲದೆ - ಹಾಗಾಗಿ ಇವರಿಗೆ ಸೇವೆ ಮಾಡುವುದು ಸಾರ್ಥಕವಾಗುತ್ತದೆ.'' ಯಾಕೆ ಶ್ರೀವಾರಿ ಸೇವೆಯಲ್ಲಿ ಭಾಗವಹಿಸುತ್ತಿದ್ದೀರಿ ಎಂದು ಪ್ರಶ್ನಿಸಿದಾಗ ವಿಜಯವಾಡದ ಪೆದತಿಮ್ಮಯ್ಯ ನವರು ಉತ್ತರಿಸಿದ್ದು ಹೀಗೆ - ''ನೋಡಿ - ನಾನೂ ಹತ್ತೆಂಟು ವ್ಯವಹಾರ ಮಾಡಿ ಅನುಭವಿಸಿದ್ದೇನೆ. ಲಾಭವನ್ನೂ ಗಳಿಸಿದ್ದೇನೆ. ಇಲ್ಲಿ ಕೆಲಸ ಮಾಡುವುದರಿಂದ ನನಗೆ ತೃಪ್ತಿ ಸಿಕ್ಕಿದೆ. ಇದಕ್ಕಿಂತ ಲಾಭ ನನಗೆ ಬೇಕಿಲ್ಲ. ವರ್ಷಕ್ಕೆ ಎರಡು ಮೂರು ಬಾರಿಯಾದರೂ ಇಲ್ಲಿ ಬಂದು ಈ ಸ್ವಚ್ಛಂದ ಸೇವೆ ಮಾಡಿ ಹೋಗಬೇಕು ಅನ್ನಿಸುತ್ತಿದೆ - ಆ ಸ್ವಾಮಿ ಅನುಗ್ರಹ ಮಾಡಬೇಕಷ್ಟೆ.''

ವೇಲೂರಿನಿಂದ ಹನ್ನೊಂದು ಮಂದಿಯ ಜೊತೆಗೆ ಬಂದವರು ಶ್ರೀಲಕ್ಷ್ಮಿ, ಬೇಸಿಗೆಯ ರಜಗಳಲ್ಲಿ ತಮ್ಮ ಕಾಲೇಜಿನ ಹತ್ತುಮಂದಿ ವಿದ್ಯಾರ್ಥಿ ವಿದ್ಯಾರ್ಥಿನಿಯರೊಡನೆ ಬಂದವರು - ಮಕ್ಕಳಿಗೆ ಸಮಾಜ ಸೇವೆಯ ಪಾಠ ಆಗಬೇಕು. ಜೊತೆಗೆ ಮಾನವೀಯ ಮೌಲ್ಯಗಳ ಬಗ್ಗೆ ಅರಿವು ಮೂಡಬೇಕು. ಅದಕ್ಕಾಗಿ ಕರೆದುಕೊಂಡು ಬಂದಿರುವುದಾಗಿ ಹೇಳಿದರು. ಸುಕುಮಾರನ್ ಎರಡನೇ ಪಿ.ಯು.ಸಿ. ''ಸ್ವಾಮಿಯ ಭಕ್ತರೂ ಸ್ವಾಮಿಯಂತೆಯೇ, ಇವರ ಸೇವೆಯೂ ಆದರ್ಶವೇ'' ಎಂದದ್ದು ಚೆನ್ನಾಗಿತ್ತು. ಬೆಂಗಳೂರಿನ ಶ್ರೀ ಲಕ್ಷ್ಮೀ ವೆಂಕಟೇಶ್ವರಸ್ವಾಮಿ ಆಲಯದ ಭಕ್ತಭಜಕರಲ್ಲಿ ಹದಿಮೂರು ಮಂದಿ ಸ್ವಯಂಸೇವಕರು ಬಂದು ಒಂದು ವಾರ ಕಾಲ ಶ್ರೀವಾರಿಸೇವೆಯನ್ನು ಮಾಡಿದ್ದು ಈ ಬಾರಿಯ ಒಂದು ವಿಶೇಷವೆನ್ನಬೇಕು. ಯಾವುದೇ ರೀತಿಯ ಹೆಸರುಗಳನ್ನು ಮುಂದುಮಾಡದೆ ಆಲಯದ ಭಕ್ತರೆಂದು ತಮ್ಮನ್ನು ತಾವು ಗುರುತಿಸಿಕೊಂಡು ಸೇವೆಯಲ್ಲಿ ತೊಡಗಿದ್ದದ್ದು ಶ್ಲಾಘ್ಯವಾಗಿದ್ದಿತು.

| | ತಂಡದ ಹೆಸರು | ಊರು | ಸಂಖ್ಯೆ |
|---|---|---|---|
| 16. | ಕೃಷ್ಣನ್ ವೃಂದ | ಜಾಲಾರ್‌ಪೇಟೆ | 11 ಮಂದಿ |
| 17. | ಕೆ. ಶ್ರೀನಿವಾಸುಲು ತಂಡ | ಹಿಂದೂಪುರ | 14 ಮಂದಿ |
| 18. | ಶ್ರೀವಾರಿಯೂತ್ | ಗುಂಟೂರು | 8 ಮಂದಿ |
| 19. | ಸುಕುಮಾರನ್ ವೃಂದ | ಮಧುರೈ | 19 ಮಂದಿ |
| 20. | ಪಿ. ವಿ. ಶ್ರೀನಾಥ್ ವೃಂದ | ಕಾಕಿನಾಡ | 15 ಮಂದಿ |
| 21. | ಜನಕಲ್ಯಾಣ ಸಮಿತಿ | ಕಂಚಿ (ಎರಡು ಬಾರಿ) | 21 ಮಂದಿ |
| 22. | ಪೈಡಿರಾಜು ವೃಂದ | ಪಂಡೂರು | 8 ಮಂದಿ |
| 23. | ವೆಂಕಟೇಶ್ವರಮ್ಮ ವೃಂದ | ಪೀಠಾಪುರಂ | 14 ಮಂದಿ |
| 24. | ವಿಕಾಸತರಂಗಿಣಿ ವೃಂದ | ವಿಜಯವಾಡ | 100 ಮಂದಿ |
| 25. | ತೇಜಸ್ವಿನಿ ಬೃಂದ | ಧರ್ಮವರಂ | 15 ಮಂದಿ |
| 26. | ಕೃಷ್ಣಮೂರ್ತಿ ವೃಂದ | ಕಂಚಿ | 21 ಮಂದಿ |
| 27. | ನಗರ ಉತ್ಸವ ಸಮಿತಿ | ಗುಂತಕಲ್ | 6 ಮಂದಿ |
| 28. | ಶ್ರೀಕೃಷ್ಣ ಚೈತನ್ಯ ಸಂಘ | ಕಾಪವರಂ | 18 ಮಂದಿ |
| 29. | ಜಗನ್ನಾಥಂ ಟೀಂ | ದಿಂಡಿಗಲ್ | 10 ಮಂದಿ |
| 30. | ಕೈಲಾಸಂ ವೃಂದ | ಸೇಲಂ | 8 ಮಂದಿ |
| 31. | ಶಿವಶಕ್ತಿ ವೃಂದ | ಮದುರೈ | 32 ಮಂದಿ |
| 32. | ಆರ್. ವೆಂಕಟೇಶ್ವರನ್ ವೃಂದ | ಮದುರೈ | 15 ಮಂದಿ |
| 33. | ಶ್ರೀ ಲಕ್ಷ್ಮೀ ವೆಂಕಟೇಶ್ವರಸ್ವಾಮಿ ಆಲಯ | ಬೆಂಗಳೂರು | 13 ಮಂದಿ |
| 34. | ಮೋಹನ್ ವೃಂದ | ಹಿಂದೂಪುರ | 13 ಮಂದಿ |
| 35. | ಜಿ. ಶ್ರೀನಿವಾಸುಲು ವೃಂದ | ಡೋನ್ | 13 ಮಂದಿ |
| 36. | ದೊರೈಬಾಲನ್ ವೃಂದ | ಕೊಯಂಬತ್ತೂರು | 12 ಮಂದಿ |
| 37. | ಶಿವರಾಮಕೃಷ್ಣ ಭಜನವೃಂದ | ಕರೀಂನಗರ್ | 20 ಮಂದಿ |
| 38. | ಜಿ. ಸುಧಾಕರ್ | ಕರ್ನೂಲು | 11 ಮಂದಿ |
| 39. | ಜಿ. ಚಂದ್ರಶೇಖರ್ ವೃಂದ | ತಿರುಪತಿ | 12 ಮಂದಿ |
| 40. | ಕೆ. ರಾಮಸುಬ್ಬಯ್ಯ | ನಂದ್ಯಾಲ | 6 ಮಂದಿ |
| 41. | ಷಣ್ಮುಗಂ ಬೃಂದ | ಸೇಲಂ | 6 ಮಂದಿ |
| 42. | ಶ್ರೀನಿವಾಸ ಸೇವಾಸಮಿತಿ | ಒಂಗೋಲು | 9 ಮಂದಿ |
| 43. | ಕೆ. ವೆಂಕಟರಮಣ ವೃಂದ | ಶ್ರೀಕಾಕುಳಂ | 13 ಮಂದಿ |

# ತಿರುಮಲೆಯ ಸೇವಾವಿವರ

ನಿತ್ಯ ಕಲ್ಯಾಣ ಪಚ್ಚತೋರಣದ ತಿರುಮಲೆಯಲ್ಲಿ ನಡೆಯುವ ಉತ್ಸವಗಳ ಬಗ್ಗೆ ಸೇವೆಗಳ ಬಗ್ಗೆ ಹೆಚ್ಚಿಗೆ ತಿಳಿದು ಕೊಳ್ಳಬೇಕೆಂಬ ಯಾತ್ರಿಕರು ಹಲವು ರೀತಿಯ ಪ್ರಶ್ನೆಗಳ ಕಾಗದಗಳನ್ನು ಸಪ್ತಗಿರಿ ಪತ್ರಿಕೆಗೆ ಬರೆಯುವುದುಂಟು. ತಿರುಮಲೆಯ ಸೇವೆಗಳು, ವಸತಿ, ಮುಂತಾದವುಗಳ ಬಗ್ಗೆ ಹಲವು ವಿವರಗಳನ್ನು ಈ ಕೆಳಗೆ ನೀಡಲಾಗಿದೆ. ಯಾತ್ರಿಕ ಭಕ್ತರ ತಿರುಮಲೆಯಾತ್ರೆ ಸುಖಕರವಾಗಿರಬೇಕೆಂಬುದು ತಿ. ತಿ. ದೇ. ಉದ್ದೇಶ.

**ಆರ್ಜಿತ ಸೇವೆಗಳು :**

1. ತಿರುಮಲೆಯ ಸ್ವಾಮಿ ಸೇವೆಯ ಟಿಕೆಟ್‌ಗಳನ್ನು ಮೊದಲೇ ರಿಸರ್ವ್ ಮಾಡಿಸುವುದು ಹೇಗೆ ? ಡಿ.ಡಿ. ಯನ್ನು ಯಾವ ಹೆಸರಿಗೆ ತೆಗೆದುಕೊಳ್ಳಬೇಕು ? ಯಾರಿಗೆ ಕಳುಹಿಸಬೇಕು?

ಸ್ವಾಮಿ ಸೇವೆಯ ಟಿಕೆಟ್‌ಗಳನ್ನು ಸಾಧ್ಯವಾದಷ್ಟೂ ಮುಂಚೆಯೇ ರಿಸರ್ವ್ ಮಾಡಿಕೊಳ್ಳುವುದು ಉತ್ತಮ. ಇದಕ್ಕಾಗಿ ಭಕ್ತರು ಯಾವ ದಿನಾಂಕದಲ್ಲಿ ಎಂತಹ ಸೇವೆ ಮಾಡಿಸಬಯಸುವರೆಂಬುದನ್ನು ವಿವರವಾಗಿ ಬರೆಯಬೇಕು. ಆಯಾ ಸೇವೆಗೆ ತಕ್ಕ ಶುಲ್ಕವನ್ನು ಡಿಮಾಂಡ್ ಡ್ರಾಫ್ಟ್ ಮೂಲಕವೇ ಸಲ್ಲಿಸಬೇಕು.

ಡಿಮಾಂಡ್ ಡ್ರಾಫ್ಟ್ ಅನ್ನು ''ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ'' - ಈ ಹೆಸರಿನಲ್ಲಿ ಪಡೆಯಬೇಕು. ಹೀಗೆ ಪಡೆದ ಡಿ.ಡಿ. ಯನ್ನು ''ಪೇಷ್ಕಾರ್ ತಿರುಮಲೆ ಆಲಯ ತಿರುಮಲೆ'' - ಇವರಿಗೆ ಕಳುಹಿಸಬೇಕು.

ಅಭಿಷೇಕದ ಟಿಕೆಟ್‌ಗಳಿಗೆ 3-4 ವರ್ಷ ಮೊದಲೇ ಬರೆದು ರಿಸರ್ವ್ ಮಾಡಿಸಬೇಕು.

ಮಿಕ್ಕ ಸೇವೆಗಳಿಗೆ ಕನಿಷ್ಠ 90 ದಿನಗಳು ಮುಂಚಿತವಾಗಿ ರಿಸರ್ವ್ ಮಾಡಿಸಿಕೊಳ್ಳಬೇಕು.

ಎರಡು ಮೂರು ಸೇವೆಗಳಿಗೆ ಟಿಕೆಟ್ ಬಯಸುವವರು ಪ್ರತಿಸೇವೆಗೂ ಬಿಡಿ ಬಿಡಿಯಾಗಿ ಡಿ. ಡಿ. ಗಳನ್ನು ತೆಗೆದುಕೊಳ್ಳಬೇಕು. ಎಲ್ಲ ಸೇವೆಗಳಿಗೆ ಒಂದೇ ಡಿ.ಡಿ.ಯನ್ನು ಪಡೆಯಬಾರದು.

2. ಆರ್ಜಿತ ಸೇವೆಯ ರಿಸರ್ವ್ ಮಾಡಿಸಿಕೊಂಡವರು ಸೇವೆಯ ದಿನ ಬರದೆ ಹೋದರೆ ಆ ಹಣವನ್ನು ತಿರುಗಿ ವಾಪಸು ಕೊಡುವರೇ?

ಭಕ್ತರು ಸಾಧ್ಯವಾದಷ್ಟು ಮೊದಲೇ ಈ ವಿಷಯವನ್ನು ಪೇಷ್ಕಾರ್ ತಿರುಮಲೆಯ ಆಲಯ ತಿರುಮಲೆ - ಇವರಿಗೆ ತಿಳಿಸಿದರೆ ಸೇವೆಯನ್ನು ಮತ್ತೊಂದು ದಿನಕ್ಕೆ ಮುಂದೂಡಲು ಅವಕಾಶವಿದೆ. ಇದಕ್ಕಾಗಿ ಭಕ್ತರು ತಮ್ಮ ಆರ್ಜಿತ ಸೇವೆಯ ಟಿಕೆಟ್ ಅನ್ನು, ಅದರ ಶುಲ್ಕದ 25% ಅಧಿಕ ಹಣದ ಡಿ. ಡಿ. ಯೊಡನೆ ಸೇರಿಸಿ ಕಳುಹಿಸುತ್ತ ಸೇವೆಯ ಹೊಸ ದಿನಾಂಕದ ಬಗ್ಗೆ ಬರೆದುಕೊಳ್ಳಬಹುದು. ಅವರು ಕೇಳಿದ ದಿನದಂದು ಆಯಾ ಸೇವೆಯು ದೊರೆಯುವಂತಿದ್ದರೆ ಮಾತ್ರವೇ ಖಚಿತ ಗೊಳಿಸಲಾಗುತ್ತದೆ.

## ಸೇವಾವಿವರ

ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ ಮಾರನೆಯ ದಿನದ ಸೇವೆಗಳಿಗೆ ಕೊಂಡುಕೊಳ್ಳುವ ಟಿಕೆಟ್‌ಗಳಿಗೆ ಈ ಸೂತ್ರ ಅನ್ವಯವಾಗುವುದಿಲ್ಲ. ಸೇವೆಗೆ ಹಾಜರಾಗದಿದ್ದರೆ ಆ ಸೇವೆಯ ಹಣವನ್ನು ಹಿಂದಿರುಗಿಸುವುದು ಸಾಧ್ಯವಿಲ್ಲ.

(ಆರ್ಜಿತಸೇವೆಯ ಟಿಕೆಟ್‌ನ ಹಿಂಭಾಗದಲ್ಲಿ ಈ ಬಗ್ಗೆ ವಿವರಗಳು ಇರುತ್ತವೆ.)

3. ಆರ್ಜಿತಸೇವೆಯ ಟಿಕೆಟ್ ಪಡೆದವರಿಗೆ ವಸತಿಯನ್ನು ರಿಸರ್ವ್ ಮಾಡುವರೇನು? ಅಥವಾ ಪ್ರತ್ಯೇಕವಾಗಿ ವಸತಿಯನ್ನು ರಿಸರ್ವ್ ಮಾಡಿಸಿಕೊಳ್ಳಬೇಕೆ?

ರೂ. 2500/- ಹಾಗೂ ಅದಕ್ಕಿಂತ ಹೆಚ್ಚಿನ ಹಣದ ಸೇವೆಯ ಟಿಕೆಟ್ ಪಡೆದವರಿಗೆ ವಸತಿ ನೀಡುವುದರಲ್ಲಿ ಆದ್ಯತೆಯಿದೆ. ಅವರುಗಳು ತಿರುಮಲೆಯ ಆರ್ಜಿತಂ ರಿಸರ್ವ್ ಕೌಂಟರಿನಲ್ಲಿ (ಸಿ.ಆರ್.ಓ. ಆಫೀಸಿನಲ್ಲಿರುವುದು) ಸೇವೆಯ ಟಿಕೆಟ್ ತೋರಿಸಿದರೆ ಕೋಣೆಯನ್ನು ನೀಡುವರು. ಈ ವಸತಿಗೆ ಬಾಡಿಗೆ ಸಲ್ಲಿಸಬೇಕಾಗುತ್ತದೆ.

4. ಸ್ವಾಮಿಯ ವಸ್ತ್ರಾಲಂಕಾರ ಸೇವೆಯ ರಿಸರ್ವೇಷನ್ ಹೇಗೆ ?

ಈ ಸೇವೆ ತುಸು ದೂರದ್ದು. ಕನಿಷ್ಠ 4-5 ವರ್ಷ ಮೊದಲೇ ರಿಸರ್ವ್ ಮಾಡಿಸಬೇಕು. ಅದಕ್ಕಿಂತ ಮೊದಲಿಗೆ ಟಿಕೆಟ್ ದೊರೆಯದೆ ಹೋಗಬಹುದು.

5. ಸ್ವಾಮಿಯ ಅಭಿಷೇಕದಲ್ಲಿ ಪುನುಗು ಬಟ್ಟಲು, ಕಸ್ತೂರಿ ಬಟ್ಟಲು ಇರುವುವೇ? ಅಥವಾ ಅವುಗಳನ್ನು ಪ್ರತ್ಯೇಕವಾಗಿ ಕೊಂಡುಕೊಳ್ಳಬೇಕೆ?

ಅಭಿಷೇಕ ಸೇವೆಯಲ್ಲಿ ಇವುಗಳನ್ನು ಪ್ರತ್ಯೇಕವಾಗಿ ಪಡೆಯಬೇಕು. ಅವುಗಳ ಸೇವಾಶುಲ್ಕ ಈ ರೀತಿಯಿವೆ.

**ಪೂರಾಭಿಷೇಕ - ಒಬ್ಬರಿಗೆ ರೂ. 750-00**

**ಪುನುಗುಬಟ್ಟಲು - ಒಬ್ಬರಿಗೆ ರೂ. 300-00**

**ಕಸ್ತೂರಿ ಬಟ್ಟಲು - ಒಬ್ಬರಿಗೆ ರೂ. 150-00**

6. ಆರ್ಜಿತ ಸೇವೆಗೆ ನಿರ್ಣಯಿಸಿದ್ದಕ್ಕಿಂತ ಹೆಚ್ಚಿನ ಜನ ಬಂದರೆ ಏನುಮಾಡುವುದು? ಅವರನ್ನು ಒಳಕ್ಕೆ ಬಿಡುವರೇ?

ಎಂತಹ ಪರಿಸ್ಥಿತಿಯಲ್ಲಿಯೂ ಅನುಮತಿಸುವುದಿಲ್ಲ. ಹನ್ನೆರಡು ವರ್ಷದ ಕೆಳಗಿನ ಮಕ್ಕಳನ್ನು ಮಾತ್ರ ಉಚಿತವಾಗಿ ಒಳ ಬಿಡುವರು.

ಅಭಿಷೇಕ ಸೇವೆಯಲ್ಲಿ ಮಕ್ಕಳಿಗೆ ಅನುಮತಿಯಿಲ್ಲ.

7. ವೃದ್ಧರಿಗೆ ಅಂಗವಿಕಲರಿಗೆ ಪ್ರತ್ಯೇಕ ದರ್ಶನ ಸೌಲಭ್ಯವಿದೆಯೇ ?

ಇದೆ. ವೃದ್ಧರಿಗೆ, ವಿಕಲಾಂಗರಿಗೆ ಸ್ವಾಮಿ ಆಲಯದ ಮಹಾದ್ವಾರದ ಬಳಿಯಿಂದ ದರ್ಶನಕ್ಕೆ ಅನುಮತಿ ನೀಡುವರು. ಅವರು ಮಹಾದ್ವಾರದ ಬಳಿಯ ಅಧಿಕಾರಿಯನ್ನು ವಿಚಾರಿಸಬೇಕು. ಅಂಗವೈಕಲ್ಯ ಸ್ಪಷ್ಟವಾಗಿ ತಿಳಿಯುವಂತೆ ಇರಬೇಕು. ಅಥವಾ ಅವರ ಬಳಿ ಸಂಬಂಧ ಪಟ್ಟ ಸರ್ಟಿಫಿಕೆಟ್ ಇರಬೇಕು.

8. ಲಾಡು ಹೆಚ್ಚಿಗೆ ಬೇಕೆಂದರೆ ನೀಡುವರೇ?

ಪ್ರಸ್ತುತ ಇಂತಹ ಅವಕಾಶವಿಲ್ಲ. ಆದರೆ ಸ್ವಾಮಿ ಆಲಯದ ಕ್ಯೂಸಾಲಿನಲ್ಲಿ ಪ್ರತಿ ವ್ಯಕ್ತಿಗೆ ಒಂದು ಲಾಡು ಹೆಚ್ಚಿಗೆ ನೀಡುವ ಅವಕಾಶವುಂಟು.

9. ವಡೆ ಎಲ್ಲಿ ದೊರೆಯುತ್ತದೆ? ಅವುಗಳನ್ನು ಹೇಗೆ ಮಾರುವರು ?

ಆರ್ಜಿತಸೇವೆ ಮಾಡಿಸುವ ಗೃಹಸ್ಥರಿಗೆ ನೀಡುವ ವಡೆಗಳನ್ನು ಮಿಕ್ಕಲ್ಲಿ ಲಾಡು ಕೌಂಟರ್‌ಗಳಲ್ಲಿಯೇ ಮಾರಾಟ ಮಾಡುತ್ತಾರೆ.

## ತಿರುಮಲೆಯಲ್ಲಿ ಉಚಿತ ಸೌಲಭ್ಯಗಳು

ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ ಬಹುತೇಕ ಎಲ್ಲ ಸೌಲಭ್ಯಗಳೂ ಉಚಿತವಾಗಿ ದೊರೆಯುತ್ತವೆ. ಭಕ್ತರು ಸ್ವಲ್ಪ ಸಹನೆಯಿಂದ ವರ್ತಿಸಿ ಈ ಕೆಳಗಿನ ಸೌಲಭ್ಯಗಳನ್ನು ಬಳಸಿಕೊಳ್ಳಬಹುದು.

★ ತಿರುಪತಿಯ ಬಸ್‌ನಿಲ್ದಾಣ, ರೈಲ್ವೆ ನಿಲ್ದಾಣಗಳಿಂದ ಅಲಿಪಿರಿಗೆ (ಬೆಟ್ಟದ ಬುಡಕ್ಕೆ) ತಿ.ತಿ.ದೇ. ಬಸ್ ಉಚಿತವಾಗಿ ಕರೆದೊಯ್ಯುತ್ತದೆ.

★ ಅಲಿಪಿರಿಯಿಂದ ಯಾತ್ರಿಕರ ವಸ್ತುಗಳನ್ನು ತಿರುಮಲೆಗೆ ಉಚಿತವಾಗಿ ಕೊಂಡೊಯ್ಯಲಾಗುವುದು.

★ ತಿರುಮಲೆಯಲ್ಲಿರಲು ಉಚಿತ ಸತ್ರಗಳು ಇವೆ.
ಪಿಲಿಗ್ರಿಂ ಅಮಿನಿಟೀಸ್ ಸೆಂಟರ್‌ಗಳಲ್ಲಿ ಇರಬಹುದು.
ಪಿಲಿಗ್ರಿಂ ಅಮಿನಿಟೀಸ್ ಸೆಂಟರ್‌ನಲ್ಲಿ ಲಾಕರ್ ಸೌಕರ್ಯ, ಸ್ನಾನದ ಅವಕಾಶಗಳಿವೆ.
ಇಲ್ಲಿಯೇ ಕೂದಲನ್ನೂ ಕೊಡಬಹುದು.

★ ಕಲ್ಯಾಣಕಟ್ಟೆಯಲ್ಲಿ ಉಚಿತವಾಗಿ ತಲೆಗೂದಲನ್ನು ಸಮರ್ಪಿಸಬಹುದು.

★ ಸ್ವಾಮಿಯ ದರ್ಶನ ಉಚಿತವಾಗಿ ದೊರೆಯುವುದು.

★ ದರ್ಶನದ ನಂತರ ಪ್ರಸಾದ ಉಚಿತವಾಗಿ ನೀಡಲಾಗುವುದು.

★ ದರ್ಶನಾನಂತರ ನಿತ್ಯಾನ್ನದಾನಂ ಕಾಂಪ್ಲೆಕ್ಸ್‌ನಲ್ಲಿ ಉಚಿತ ಭೋಜನ ಸೌಲಭ್ಯವುಂಟು.

★ ತಿರುಮಲೆಯ ಆಲಯ - ಕಾಟೇಜುಗಳ ಮಧ್ಯೆ ಉಚಿತ ಬಸ್ ಸೌಲಭ್ಯವಿದೆ.

★ ಲಾಕರ್‌ಗಳು ಉಚಿತವಾಗಿ ದೊರೆಯುವುವು.

★ ಉಚಿತವಾಗಿ ಪಾದರಕ್ಷೆಗಳನ್ನು ಭದ್ರಪಡಿಸಬಹುದು.

10. ಆರ್ಜಿತಸೇವೆಯ ಟಿಕೆಟ್‌ಗಳು ಆಗಿಂದಾಗ್ಗೆ ದೊರೆಯುವುವೇ?

ಈ ಟಿಕೆಟ್‌ಗಳನ್ನು ಮೊದಲೇ ರಿಸರ್ವ್ ಮಾಡಿಸುವುದು ಉತ್ತಮ. ತಿರುಮಲೆಯ ವಿಜಯಾಬ್ಯಾಂಕಿನಲ್ಲಿ ಟಿಕೆಟ್‌ಗಳು ಲಭಿಸುವ ಅವಕಾಶವಿದೆ. ಆರ್ಜಿತಂ ಕಚೇರಿ, ವಿಜಯಾಬ್ಯಾಂಕ್‌ಗಳು, ತಿರುಮಲೆಯ ವೈಕುಂಠಂ ಕ್ಯೂಕಾಂಪ್ಲೆಕ್ಸ್ ಎದುರಿಗಿವೆ. ಇಲ್ಲಿಯೇ ಆರ್ಜಿತಂ ಟಿಕೆಟ್‌ಗಳು ಎಷ್ಟಿವೆ, ಎಂತಹ ಸೇವೆಗಳದ್ದು ಇವೆ -ಎಂಬುದನ್ನು ಕ್ಲೋಸ್ಡ್ ಸರ್ಕ್ಯೂಟ್ ಟಿ.ವಿ. ಯಲ್ಲಿ ನಿರಂತರವಾಗಿ ತೋರಿಸಲಾಗುತ್ತದೆ.

## ವಸತಿ ವಿವರ

11. ತಿರುಮಲೆಯಲ್ಲಿ ವಸತಿಯನ್ನು ಮೊದಲೇ ರಿಸರ್ವ್ ಮಾಡಿಸುವುದು ಹೇಗೆ? ಹಣವನ್ನು ಯಾರಿಗೆ ಎಷ್ಟು ದಿನ ಮೊದಲು ಹೇಗೆ ಕಳುಹಿಸಬೇಕು?

ನೂರು ರೂಪಾಯಿಗಳನ್ನು ಎಂ.ಓ. ಮೂಲಕ ಅಥವಾ ಡಿ.ಡಿ. ಮೂಲಕ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ಆರ್. ಓ. - 1) ತಿ.ತಿ.ದೇ. ತಿರುಮಲೆ ಇವರಿಗೆ ಕಳುಹಿಸುವುದರ ಮೂಲಕ ತಿರುಮಲೆಯಲ್ಲಿ ವಸತಿಯನ್ನು ಮುಂಗಡ ಕಾಯ್ದಿರಿಸಬಹುದು.

ಈ ಡಿ.ಡಿ. ಅಥವಾ ಎಂ.ಓ. ಅನ್ನು ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ಆರ್.ಓ. - 1) ತಿ. ತಿ. ದೇವಸ್ಥಾನಗಳು ತಿರುಮಲೆ ಇವರಿಗೆ ಕಳುಹಿಸಬೇಕು. ಎಷ್ಟು ಮಂದಿ ಬರುತ್ತಿದ್ದಾರೆ, ಎಂದು ಬರುತ್ತಿದ್ದಾರೆ ಎಂಬುದನ್ನು ವಿವರವಾಗಿ ಸ್ಪಷ್ಟವಾಗಿ ಬರೆಯಬೇಕು.

ಸಾಧ್ಯವಾದಷ್ಟೂ ಮುಂಚೆ ರಿಸರ್ವ್ ಮಾಡಿಸಬೇಕು. ಕನಿಷ್ಠ 15 ದಿನಗಳ ಮೊದಲು ಮಾಡಿಸಬೇಕು ಎಂದರೆ 20 ದಿನ ಮೊದಲು ಎಂ.ಓ./ಡಿ.ಡಿ. ಕಳುಹಿಸಬೇಕು.

12. ಕೇಳಿದ ವಸತಿ ಗೃಹದಲ್ಲಿ ಕೊಠಡಿ ನೀಡುವರೇ?

ವಸತಿಗಾಗಿ ಮುಂಗಡ ರಿಸರ್ವ್ ಮಾಡುವುದು ರಾಮಬಗೀಚಾ, ವರಾಹಸ್ವಾಮಿ ಹಿಲ್‌ವ್ಯೂ ಡಿಲಕ್ಸ್, ಸಪ್ತಗಿರಿ ಅತಿಥಿಗೃಹಗಳಲ್ಲಿ ಮಾತ್ರವೇ ಸಾಧ್ಯ. ಮಿಕ್ಕ ಸ್ಥಳಗಳಲ್ಲಿ ರಿಸರ್ವೇಷನ್ ಇಲ್ಲ.

ರಿಸರ್ವೇಷನ್ ಮಾಡಿಸಿಕೊಂಡವರು ಆ ತಾಕೀತು ಪತ್ರವನ್ನು ಸಿ.ಆರ್.ಓ. ಕಚೇರಿಯ ಎ.ಆರ್.ಪಿ. ಕೌಂಟರಿನಲ್ಲಿ ತೋರಿಸಿ ವಸತಿ ಪಡೆಯಬಹುದು.

13. ರಿಸರ್ವೇಷನ್ ಮಾಡಿಸಿದವರು ಆ ದಿನದಂದು ಬರದೆ ಇದ್ದರೆ?

ಭಕ್ತರು ತಮ್ಮ ರಿಸರ್ವೇಷನ್ ದಿನಕ್ಕೆ ಮೂರು ದಿನ ಮೊದಲೇ ತಿಳಿಸಿದರೆ ಆಗ ಮಾತ್ರ ಅವರು ಕೇಳಿದ ಮುಂದಿನ ದಿನದಂದು ಖಾಲಿ ಇದ್ದರೆ ಅದೇ ಶುಲ್ಕವನ್ನು ಹೊಂದಿಸಲಾಗುವುದು. ರಿಸರ್ವೇಷನ್ ದಿನದ ನಂತರದ ದಿನದಲ್ಲಿ ಬಂದರೆ ಮಾರ್ಪಾಡು ಸಾಧ್ಯವಿಲ್ಲ.

ಸಮಾಚಾರ ಕೇಂದ್ರಗಳಲ್ಲಿ ರಿಸರ್ವ್ ಮಾಡಿದರೆ ಈ ನಿಬಂಧನೆ ವರ್ತಿಸದು.

14. ರಿಸರ್ವೇಷನ್ ಖಚಿತವಾದದ್ದು ಇಲ್ಲದ್ದು ತಿಳಿಸುವರೇನು?

ತಿಳಿಸುತ್ತಾರೆ, ಅದಕ್ಕೆ ಸಂಬಂಧಿಸಿದ ಕಾಗದವನ್ನು ಕಳುಹಿಸುತ್ತಾರೆ.

15. ಪದ್ಮಾವತೀ ಅತಿಥಿಗೃಹ ಮೊದಲಾದ ಇತರ ಕಡೆಗಳಲ್ಲಿ ರಿಸರ್ವ್ ಮಾಡುವರೇನು?

ಇವುಗಳಿಗೆ ರಿಸರ್ವೇಷನ್ ಸೌಲಭ್ಯವಿಲ್ಲ. ಯಾತ್ರಿಕರು ಆಯಾ ವಸತಿಗೃಹಗಳ ಬಳಿಗೆ ಹೋಗಿ ವಿಚಾರಿಸಿದರೆ ಖಾಲಿ ಇದ್ದರೆ ನೀಡುತ್ತಾರೆ.

16. ಒಬ್ಬರೇ ಬಂದರೆ ಕೋಣೆ ನೀಡುವರೇನು?

ಒಬ್ಬರಿಗೆ ಕೋಣೆ ನೀಡುವುದಿಲ್ಲ. ಅವರು ತಿರುಮಲೆಯ ಪಿಲಿಗ್ರಿಮ್ ಅಮಿನಿಟೀಸ್ ಸೆಂಟರ್‌ಗಳಲ್ಲಿ ಇರಬಹುದು. ಇಲ್ಲಿ ಸ್ನಾನದ ಸೌಕರ್ಯ, ಲಾಕರ್ ಸೌಲಭ್ಯ ಮೊದಲಾದವುಗಳಿರುತ್ತವೆ.

17. ನಾಲ್ಕು, ಐದು ದಿನ ತಿರುಮಲೆಯಲ್ಲಿ ಇರಬೇಕೆಂದರೆ ಹೇಗೆ? ವಸತಿ ನೀಡುವರೇನು?

ಇಲ್ಲ. ವಸತಿ ಕೇವಲ 24 ಗಂಟೆಗಳಿಗೆ ಮಾತ್ರವೇ ನೀಡುವರು. ಅತ್ಯವಸರ ಪರಿಸ್ಥಿತಿಯಲ್ಲಿ ಆರೋಗ್ಯ ಸರಿಯಿಲ್ಲದಾಗ, ಮಾರನೆಯ ದಿನ ಆರ್ಜಿತಸೇವೆಯ ಟಿಕೆಟ್ ಇದ್ದಾಗ ಒಂದು ದಿನ ಹೆಚ್ಚಿಗೆ ನೀಡುವರು. ಕಾಟೇಜು ದಾನಕರ್ತರು ಮಾತ್ರ ಒಮ್ಮೆಗೆ ಹತ್ತು ದಿನ ಇರಬಹುದು.

18. ಯಾರಿಗೆ ದೂರು ನೀಡುವುದು?

ತಿರುಮಲೆಯ ಎಲ್ಲ ವಿಚಾರಣಾ ಕೇಂದ್ರಗಳಲ್ಲಿಯೂ ದೂರು ದೋಷಗಳ ವಿವರಪುಸ್ತಕವಿದೆ. ಸಲಹೆಗಳನ್ನು ನೀಡಬಹುದು. ★

## ವಸತಿ ಕಾಯ್ದಿರಿಸುವಿಕೆ - ಹೆಚ್ಚಿನ ಮಾಹಿತಿ

ತಿರುಮಲೆಯಲ್ಲಿನ ವಸತಿಯನ್ನು ಮುಂಗಡ ಕಾಯ್ದಿರಿಸುವ ಬಗ್ಗೆ ತಮಗೆ ಮಾಹಿತಿ ದೊರೆಯವುದು ಕಷ್ಟವಾಗಿದೆಯೆಂದು ಹಲವು ಮಂದಿ ಯಾತ್ರಿಕರು ತಿಳಿಸಿದ್ದಾರೆ. ಯಾತ್ರಿಕರಿಗೆ ವಸತಿಯ ರಿಸರ್ವೇಷನ್ ಬಗ್ಗೆ ಸೂಕ್ತವಾದ ಮಾರ್ಗದರ್ಶನ ನೀಡಲು ಕೆಳಕಂಡ ಅಂಶಗಳನ್ನು ಗಮನಿಸಬೇಕೆಂದು ಕೋರಲಾಗಿದೆ.

1. ತಿರುಮಲೆಯ ಕೇಂದ್ರಸ್ವಾಗತ ಕಚೇರಿಯ ಎ.ಆರ್.ಪಿ. ಕೌಂಟರಿನ ಬಳಿಯ ನೋಟೀಸು ಬೋರ್ಡಿನಲ್ಲಿ ಆಯಾ ದಿನದ ರಿಸರ್ವೇಷನ್ ಸಮಾಚಾರದ ವಿವರವನ್ನು ನೀಡಲಾಗುತ್ತದೆ. ಈ ವಿವರ ಪತ್ರದಲ್ಲಿ ಯಾತ್ರಿಕರು ತಮ್ಮ ಹೆಸರು ಇದೆಯೋ ಇಲ್ಲವೊ ನೋಡಿ ತಿಳಿಯಬಹುದು. ಇತರ ಯಾವುದೇ ಸೇವೆ, ಪೂಜೆಗಳ ಬಗ್ಗೆ ಅಧಿಕ ವಿವರಗಳಿಗಾಗಿ ಯಾತ್ರಿಕರು ''ಮೇ ಐ ಹೆಲ್ಪ್ ಯು'' ಕೌಂಟರ್‌ಗಳಲ್ಲಿ ವಿಚಾರಿಸಬಹುದು.
2. ತಿರುಮಲೆಯ ಸ್ವಾಗತ ಕಚೇರಿಯ ಎ.ಇ.ಓ. ಅವರಿಂದ ಯಾತ್ರಿಕರು ತಮ್ಮ ವಸತಿಯ ರಿಸರ್ವೇಷನ್ನಿನ ಪ್ರತ್ಯುತ್ತರವಾಗಲೀ, ಖಚಿತ ಮಾಹಿತಿಯಾಗಲೀ ಪಡೆಯದಿದ್ದಲ್ಲಿ, ಅವರು ತಿರುಮಲೆಯ ದೂರವಾಣಿ 77681 ನಂಬರಿಗೆ ಯಾವುದೇ ಕೆಲಸದ ದಿನದ (ರಜೆಯ ದಿನಗಳ ಹೊರತು) ಬೆಳಗ್ಗೆ 11-00 ರಿಂದ ಸಂಜೆ 5-00 ವರೆಗೂ, 70928 ನಂಬರಿನ ದೂರವಾಣಿಗೆ ಯಾವುದೇ ಹೊತ್ತಿನಲ್ಲಿಯೂ ಫೋನ್ ಮಾಡಿ ತಮ್ಮ ಡಿ. ಡಿ. ಯ / ಎಂ.ಓ. ವಿವರಗಳನ್ನು ನೀಡಿ ಸರಿಯಾದ ಉತ್ತರ ಪಡೆಯಬಹುದು.
3. ಸೇವೆಯ ಟಿಕೆಟ್‌ಗಳಿಗೆ, ವಸತಿ ಕಾಯ್ದಿರಿಸುವದಕ್ಕೆ ಬೇರೆ ಬೇರೆ ಡಿ.ಡಿ.ಗಳನ್ನು ಕಳುಹಿಸಬೇಕು. ಸೇವೆಗಳಿಗಾಗಿ ಮೂರು ತಿಂಗಳ ಮೊದಲು ಡಿ.ಡಿ.ಯನ್ನು - ಪೇಷ್ಕಾರ್ ಶ್ರೀ ತಿರುಮಲೆ ಆಲಯ - ತಿರುಮಲೆ - ಇವರಿಗೆ ಕಳುಹಿಸಬೇಕು. ಸೇವೆಗಳ ಬಗ್ಗೆ ವಿವರಗಳಿಗಾಗಿ ಯಾತ್ರಿಕರು ತಿರುಮಲೆಯ 79277 ದೂರವಾಣಿ ನಂಬರಿಗೆ ಫೋನ್ ಮಾಡಿ ಆರ್ಜಿತಸೇವೆ ವಿಭಾಗದಲ್ಲಿ ವಿಚಾರಿಸಬಹುದು.
4. ವಸತಿ ಕಾಯ್ದಿರಿಸುವುದರ ಬಗ್ಗೆ ಮಾಹಿತಿ ನೀಡಲು, ಮುಂಗಡ ಕಾಯ್ದಿರಿಸುವ ಕೌಂಟರಿನಲ್ಲಿ ಈ ಮಾಹಿತಿಯನ್ನು ನೀಡಲೆಂದೇ ಒಂದು ಪ್ರತ್ಯೇಕ ಕಂಪ್ಯೂಟರ್ ಏರ್ಪಡಿಸಿದ್ದು, ತಿ.ತಿ.ದೇ. ಕೇಂದ್ರ ಸ್ವಾಗತ ಕಚೇರಿಯಲ್ಲಿನ ಪ್ರಧಾನ ಕಂಪ್ಯೂಟರ್ ಸೆಲ್‌ನಲ್ಲಿಯೂ ಯಾತ್ರಿಕರಿಗೆ ವಿವರವಾದ ಮಾಹಿತಿ ದೊರೆಯುವುದು. ಈ ಸೌಲಭ್ಯ ದಿನದ ಎಲ್ಲ ವೇಳೆಯಲ್ಲಿಯೂ ಉಪಲಬ್ಧವಿದೆ.

ಕೆ. ಸತ್ಯನಾರಾಯಣ ರಾಜು,
ಡೆ.ಇ.ಓ. (ಸ್ವಾಗತ II), ತಿ.ತಿ.ದೇ.

## ಆರ್ಜಿತ ಸೇವೆಗಳು

# ಶ್ರೀ ವೆಂಕಟೇಶ್ವರಸ್ವಾಮಿ ಆಲಯ – ತಿರುಮಲ

| ಕ್ರ.ಸಂ | ಸೇವೆ/ಉತ್ಸವ | ಪ್ರವೇಶ | ದಿನ | ಶುಲ್ಕ |
|---|---|---|---|---|
| **I. ದೈನಿಕ ಸೇವೆಗಳು :** | | | | |
| 1. | ಸುಪ್ರಭಾತ | 1 | ಪ್ರತಿದಿನ | ರೂ. 120-00 |
| 2. | ತೋಮಾಲಸೇವೆ | 1 | ಶುಕ್ರ, ಶನಿ, ಭಾನು ವಾರಗಳ ಹೊರತು | ರೂ. 220-00 |
| 3. | ಅರ್ಚನೆ | 1 | ಶುಕ್ರ, ಶನಿ, ಭಾನು ವಾರಗಳ ಹೊರತು | ರೂ. 220-00 |
| 4. | ಏಕಾಂತಸೇವೆ | 1 | ಪ್ರತಿದಿನ | ರೂ. 120-00 |
| 5. | ಕಲ್ಯಾಣೋತ್ಸವ | 5 | ಪ್ರತಿದಿನ | ರೂ. 2500-00 |
| 6. | ವಿಶೇಷ ಕಲ್ಯಾಣೋತ್ಸವ | 2 | ಪ್ರತಿದಿನ | ರೂ. 750-00 |
| 7. | ಆರ್ಜಿತ ಬ್ರಹ್ಮೋತ್ಸವ | 5 | ಪ್ರತಿದಿನ | ರೂ. 1000-00 |
| 8. | ಡೋಲೋತ್ಸವ | 5 | ಪ್ರತಿದಿನ | ರೂ. 1000-00 |
| 9. | ಅರ್ಚನಾನಂತರ ದರ್ಶನ | 1 | ಶುಕ್ರವಾರ ಹೊರತು | ರೂ. 100-00 |
| 10. | ಸಹಸ್ರ ದೀಪಾಲಂಕಾರಸೇವೆ | 5 | ಪ್ರತಿದಿನ | ರೂ. 1000-00 |
| 11. | ವಸಂತೋತ್ಸವ | 10 | ಪ್ರತಿದಿನ | ರೂ. 3000-00 |
| **II. ವಾರ ಸೇವೆಗಳು :** | | | | |
| 1. | ವಿಶೇಷ ಪೂಜೆ | 5 | ಸೋಮವಾರ | ರೂ. 3000-00 |
| 2. | ಅಷ್ಟದಳ ಪಾದಪದ್ಮಾರಾಧನೆ | 2 | ಮಂಗಳವಾರ | ರೂ. 2500-00 |
| 3. | ಸಹಸ್ರ ಕಲಶಾಭಿಷೇಕ | 6 | ಬುಧವಾರ | ರೂ. 5000-00 |
| 4. | ತಿರುಪ್ಪಾವಡಾ | 6 | ಗುರುವಾರ | ರೂ. 5000-00 |
| 5. | ಪೂರಾಭಿಷೇಕ | 1 | ಶುಕ್ರವಾರ | ರೂ. 750-00 |
| 6. | ಪುನುಗುಬಟ್ಟಲು | 1 | ಶುಕ್ರವಾರ | ರೂ. 300-00 |
| 7. | ಕಸ್ತೂರಿ ಬಟ್ಟಲು | 1 | ಶುಕ್ರವಾರ | ರೂ. 150-00 |
| 8. | ನಿಜಪಾದ ದರ್ಶನ | 1 | ಶುಕ್ರವಾರ | ರೂ. 100-00 |
| 9. | ವಸ್ತ್ರಾಲಂಕಾರ ಸೇವೆ | 2 | ಶುಕ್ರವಾರ | ರೂ. 12250-00 |
| **III. ವಾರ್ಷಿಕ ಉತ್ಸವಗಳು :** | | | | |
| 1. | ವಸಂತೋತ್ಸವ | 10 | ಏಪ್ರಿಲ್ | ರೂ. 3000-00 |
| 2. | ಪದ್ಮಾವತೀ ಪರಿಣಯ | 5 | ಮೇ | ರೂ. 5000-00 |
| 3. | ಅಭಿಧ್ಯೇಕ ಅಭಿಷೇಕ | 5 | ಜೂನ್ | ರೂ. 2000-00 |
| 4. | ಪುಷ್ಪ ಪಲ್ಲಕ್ಕಿ | 5 | ಜುಲೈ | ರೂ. 1000-00 |
| 5. | ಪವಿತ್ರೋತ್ಸವ | 5 | ಆಗಸ್ಟ್ | ರೂ. 7500-00 |
| 6. | ಪುಷ್ಪಯಾಗ | 5 | ನವಂಬರ್ | ರೂ. 3500-00 |
| 7. | ಕೋಯಿಲ್ ಆಳ್ವಾರ್ ತಿರುಮಂಜನ | 10 | ವರ್ಷಕ್ಕೆ 4 ಬಾರಿ | ರೂ. 3000-00 |
| 8. | ಪ್ಲವೋತ್ಸವ | 5 | ವರ್ಷಕ್ಕೆ 5 ದಿನ | ರೂ. 2500-00 |

ಆರ್ಜಿತ ಸೇವೆ ಮಾಡಬಯಸುವ ಯಾತ್ರಿಕರು ತಕ್ಕ ಹಣದ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಪಡೆದು 90 ದಿನ ಮೊದಲು ಪೇಷ್ಕಾರ್ ಶ್ರೀ ತಿರುಮಲೆ ಆಲಯ - ತಿರುಮಲೆ - ಇವರಿಗೆ ಕಳುಹಿಸಬೇಕು. ಹೆಚ್ಚಿನ ವಿವರಗಳಿಗಾಗಿ ವಿಚಾರಿಸಿ - **ದೂರವಾಣಿ - 08574 - 79277.**

## ನಾಗುಲಾಪುರದಲ್ಲಿ ವೈಭವದ ಬ್ರಹ್ಮೋತ್ಸವ

ನಾಗುಲಾಪುರ ಪುತ್ತೂರು - ಮದರಾಸು ರಸ್ತೆಯಲ್ಲಿರುವ ಊರು. ವಿಜಯನಗರದ ವಿಖ್ಯಾತ ಚಕ್ರವರ್ತಿ ಶ್ರೀಕೃಷ್ಣದೇವರಾಯನು ತನ್ನ ತಾಯಿಯ ಹೆಸರಿನಲ್ಲಿ, ಇಲ್ಲಿ ಮೊದಲೇ ಇದ್ದಂತಹ ಶ್ರೀ ವೇದನಾರಾಯಣಸ್ವಾಮಿ ಆಲಯದ ಸುತ್ತಲೂ ಒಂದು ಗ್ರಾಮವನ್ನು ನಿರ್ಮಿಸಿದ. ಅದೇ ನಾಗುಲಾಪುರ ಎಂದು ಚರಿತ್ರೆಯಲ್ಲಿ ನಿಂತಿತು. ಇಲ್ಲಿನ ಸ್ವಾಮಿ ವೇದನಾರಾಯಣಸ್ವಾಮಿ - ಮತ್ಸ್ಯರೂಪಿ. ವೇದಗಳನ್ನು ಮಧುಕೈಟಭರಿಂದ ರಕ್ಷಿಸಲು ಮೀನಾಗಿ ನೀರಿಗಿಳಿದು ವೇದೋದ್ಧರನಾದ. ಹಾಗೆಂತಲೇ ಇಲ್ಲಿನ ನಾಲ್ಕು ಕೈನ ಭಗವಂತ ನಡುವಿನಿಂದ ಕೆಳಗೆ ಮತ್ಸ್ಯದಾಕಾರದಲ್ಲಿ ಕಂಡುಬರುತ್ತಾನೆ. ಮಿಕ್ಕಂತೆ ಮಹಾವಿಷ್ಣುವಿನ ಸಾಧಾರಣ ರೂಪವೇ. ಇಂತಹ ಒಂದು ವೇದೋದ್ಧಾರಕ ಮೂರ್ತಿಯನ್ನು ತನ್ನ ಕಿರಣಗಳಿಂದ ಸ್ಪರ್ಶಿಸಿ ಸೂರ್ಯನು ವರ್ಷಕ್ಕೆ ಮೂರುದಿನ ಪೂಜೆ ಮಾಡುತ್ತಾನೆ.

ಹೀಗೆಲ್ಲ ಖ್ಯಾತಿ ಹೊಂದಿರುವ ಶ್ರೀ ವೇದನಾರಾಯಣ ಸ್ವಾಮಿಯ ವಾರ್ಷಿಕ ಬ್ರಹ್ಮೋತ್ಸವಗಳು 25-4-2002 ರಿಂದ 4-5-2002 ರವರೆಗೆ ನಡೆದು ಯಶಸ್ವಿಯಾದವು. 26-4-2002 ರಂದು ಧ್ವಜಾರೋಹಣವಾಗಿ ಅಂದು ರಾತ್ರಿ ಸ್ವಾಮಿಯು ಉಭಯ ನಾಯಕಿಯರೊಡನೆ ಸಪ್ತಭೋಗದ ಶೇಷವಾಹನನಾಗಿ ಊರಿನಲ್ಲಿ ಮೆರವಣಿಗೆ ಬಂದುದು ಜನರ ಮನಸ್ಸಿಗೆ ಹರ್ಷದಾಯಕವಾಗಿದ್ದಿತು.

ನಂತರದ ದಿನಗಳಲ್ಲಿ ದಿನವೂ ಬೆಳಗ್ಗೆ ರಾತ್ರಿಗಳಲ್ಲಿ ವಿವಿಧ ರೀತಿಯ ವಾಹನಗಳಲ್ಲಿ ಮೆರವಣಿಗೆ ನಡೆಯಿತು. 30-4-2002 ರಂದು ಸಂಜೆ ಗರುಡೋತ್ಸವ ಅತ್ಯಂತ ಘನವಾಗಿ ನಡೆಯಿತು. 3-5-2002 ರಂದು ರಥೋತ್ಸವ ಊರಿನಲ್ಲೆಲ್ಲ ಉತ್ಸಾಹ ಸಂಭ್ರಮಗಳ ವಾತಾವರಣವನ್ನು ಮೂಡಿಸಿ ವಿಜೃಂಭಣೆಯಿಂದ ನಡೆಯಿತು.

4-5-2002 ರಂದು ಶನಿವಾರ ಸ್ವಾಮಿಯ ಬ್ರಹ್ಮೋತ್ಸವದ ಚಕ್ರಸ್ನಾನ ವಿಧಿವತ್ತಾಗಿ ಆಲಯ ಪುಷ್ಕರಿಣಿಯಲ್ಲಿ ನಡೆಯಿತು.

ಬ್ರಹ್ಮೋತ್ಸವಗಳಲ್ಲಿ ಊರೆಲ್ಲ ತಳಿರು ತೋರಣಗಳಿಂದಲೂ, ಹೂವಿನಲಂಕಾರಗಳಿಂದಲೂ ಅಲಂಕೃತವಾಗಿದ್ದಿತು. ಸ್ಥಳೀಯರೇ ಅಲ್ಲದೆ ಹತ್ತಿರದ ಊರುಗಳಿಂದಲೂ ಹೆಚ್ಚು ಮಂದಿ ಆಗಮಿಸಿ ಬ್ರಹ್ಮೋತ್ಸವದ ಕ್ರಮದಲ್ಲಿ ಭಾಗವಹಿಸಿದರು.

# ವಾರ್ತಾಲಹರಿ

## ಯಶಸ್ವಿಯಾದ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವವು 17-5-2002 ರಿಂದ 26-5-2002 ವರೆಗೆ ಉತ್ಸಾಹದಿಂದ ನಡೆದು ಮುಕ್ತಾಯವಾಯಿತು.

ತತ್ಸಂಬಂಧವಾಗಿ 17-5-2002 ಶುಕ್ರವಾರ ಸಂಜೆ ವಿಷ್ವಕ್ಸೇನರು ಆಲಯದ ಹೊರಕ್ಕೆ ಬಂದು ಬ್ರಹ್ಮೋತ್ಸವದ ಯಜ್ಞಕಾರ್ಯಕ್ಕೆ ಮೃತ್ಸಂಗ್ರಹ ಮಾಡಿದರು. ಮಾರನೆಯ ದಿನದಿಂದ ನಡೆಯತಕ್ಕ ಉತ್ಸವಗಳಿಗೆ ದೇವಾದಿ ದೇವತೆಗಳನ್ನು ಆಹ್ವಾನಿಸಿದರು. ನಂತರ ಆಲಯದಲ್ಲಿ ಬ್ರಹ್ಮೋತ್ಸವದ ಅಂಕುರಾರ್ಪಣೆಯಾಯಿತು.

18-5-2002 ರಂದು ಧ್ವಜಾರೋಹಣ ಘನವಾಗಿ ನಡೆಯಿತು. ಅಂದು ಸಂಜೆ ದೊಡ್ಡ ಶೇಷವಾಹನದಲ್ಲಿ ಸ್ವಾಮಿಯು ಊರ ಮೆರವಣಿಗೆಯಲ್ಲಿ ಉಭಯ ನಾಯಕಿಯರೊಡನೆ ದಯಮಾಡಿಸಿದರು. ಭಕ್ತರಿಗೆ ಆನಂದದ ಕಡಲಲ್ಲಿ ಈಜಾಡಿದ ಅನುಭವ.

ದಿನವೂ ಶ್ರೀ ಗೋವಿಂದರಾಜಸ್ವಾಮಿಯ ಊರ ಮೆರವಣಿಗೆ ಬೆಳಗ್ಗೆ ಸಾಯಂಕಾಲಗಳಲ್ಲಿ ನಡೆಯಿತು. ಹಂಸವಾಹನದಲ್ಲಿ ವೀಣಾಪಾಣಿಯಾಗಿಯೂ, ಉಗ್ರಸಿಂಹ ವಾಹನದಲ್ಲಿ ಪುರುಷಸಿಂಹನಾಗಿಯೂ, ಕಲ್ಪವೃಕ್ಷ ವಾಹನದಲ್ಲಿ ಕಲ್ಪತರುವಾಗಿಯೂ, ಪಲ್ಲಕ್ಕಿಯಲ್ಲಿ ಮೋಹಿನಿಯಾಗಿಯೂ - ಸ್ವಾಮಿ ವಿವಿಧ ರೂಪದಲ್ಲಿ ದಿನದಿನವೂ ಕಂಡು ಬರುತ್ತಿರಲು ಇಂದು ಬಂದವರು ನಾಳೆಯೂ ಇದ್ದುನೋಡಿಕೊಂಡು ಹೋಗುವ ಎಂಬಂತೆ ಅಲಂಕಾರ ವೈವಿಧ್ಯ, ಅನುಗ್ರಹದ ಔದಾರ್ಯವಿದ್ದಿತು. ಗರುಡ ವಾಹನದಲ್ಲಿ ವಿಶೇಷ ಅಲಂಕಾರಗಳಿಂದ ಸ್ವಾಮಿ ಹೊರಬಂದಾಗ ಎಲ್ಲರೂ ಮುಗಿಬಿದ್ದು, ಸಾಲುಗಟ್ಟಿ ರಸ್ತೆಯ ಇಕ್ಕೆಲಗಳಲ್ಲಿ ಕಾದುನಿಂತು ಸ್ವಾಮಿಯನ್ನು ಬರಮಾಡಿಕೊಂಡರು. 25-2-2002 ರಂದು ಶನಿವಾರ ರಥೋತ್ಸವ. ಆತ್ಮಾನಾಂ ರಥಿನಂ ವಿದ್ಧಿ ಎಂಬ ತತ್ತ್ವವನ್ನು ಸಾರಲೆಂಬಂತೆ ಸ್ವಾಮಿ ಹೊರಬಂದಾಗ ಅಶೇಷ ಜನ ಉಘೇ ಉಘೇ ಎಂದು ಸ್ವಾಮಿಯನ್ನು ಸ್ವಾಗತಿಸಿದರು.

26-5-2002 ರಂದು ಚಕ್ರಸ್ನಾನವಾಗಿ ಧ್ವಜಾವರೋಹಣವಾಯಿತು. ಸ್ವಾಮಿಯ ಬ್ರಹ್ಮೋತ್ಸವಗಳು ಯಶಸ್ವಿಯಾಗಿ ಮುಗಿತಾಯ ಹೊಂದಿದವು. ತತ್ಸಂಬಂಧದಲ್ಲಿ ಸಂಗೀತ, ಹರಿಕಥೆ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳೂ ಏರ್ಪಾಡಾಗಿದ್ದವು. ಊರೆಲ್ಲ ಹಸಿರು ಹೂಗಳಿಂದ ಅಲಂಕೃತವಾಗಿ ಯಾತ್ರಿಕ ನಗರ ಭಕ್ತನಗರವಾಗಿದ್ದಿತು.

## ಯಶಸ್ವಿ ಪದ್ಮಾವತೀ ಪರಿಣಯ

ತಿರುಮಲೆಯಲ್ಲಿ ವಾರ್ಷಿಕ ಪದ್ಮಾವತೀ ಪರಿಣಯವು ಮೂರುದಿನಗಳ ಕಾಲ 20-5-2002 ರಿಂದ ನಾರಾಯಣಗಿರಿಯ ಬಯಲು ಕಲ್ಯಾಣ ಮಂಟಪದಲ್ಲಿ ಯಶಸ್ವಿಯಾಗಿ ನಡೆಯಿತು.

20-5-2002 ರಂದು ಸೋಮವಾರದಂದು ಬೆಳಗ್ಗೆ ಸಾಲಂಕೃತರಾದ ಸ್ವಾಮಿ ವರನಾಗಿ

# ತಿರುಮಲೆಯ ಸ್ವಾಮಿಗೆ "ಗೋಸೇವಾ ನಿಧಿ"

ತಿರುಮಲ ತಿರುಪತಿ ದೇವಸ್ಥಾನದವರ ಶ್ರೀ ವೆಂಕಟೇಶ್ವರ ಡೈರಿ ಫಾರಂ ಅಭಿವೃದ್ಧಿ ಹೊಂದುತ್ತಿರುವ ಸಂಸ್ಥೆ, ತಿರುಮಲೆಯ ಸ್ವಾಮಿಯ ನಿತ್ಯಸೇವೆಗಳಿಗೆ ನಿತ್ಯಾನ್ನದಾನಕ್ಕೆ ವಿಕಲಾಂಗ ಸೇವಾ ಶಿಬಿರಗಳಿಗೆ ಮತ್ತೂ ತಿ.ತಿ.ದೇ. ಆಡಳಿತದ ಆಲಯಗಳಿಗೆ ನಿತ್ಯವೂ ಅವಸರವಾಗುವ ಹಾಲು ಮೊಸರು ತುಪ್ಪಗಳನ್ನು ಒದಗಿಸುತ್ತಿದೆ.

ಈ ಡೈರಿ ಫಾರಮ್ಮಿನಲ್ಲಿ - ಪಶುಸಂಗೋಪನಾಶಾಲೆಯಲ್ಲಿ - ಸುಮಾರು 500 ಹಸುಗಳು ಮತ್ತು ಸ್ವಾಮಿಗೆ ಸೇರಿದ ಕುದುರೆಗಳು, ಆನೆಗಳು, ಪುನುಗು ಬೆಕ್ಕು, ನಂದಿವಾಹನಗಳು ಮೊದಲಾದವೆಲ್ಲ ಡಾ|| ಪಿ. ಕೊಂಡಾರೆಡ್ಡಿ ಅವರ ಪರ್ಯವೇಕ್ಷಣೆಯಲ್ಲಿ ನಿಪುಣರಾದ ವೈದ್ಯರುಗಳ ನಿರಂತರ ಕೃಷಿಯಿಂದ ಪೋಷಿಸಲ್ಪಡುತ್ತಿವೆ.

ಸ್ವಾಮಿ ಸೇವೆಯಲ್ಲಿ ಗೋಕ್ಷೀರದ ಅಗತ್ಯವನ್ನು ಗುರುತಿಸುತ್ತ ಅನೇಕ ಮಂದಿ ಭಕ್ತರು ಅನಾದಿ ಕಾಲದಿಂದಲೂ ಗೋದಾನವನ್ನು ಮಾಡುತ್ತಿದ್ದಾರೆ. ಮುಖ್ಯವಾಗಿ ಈಚಿನ ಕಾಲದಲ್ಲಿ ಶ್ರೀ ವೆಂಕಟೇಶ್ವರ ಭಕ್ತ ಸಮಾಜದಂತಹವರ ಮೂಲಕ ಹಲವು ಲಕ್ಷ ರೂಪಾಯಿಗಳು ಈ ಕಾರ್ಯಕ್ಕಾಗಿ ಸೇರಿ ಬಂದಿವೆ. ಈಗ ಆಸ್ಟ್ರೇಲಿಯಾದಿಂದಲೂ ಪ್ರತ್ಯೇಕವಾಗಿ ಪುಷ್ಟಿಯಿಂದ ಬೆಳೆದ ಹಸುಗಳನ್ನು ತರಿಸಲಾಗುತ್ತಿದೆ.

ಮುಖ್ಯವಾಗಿ ಗೋಶಾಲೆಯ ಮೂಲಕ ಮತ್ತಷ್ಟು ಹಸುಗಳನ್ನು ಸೇರಿಸಿ ಸ್ವಾಮಿಯ ನಿತ್ಯಸೇವೆಗಳಲ್ಲಿ ಕ್ಷೀರಸಮೃದ್ಧಿಯಿರುವಂತೆ ನೋಡಿಕೊಳ್ಳಲು ತಿ.ತಿ.ದೇ. ವತಿಯಿಂದ ಶ್ರೀ ವೆಂಕಟೇಶ್ವರ ಗೋಸಂರಕ್ಷಣ ಟ್ರಸ್ಟ್ ಏರ್ಪಾಡಾಗಿದೆ.

ಗೋಮಾತೆಯ ಸೇವೆ ಭಾರತೀಯರಿಗೆ ಪವಿತ್ರತಮವಾದ ಕರ್ತವ್ಯ. ಗೋಮಾತೆಯ ತ್ಯಾಗ ನಿರತಿ, ಪವಿತ್ರಗಳನ್ನು ಸ್ತುತಿಸಲು ಆದಿಶೇಷನಿಗೂ ಅಸದಳವೆಂಬುದು ಸರಿ. ಅಂತಹ ಗೋವು ಸ್ವಾಮಿಯನ್ನು ಸೇವಿಸಲು ಗೋಶಾಲೆಗೆ ಬರುವುದಾದರೆ, ಬಂದರೆ, ಅವನ್ನು ಪವಿತ್ರವಾಗಿ ಪೂಜ್ಯವಾಗಿ ಪರಿರಕ್ಷಿಸಿ ಪೋಷಿಸುವುದು ನಮ್ಮ ಧರ್ಮವೂ ಆಗಿದೆ.

ಶ್ರೀ ವಾಡ್ರೇವು ಗವರ್‍ರಾಜು ಅವರು ಶ್ರೀ ವೆಂಕಟೇಶ್ವರ ಭಕ್ತ ಸಮಾಜದ ಮೂಲಕ ಇದುವರೆಗೆ ಬ್ಯಾಂಕ್ ಡ್ರಾಫ್ಟ್‌ಗಳ ಮೂಲಕವೇ ಗೋಸೇವೆ ಸಲ್ಲಿಸಿದಂತೆಯೇ ಬರುವ ಆಗಸ್ಟ್ 31 ರಂದು ಶ್ರೀಕೃಷ್ಣ ಜನ್ಮಾಷ್ಟಮಿ ದಿನದಂದು ತಿ. ತಿ. ದೇವಸ್ಥಾನಗಳ ಸಹಕಾರದಿಂದ 'ಕಾಮಧೇನು ಮಹಾಯಜ್ಞವನ್ನು' ನಿರ್ವಹಿಸಿ ಶ್ರೀ ವೆಂಕಟೇಶ್ವರ ಗೋಸಂರಕ್ಷಣ ನಿಧಿಗೆ ಒಂದು ಕೋಟಿ ರೂಪಾಯಿಗಳ ನಿಧಿಯನ್ನು ಸಮರ್ಪಿಸಲಿದ್ದಾರೆ.

ಇಂತಹ ಮಹತ್ತರ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಕಂಚಿ ಕಾಮಕೋಟಿ ಪೀಠಾಧಿಪತಿಗಳು ಶ್ರೀ ಶ್ರೀ ಶಂಕರ ವಿಜಯೇಂದ್ರ ಸರಸ್ವತೀ ಸ್ವಾಮಿಜೀ ಅವರು ಬರಲಿದ್ದಾರೆ. ತಿ.ತಿ.ದೇ. ಪೂರ್ವ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಡಾ|| ಐ. ವಿ. ಸುಬ್ಬಾರಾವ್ ಅವರು ಸಹ ಭಾಗವಹಿಸಲಿದ್ದಾರೆ.

ಇದರೊಡನೆಯೇ ಶ್ರೀ ವೆಂಕಟೇಶ್ವರ ಭಕ್ತಿ ಪ್ರಚಾರ ಪೀಠದ ಪ್ರತ್ಯೇಕ ಕಾರ್ಯಕ್ರಮಗಳಾಗಿ ಆಗಸ್ಟ್ - 30 ಹಾಗೂ ಸೆಪ್ಟೆಂಬರ 1 ರಂದು ಗಣಪತಿಹೋಮ, ಶ್ರೀನಿವಾಸ ಐಶ್ವರ್ಯ ಲಕ್ಷ್ಮಿ ಹೋಮ, ಶ್ರೀ ವೆಂಕಟೇಶ್ವರ ಲಕ್ಷನಾಮಾರ್ಚನ, ಆಯುಷ್‌ಹೋಮ, ಶ್ರೀ ವೆಂಕಟೇಶ್ವರ ಲಿಖಿತನಾಮ ಜಪ ಸಮರ್ಪಣ, ಅನ್ನಮಯ್ಯ ಆರಾಧನೋತ್ಸವಗಳು ನಡೆಯುತ್ತವೆ.

ತಿರುಮಲೆ ಸ್ವಾಮಿಯ ಗೋಸೇವಾನಿಧಿಯ ವಂತಿಗೆಗಳನ್ನು ನೀಡಬಯಸುವ ಭಕ್ತರು ಕೇವಲ ಬ್ಯಾಂಕ್ ಡ್ರಾಫ್ಟ್‌ಗಳ ಮೂಲಕ ಮಾತ್ರವೇ ಸಾವಿರ ಹಾಗೂ ಅದರ ಗುಣಕಗಳಲ್ಲಿ ವಂತಿಗೆಗಳನ್ನು **ನಿರ್ದೇಶಕರು, ಎಸ್.ವಿ.ಡೈರಿಫಾರಂ, ತಿ.ತಿ.ದೇ., ತಿರುಪತಿ** ಇವರಿಗಾಗಲೀ **ಶ್ರೀ ವೆಂಕಟೇಶ್ವರ ಭಕ್ತಿಪ್ರಚಾರ ಪೀಠ 2-1108/1/1 ಶಿವಂ ರಸ್ತೆ, ನ್ಯೂ ನಲ್ಲಕುಂಟ, ಹೈದರಾಬಾದ್ (ದೂರವಾಣಿ - 7550846)** ಇವರಿಗಾಗಲೀ **2002 ರ ಆಗಸ್ಟ್ 14 ರ ಒಳಗೆ ಕಳುಹಿಸಬೇಕು.** ತಮ್ಮ ಹೆಸರು, ಗೋತ್ರ, ಪೂರ್ತಿ ವಿಳಾಸ - ಫೋನ್ ನಂಬರು ಮೊದಲಾದವನ್ನೂ ಜೊತೆಗೇ ಕಳುಹಿಸಬೇಕು. ಅಂತಹವರಿಗೆ ಕಾರ್ಯಕ್ರಮದ ಆಹ್ವಾನ ಪತ್ರ, ಅನುಮತಿ ಪತ್ರ, ಮೊದಲಾದವನ್ನು ಕಳುಹಿಸಲಾಗುತ್ತದೆ. ನಗದು ವಂತಿಗೆಗಳನ್ನು ಸ್ವೀಕರಿಸಲಾಗುವುದಿಲ್ಲ. ಐದು ಸಾವಿರ ರೂಪಾಯಿಗಳಿಗಿಂತ ಹೆಚ್ಚಿನ ದಾನಗಳಿಗೆ ಪ್ರತ್ಯೇಕ ಸತ್ಕಾರವುಂಟು.

ಶ್ರೀ ವೆಂಕಟೇಶ್ವರ ಗೋಸೇವಾ ಟ್ರಸ್ಟ್‌ಗೆ ನೀಡುವ ದಾನಗಳೆಲ್ಲ ಸೆಕ್ಷನ್ 80 (G) ಪ್ರಕಾರ ಆದಾಯಕರ ಮುಕ್ತವಾಗುತ್ತವೆ.

ಕೀರ್ತಿಶೇಷರಾದ ತಮ್ಮ ಹಿರಿಯರ, ಕಿರಿಯರ ಹೆಸರಿನಲ್ಲಿಯೂ ದಾನಿಗಳು ವಂತಿಗೆಗಳನ್ನು ಸಲ್ಲಿಸಬಹುದಾಗಿದೆ.

ಗೋದಾನವನ್ನು ಸ್ವೀಕರಿಸುವವನು ಶ್ರೀನಿವಾಸ, ನೀಡುವವನು ಭಕ್ತ. ಇಂತಹ ದೊಡ್ಡ ಅದೃಷ್ಟ ಇಂದಿನ ಮಾನವರಿಗೆ ದೊರೆಯುವುದೇ ಒಂದು ವಿಶೇಷ.

ತಿರುಪತಿಗೆ ಬರುವ ಸ್ವಾಮಿಯ ಭಕ್ತರೆಲ್ಲ ಸ್ವಾಮಿಯ ಗೋಶಾಲೆಯನ್ನು ತಪ್ಪದೆ ಸಂದರ್ಶಿಸಿ, ಗೋಮಾತೆಯ ದರ್ಶನದಿಂದ ಸಂತೃಪ್ತಿ ಪಡೆಯಿರಿ - ಎಂದು ವಿನಂತಿ.

ಗಜವಾಹನದಲ್ಲಿ ಆಲಯದ ದಕ್ಷಿಣ ಮಾಡವೀಧಿಯ ಮೂಲಕ ವಿವಾಹ ವೇದಿಕೆಯನ್ನು ಸೇರಿದರೆ, ಶ್ರೀ ಭೂದೇವಿಯರು ವಧುಗಳಾಗಿ ಪಲ್ಲಕ್ಕಿಯಲ್ಲಿ ಆಗಮಿಸಿದರು. ಅಲಂಕೃತ ವಿವಾಹ ಮಂಟಪದಲ್ಲಿ ವೈದಿಕ ಸಂಪ್ರದಾಯಾನುಸಾರವಾಗಿ ವಿವಾಹದ ಕಾರ್ಯಕ್ರಮಗಳು ನಡೆದವು. ನಂತರ ಹರಿಕಥೆಯನ್ನು ಏರ್ಪಡಿಸಲಾಗಿದ್ದಿತು. ನಾರಾಯಣಗಿರಿಯ ಉದ್ಯಾನವನದಲ್ಲಿ ಈ ಕಾರ್ಯಕ್ರಮಗಳೆಲ್ಲ ನಡೆದ ಮೇಲೆ ಉತ್ತರಮಾಡವೀಧಿಯ ಮೂಲಕ ಸ್ವಾಮಿಯು ಉಭಯನಾಯಕೀ ಸಹಿತರಾಗಿ ಮೆರವಣಿಗೆಯಲ್ಲಿ ಆಲಯವನ್ನು ಬಂದು ಸೇರಿದರು.

ವೈಶಾಖ ಶುದ್ಧ ದಶಮಿಯ ದಿನ 21-5-2002 ರಂದು ಮಂಗಳವಾರ ಸ್ವಾಮಿ ಅಶ್ವವಾಹನದಲ್ಲಿ ಕಲ್ಯಾಣಮಂಟಪಕ್ಕೆ ಬಂದರು. ಬಂಗಾರದ ತಿರುಚ್ಚಿಯಲ್ಲಿ ಶ್ರೀ ಭೂದೇವಿಯರ ಬರೋಣವಾಯಿತು. ಸಾಂಗವಾಗಿ ವಿವಾಹ ಮಹೋತ್ಸವವು ನಡೆದಾದ ಮೇಲೆ ಸಂಗೀತ ಕಚೇರಿಯನ್ನು ಏರ್ಪಡಿಸಲಾಗಿದ್ದಿತು. ನಂತರ ಉತ್ತರ ಮಾಡವೀಧಿಯಲ್ಲಿ ಯಥಾ ಪ್ರಕಾರ ಮೆರವಣಿಗೆಯಲ್ಲಿ ದೇವದೇವಿಯರು ಆಲಯವನ್ನು ಸೇರಿದರು.

22-5-2002 ರಂದು ಬುಧವಾರ ಸ್ವಾಮಿಯು ಗರುಡವಾಹನನಾಗಿ ಕಲ್ಯಾಣ ಮಂಟಪಕ್ಕೆ ಆಗಮಿಸಿದರೆ ತಿರುಚ್ಚಿಯಲ್ಲಿ ಉಭಯ ನಾಚ್ಚಿಯಾರರ ಆಗಮನವಾಯಿತು. ವಿವಾಹ ಕ್ರಿಯೆಗಳು ಯಥಾವಿಧಿಯಾಗಿ ನಡೆದ ಮೇಲೆ ಸ್ವಾಮಿಯ ಓಲಗ ನಡೆಯಿತು.

ಶ್ರೀ ಪದ್ಮಾವತೀ ಪರಿಣಯದಲ್ಲಿ ದಿನಕ್ಕೆ 700 ಕಿಲೋಗ್ರಾಂ ತೂಕದ ವಿವಿಧ ರೀತಿಯ ಹೂವುಗಳನ್ನು ಬಳಸಲಾಯಿತು. ಮೂರುದಿನಗಳಲ್ಲಿ 2100 ಕಿಲೋ ಹೂವಿನಲಂಕಾರವನ್ನು ಉದ್ಯಾನವನ ವಿಭಾಗಾಧಿಕಾರಿ ಡಾ|| ಪಿ. ಟಿ. ಶ್ರೀನಿವಾಸ್ ಅವರ ಪರ್ಯವೇಕ್ಷಣೆಯಲ್ಲಿ ಅತ್ಯಂತ ಸುಂದರವಾಗಿ ಏರ್ಪಡಿಸಲಾಗಿದ್ದಿತು. ಸಾಂಸ್ಕೃತಿಕ ಕಾರ್ಯಕ್ರಮಗಳು ಯಶಸ್ವಿಯಾದವು.

## ತಿರುಮಲೆಯ ಪುರಾವಸ್ತು ಪ್ರದರ್ಶನಾಲಯದಲ್ಲಿ ಹೊಸ ಗ್ಯಾಲರಿಗಳು

ತಿರುಮಲೆಯಲ್ಲಿ ಎರಡನೆಯ ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನ ಎದುರಿಗಿರುವ ತಿ.ತಿ.ದೇ. ಪುರಾವಸ್ತು ಪ್ರದರ್ಶನಾಲಯದಲ್ಲಿ ಶ್ರೀನಿವಾಸನಿಗೆ ಸಂಬಂಧಿಸಿದ ಹಾಗೂ ವೈಷ್ಣವ ಧರ್ಮ ಇತಿಹಾಸಗಳ ಹಲವು ಹನ್ನೊಂದು ವಿಷಯಗಳಿಗೆ ಸಂಬಂಧಿಸಿದ ಪುರಾತತ್ವ ಪ್ರದರ್ಶನ ಶಾಲೆಯಲ್ಲಿ ಐದು ಹೊಸಗ್ಯಾಲರಿಗಳನ್ನು 17-5-2002 ರ ಶುಕ್ರವಾರ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರು ಉದ್ಘಾಟಿಸಿದರು.

ತಿರುಮಲೆಯ ಆಲಯಕ್ಕೆ ವರ್ಷಕ್ಕೆ ಒಂದೊ ಎರಡೋ ಬಾರಿ ಬಂದು ಸ್ವಾಮಿಯನ್ನು ಸಂದರ್ಶಿಸಿ ಹಿಂದಿರುಗುವವರೇ ಬಹುಮಂದಿ. ಅವರಿಗೆ ವರ್ಷಪೂರ್ತಿ ನಡೆಯುವ ಸ್ವಾಮಿಯ ಉತ್ಸವಗಳ, ಹಬ್ಬಗಳ ಒಂದು ಕಿರು ಚಿತ್ರ ಪರಿಚಯ ಮಾಡಿಕೊಡುವಂತೆ ಈ ಮ್ಯೂಸಿಯಮ್ಮಿನಲ್ಲಿ ಎಲ್ಲ ಉತ್ಸವಗಳ ಬಹುವರ್ಣ ಚಿತ್ರಗಳನ್ನು ದೊಡ್ಡ ದೊಡ್ಡ ಪಟಗಳನ್ನಾಗಿ ಆಕರ್ಷಕವಾಗಿ ಇಡಲಾಗಿದೆ. ಜೊತೆಗೆ ಇತಿಹಾಸದ ಆದಿಕಾಲದಿಂದ ಇಂದಿನ ವರೆಗಿನ ಹಲವು ಹನ್ನೊಂದು ಶಿಲಾ ವಿಗ್ರಹಗಳ ಆಕರ್ಷಕ ನಮೂನೆಗಳೂ ಉಂಟು. ಇನ್ನೊಂದು ಕಡೆ ಯುದ್ಧೋಪಕರಣಗಳಾದ ಖಡ್ಗ, ಢಾಲು, ಕಠಾರಿ, ಗುರಾಣಿ, ಕವಚ, ಶಿರಸ್ತ್ರಾಣ ಮೊದಲಾದ ವಿಜಯನಗರ ಕಾಲದ ಆಯುಧ ವೈವಿಧ್ಯವೂ ಇದೆ. ಹಲವು ಹತ್ತು ವಿಧದ ಕಂಚಿನ, ಪಂಚಲೋಹದ, ತಾಮ್ರದ, ವಿಗ್ರಹಗಳ ವೈವಿಧ್ಯಮಯ ಸಂಗ್ರಹವೂ ಉಂಟು. ಜೊತೆಗೇ ಇತಿಹಾಸದಲ್ಲಿ ನಡೆದು ಬಂದ ಹಲ ವಿಧದ ಸಂಗೀತ ವಾದ್ಯಗಳು - ವೀಣೆಗಳೇ ಹಲವು ಬಗೆ, ಮೃದಂಗ, ಢಕ್ಕೆ - ಮೊದಲಾದವುಗಳು ತಿರುಮಲೆಯ ವಿವಿಧ ಸ್ಥಳಗಳ ಆಲಯ ಮಂಟಪಗಳ ಪ್ರತಿಕೃತಿಗಳೂ ಉಂಟಾಗಿದ್ದು ತಿರುಮಲೆಯ ಒಟ್ಟು ದರ್ಶನಕ್ಕೆ ಅವಕಾಶವಾಗಿದೆ. ತಿರುಮಲೆಯ ಆಲಯದ ಒಟ್ಟು ಇತಿಹಾಸವನ್ನು ಪ್ರತಿಮಿಸುವ ಒಂದು ಕಾಲ ಕೋಶದಲ್ಲಿ ಹೊಕ್ಕು ಹೊರಬಂದ ಅನುಭವವುಂಟುಮಾಡುವ ಈ ಪುರಾವಸ್ತು ಸಂಗ್ರಹಾಲಯವನ್ನು ಸಂದರ್ಶಿಸುವುದು ಒಂದು ರೀತಿಯಲ್ಲಿ ಆನಂದವಾದರೆ, ಒಂದು ರೀತಿಯಲ್ಲಿ ಆತ್ಮಜ್ಞಾನವೂ ಆದೀತು ಎಂಬುದು ಒಟ್ಟು ಧ್ವನಿಯಾಗಿ, ಇಲ್ಲಿನ ದರ್ಶನ ಹಲಕಾಲ ನಿಲ್ಲುವಂತಹುದು ಎಂಬುದು ಹಲವರ ಹೇಳಿಕೆ.

## ನೂತನ ಪೌರಸಂಬಂಧಾಧಿಕಾರಿ ಡಾ || ಪಿ. ರಂಗರಾವ್

ತಿ. ತಿ. ದೇವಸ್ಥಾನಗಳ ಪೌರ ಸಂಬಂಧಾಧಿಕಾರಿ ಹುದ್ದೆಯನ್ನು 22-5-202 ರಂದು ಒಂಗೋಲು, ಪ್ರಕಾಶಂಗಳಲ್ಲಿ ವಾರ್ತಾಪ್ರಚಾರ ಇಲಾಖೆಯ ಡೆಪ್ಯೂಟಿ



ಡೈರೆಕ್ಟರ್ ಆಗಿ ಕೆಲಸ ನಿರ್ವಹಿಸಿರುವ ಡಾ|| ಪಿ. ರಂಗರಾವ್ ಅವರು ವಹಿಸಿ ಕೊಂಡಿದ್ದಾರೆ.

ಏಳು ವರ್ಷಗಳಿಂದ ತಿ. ತಿ. ದೇವಸ್ಥಾನಗಳ ಪೌರಸಂಬಂಧಾಧಿಕಾರಿಯಾಗಿ ಕೆಲಸ ಮಾಡಿದ ಶ್ರೀ ಎ. ಸುಭಾಷ್‌ಗೌಡ್ ಅವರು ತಮ್ಮ ಮಾತೃಸಂಸ್ಥೆಯಾದ ಆಂಧ್ರಪ್ರದೇಶ ಸರ್ಕಾರದ ಸಮಾಚಾರ ಇಲಾಖೆಗೆ ಹಿಂದಿರುಗಿದ ನಂತರ ತೆರವಾದ ಅವರ ಸ್ಥಾನಕ್ಕೆ ಆಂಧ್ರಪ್ರದೇಶ



# ಯಾತ್ರಿಕ ಭಕ್ತರಲ್ಲಿ.....

# ವಿನಂತಿ

## "ಡಯಲ್ - ಯುವರ್ ಇ.ಓ."

ತಿರುಮಲೆಯಲ್ಲಿ ತಮ್ಮ ಅನುಭವಕ್ಕೆ ಬಂದ ಕುಂದು ಕೊರತೆಗಳ ಬಗ್ಗೆ ಹೆಚ್ಚು - ಕಡಿಮೆಗಳ ಬಗ್ಗೆ - ಸಲಹೆ ಸೂಚನೆಗಳನ್ನು ಕಾರ್ಯನಿರ್ವಹಣಾಧಿಕಾರಿಯವರಿಗೆ ನೇರವಾಗಿ ನೀಡಬಹುದು. ಅದಕ್ಕಾಗಿ ಪ್ರತಿ ಶುಕ್ರವಾರ ಬೆಳಗ್ಗೆ 8-30 ರಿಂದ 9-00 ಗಂಟೆಯವರೆಗೆ ತಾವು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳೊಡನೆ ದೂರವಾಣಿಯಲ್ಲಿ ಮಾತನಾಡಬಹುದು.

***ದೂರವಾಣಿ ಸಂಖ್ಯೆ - 08574-77261.***

**ಯಾತ್ರಿಕರ ಸೌಕರ್ಯಗಳನ್ನು ಹೆಚ್ಚಿಸಲು**

**ತಮ್ಮ ಸುಲಭತರ ಯಾತ್ರೆ ಕೈಗೂಡಲು ದಯವಿಟ್ಟು ಮಾತನಾಡಿ.**



ಸರ್ಕಾರ ಡಾ|| ಪಿ. ರಂಗರಾವ್ ಅವರನ್ನು ಬದಲಿಯಾಗಿ ವರ್ಗಾಯಿಸಿದ್ದು ಶ್ರೀಯುತರು ತಮ್ಮ ಅಧಿಕಾರದ ಹೊಣೆಯನ್ನು ಸ್ವೀಕರಿಸುತ್ತ ಯಾತ್ರಿಕರ ಸೇವೆಯ ಮೂಲಕ ಶ್ರೀನಿವಾಸನ ಸೇವೆಯನ್ನು ಮಾಡುವುದಾಗಿ ನುಡಿದರು.

### ಪಾಕಾಲದಲ್ಲಿ ಆಯುರ್ವೇದ ವೈದ್ಯಶಿಬಿರ

ಚಿತ್ತೂರು ಜಿಲ್ಲೆಯ ಪಾಕಾಲಗ್ರಾಮದಲ್ಲಿ 19-5-2002 ರಂದು ಭಾನುವಾರ ತಿ.ತಿ.ದೇ. ಎಸ್.ವಿ. ಆಯುರ್ವೇದ ವೈದ್ಯಶಾಲೆಯ ವತಿಯಿಂದ ಆಯುರ್ವೇದ ವೈದ್ಯ ಶಿಬಿರವನ್ನು ನಿರ್ವಹಿಸಲಾಯಿತು.

ಶಿಬಿರದಲ್ಲಿ ಗ್ರಾಮಸ್ಥರಿಗೆ ದೈನದಿಂದನ ಜೀವನದಲ್ಲಿ ಸುಲಭವಾಗಿ ದೊರೆಯುವ ಮನೆಮದ್ದಿನ - ಗೃಹವೈದ್ಯದ ವಿಧಾನವನ್ನು ಬೋಧಿಸಲಾಯಿತು. ಜೊತೆಗೆ ಹಲವು ಹನ್ನೊಂದು ಮಂದಿಯ ದೀರ್ಘಕಾಲಿಕ ರೋಗಗಳಿಗೆ ಔಷಧೋಪಚಾರವನ್ನೂ ಪಥ್ಯವನ್ನೂ ಸೂಚಿಸಲಾಯಿತು.

ಅಸ್ತಮಾ, ಮಧುಮೇಹ ಮೊದಲಾದವು ಗಳಿಗೆ ಕ್ರಮ ತಪ್ಪದ ರೀತಿಯ ಪಥ್ಯೋಪಚಾರಗಳನ್ನೂ, ಪರಿಸೂಚನೆಗಳನ್ನೂ ನೀಡಲಾಯಿತು. ಎಸ್.ವಿ. ಆಯುರ್ವೇದ ವೈದ್ಯಶಾಲೆಯ ವೈದ್ಯರು ಭಾಗವಹಿಸಿದ್ದ ಈ ಶಿಬಿರದಲ್ಲಿ ಒಟ್ಟು 300 ಮಂದಿಗೆ ಚಿಕಿತ್ಸೆ ನೀಡಲಾಯಿತು.

### ತಿರುಮಲೆಯಲ್ಲಿ ಉಪರಾಷ್ಟ್ರಪತಿ

ಭಾರತದ ಉಪರಾಷ್ಟ್ರಪತಿ ಶ್ರೀ ಕೃಷ್ಣಕಾಂತ್ ಅವರು ಕುಟುಂಬಸಮೇತರಾಗಿ ಮೇ 19 ರಂದು ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ಭಾನುವಾರ ಮಧ್ಯಾಹ್ನ ತಿರುಮಲೆಯನ್ನು ಸೇರಿದ ಕೃಷ್ಣಕಾಂತ್ ಅವರನ್ನು ಪ್ರಭಾರಿ ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಮತ್ತಿತರರು ಸ್ವಾಗತಿಸಿದರು. ಸೋಮವಾರ ಬೆಳಗ್ಗೆ ದೇವರ ದರ್ಶನಮಾಡಿದ ಉಪರಾಷ್ಟ್ರಪತಿಗಳು ಕೂಡಲೆ ಹಿಂದಿರುಗಿದರು.



Edited and Published on behalf T. T. Devasthanams by Dr. N. S. Ramamuthy and Printed at T. T. D. Press
by I. Parvateeswara Rao, B.A., L.P.T., Manager, T.T.D. Press, Tirupati - 517 507.

# ತಿರುಮಲೆಯಲ್ಲಿ

## ಮಾಡಬೇಕಾದವು ಹಾಗೂ ಮಾಡಬಾರದವುಗಳು

**ಮಾಡಬೇಕಾದವು :**

★ ತಿರುಮಲೆಗೆ ಬರುವ ಮುನ್ನ ನಿಮ್ಮ ಇಷ್ಟ ಅಥವಾ ಕುಲದೈವವನ್ನು ಪೂಜಿಸಿರಿ.

★ ನಿಮ್ಮ ಪ್ರಯಾಣದ ಟಿಕೆಟ್‌ಗಳನ್ನು, ತಿರುಮಲೆಯಲ್ಲಿ ನಿಮ್ಮ ವಸತಿಯನ್ನು ಮೊದಲೇ ಕಾಯ್ದಿರಿಸಿ.

★ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಮೊದಲು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ, ಅಲ್ಲಿಯೇ ಇರುವ ಶ್ರೀ ವರಾಹಸ್ವಾಮಿಯನ್ನು ದರ್ಶಿಸಿರಿ.

★ ಆಲಯವನ್ನು ಪ್ರವೇಶಿಸುವ ಮೊದಲು ಸ್ನಾನಮಾಡಿ, ಶುಭ್ರವಾದ ಉಡುಪು ಧರಿಸಿರಿ. ಆಲಯದ ಒಳಗಡೆ ಸ್ವಾಮಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸಿ.

★ ಆಲಯದ ಒಳಗಡೆ ಗಂಭೀರ ಮೌನವನ್ನು ಪಾಲಿಸಿರಿ ಮತ್ತು ಮನಸ್ಸಿನಲ್ಲಿ **"ಓಂ ನಮೋ ವೇಂಕಟೇಶಾಯ"** ಎಂದು ಜಪಿಸಿರಿ.

★ ತಿರುಮಲೆಯಲ್ಲಿ ಪಾಪನಾಶಿನಿಯಲ್ಲೂ, ಆಕಾಶಗಂಗೆಯಲ್ಲೂ ಸ್ನಾನಮಾಡಿರಿ.

★ ತಿರುಮಲೆಗೆ ಬಂದಾಗ ಪ್ರಾಚೀನಪರಂಪರೆಯನ್ನೂ ಆಚಾರವನ್ನೂ ಗೌರವಿಸಿ.

★ ಸಹಯಾತ್ರಿಕರಲ್ಲಿನ ಧಾರ್ಮಿಕ ಭಾವನೆಯನ್ನು ಗೌರವಿಸಿ, ಪ್ರೋತ್ಸಾಹಿಸಿ.

★ ತಮ್ಮ ಕಾಣಿಕೆಗಳನ್ನು ಹುಂಡಿಯಲ್ಲಿ ಮಾತ್ರವೇ ಸಮರ್ಪಿಸಿ.

★ ತಿರುಮಲೆಯಲ್ಲಿ ನಿಮ್ಮ ಸೇವೆ ಹಾಗೂ ಆಲಯದ ಬಗ್ಗೆ ವಿವರಗಳಿಗಾಗಿ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ಕೇಳಿ ವಿವರಗಳನ್ನು ಪಡೆಯಿರಿ.

**ಮಾಡಬಾರದವು :**

★ ತಮ್ಮೊಂದಿಗೆ ಹೆಚ್ಚಿನ ಹಣ, ಆಭರಣಗಳನ್ನು ತರಬೇಡಿ.

★ ಮಾಂಸಾಹಾರವನ್ನು ಬಳಸಬೇಡಿರಿ. ಮಾದಕ ವಸ್ತು ಪೇಯಗಳನ್ನು ಬಳಸಬೇಡಿರಿ. ಧೂಮಪಾನ ಮಾಡಬೇಡಿರಿ.

★ ವಸತಿಗಾಗಿ, ಶೀಘ್ರದರ್ಶನಕ್ಕಾಗಿ ದಳ್ಳಾಳಿಗಳನ್ನು ಆಶ್ರಯಿಸಬೇಡಿರಿ.

★ ಆಲಯದ ಒಳಗೆ, ಹೊರಗೆ ಪಾದರಕ್ಷೆಗಳನ್ನು ಧರಿಸಿ ಓಡಾಡಬೇಡಿರಿ.

★ ದೇವರನ್ನು ಸೇವಿಸುವುದರ ಹೊರತು ಬೇರೆ ಯಾವ ಕಾರಣಕ್ಕೂ ತಿರುಮಲೆಗೆ ಬಾರದಿರಿ. ಸಂಪ್ರದಾಯದಂತೆ ಆಲಯ ಪ್ರವೇಶ ನಿಷೇಧವಿದ್ದಲ್ಲಿ ಆಲಯ ಪ್ರವೇಶ ಮಾಡದಿರಿ.

★ ದೇವರ ದರ್ಶನಕ್ಕಾಗಿ ನೂಕುನುಗ್ಗುಲು ಮಾಡದೆ ಸರತಿಯ ಸಾಲಿನಲ್ಲಿ ಸೇರಿರಿ.

★ ದೇವಾಲಯದಲ್ಲಿ ಉಗುಳುವುದೇ ಮುಂತಾದವುಗಳನ್ನು ಮಾಡದಿರಿ.

★ ಭಿಕ್ಷೆಯನ್ನು ಪ್ರೋತ್ಸಾಹಿಸದಿರಿ. ಹುಸಿ ಪ್ರಸಾದಗಳನ್ನು ಕೊಳ್ಳಬೇಡಿರಿ.

★ ತಿರುಮಲೆಯಲ್ಲಿ ಎಲ್ಲ ಹೂವುಗಳೂ ದೇವರಿಗೇ. ತಾವು ಹೂವು ಮುಡಿಯದಿರಿ.



# ಶ್ರೀ ವೆಂಕಟೇಶ್ವರ ಪ್ರಾಣದಾನ ಟ್ರಸ್ಟ್




# ಜೀವನದ ಸುಸ್ಥಿರ ದೇಣಿಗೆ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯು ದಯಾಸಾಗರನಾಗಿದ್ದಾನೆ. ಕಷ್ಟದಲ್ಲಿದ್ದವರಿಗೆ, ದುಃಖದಲ್ಲಿರುವವರಿಗೆ ಆತ ಪರಿಹಾರದ ಆಶ್ರಯಸ್ಥಾನ. ನೋವು ನಷ್ಟಗಳಲ್ಲಿ ತಂಪನ್ನೆರೆಯುವ ದಿವ್ಯವಾದ ಅನುಪಮವಾದ, ಕರುಣೆ ಆತನದು.

ಶ್ರೀನಿವಾಸನ ದಿವ್ಯ ಕರುಣೆಯಿಂದ ಪ್ರೇರಿತವಾಗಿ ತಿರುಮಲ ತಿರುಪತಿ ದೇವಸ್ಥಾನಗಳು ದೀನರ, ಅಗತ್ಯವಿದ್ದವರ ನೋವು ದುಃಖಗಳನ್ನು ಪರಿಹರಿಸಲು ಹಲವಾರು ಆಸ್ಪತ್ರೆಗಳನ್ನು, ಧಾರ್ಮಿಕ ಸಂಸ್ಥೆಗಳನ್ನು ಏರ್ಪಡಿಸಿದೆ. ತಿ. ತಿ. ದೇವಸ್ಥಾನಗಳ ಪಾಲಿಗೆ ದೀನರ ದುಃಖ ದುಮ್ಮಾನಗಳ ಪರಿಹಾರವೇ ದಿವ್ಯವಾದ ಗಮ್ಯ; ಜಾತಿ, ಮತ, ಪಂಥಗಳಿಗೆ ಅತೀತವಾದ ಜೀವಂತ ಪರಂಪರೆಯಾಗಿದೆ. ತೀವ್ರತರವಾದ ಅನಾರೋಗ್ಯದಿಂದ ನರಳುವಂತಹ ದೀನ ದುಃಖಿಗಳಿಗೆ ತಕ್ಕ ಪರಿಹಾರ ನೀಡುವ ಚಿಕಿತ್ಸಾವಿಧಾನದ ಯೋಜನೆಯನ್ನು ತಿ. ತಿ. ದೇವಸ್ಥಾನಗಳು ಈಗ ಕೈಗೆತ್ತಿಕೊಂಡಿದೆ.

**ಧ್ಯೇಯೋದ್ದೇಶಗಳು :** ಭಾರತದ ಆಂಧ್ರಪ್ರದೇಶದಲ್ಲಿನ ತೀರ್ಥಕ್ಷೇತ್ರವಾದ ತಿರುಪತಿಯಲ್ಲಿ ನೊಂದಾಯಿತಗೊಂಡಿರುವ ತಿ. ತಿ. ದೇವಸ್ಥಾನಗಳ ಆಶ್ರಯದ ಒಂದು ಧಾರ್ಮಿಕ ಸಂಸ್ಥೆ ''ಶ್ರೀ ವೆಂಕಟೇಶ್ವರ ಪ್ರಾಣದಾನ ಟ್ರಸ್ಟ್'' ಆಗಿದ್ದು ಬಡ ರೋಗಿಗಳಿಗೆ ನೆರವು ನೀಡುವ ಲಾಭರಹಿತ ಧಾರ್ಮಿಕ ಸಂಘಟನೆಯಾಗಿದೆ.

ಈ ಯೋಜನೆಯನ್ವಯ ಪ್ರಾಣಾಪಾಯವನ್ನುಂಟುಮಾಡುವ - ಹೃದಯ, ಮೂತ್ರಪಿಂಡ, ಮೆದುಳು ರೋಗಗಳೇ ಅಲ್ಲದೆ ಕ್ಯಾನ್ಸರ್ ಮೊದಲಾದ ತೀವ್ರತರ ಖಾಯಿಲೆಗಳಿಗೆ ಹೆಚ್ಚಿನ ಹಣ ಬಯಸುವ ಚಿಕಿತ್ಸಾ ವಿಧಾನಗಳನ್ನು ಭರಿಸಲು ಶಕ್ತಿಯಿಲ್ಲದ ಬಡವರಿಗೆ ನೆರವಿನ ಕೈನೀಡಿ ಸಹಾಯ ಮಾಡಲಾಗುವುದು. ತಿ. ತಿ. ದೇವಸ್ಥಾನಗಳ ಎಲ್ಲ ಆಸ್ಪತ್ರೆಗಳಲ್ಲಿಯೂ - ಸ್ವಿಮ್ಸ್, ಬರ್ಡ್, ರೂಯಾ, ಆಸ್ಪತ್ರೆಗಳು ಹಾಗೂ ಪ್ರಸೂತಿ ಆಸ್ಪತ್ರೆಗಳಲ್ಲಿ - ಬಡವರಿಗೆ ಜಾತಿ ಮತ ಪಂಥಗಳ ಭೇದವಿಲ್ಲದೆ ನೆರವಿನ ಹಸ್ತ ಚಾಚಿ ಚಿಕಿತ್ಸೆ ನೀಡಲಾಗುತ್ತದೆ.

ಮೂತ್ರಕೋಶ ವೈಫಲ್ಯ, ಹೆಮಾಫೀಲಿಯ, ತಲಸ್ಸೆಮಿಯ, ಕ್ಯಾನ್ಸರ್ ಮೊದಲಾದ ದೀರ್ಘಕಾಲಿಕ ರೋಗಗಳ ಬಗ್ಗೆ ಸಂಶೋಧನೆ, ಪರಿಹಾರೋಪಾಯ ಪ್ರಯತ್ನಗಳಿಗೂ ಈ ಯೋಜನೆಯನ್ವಯ ಅವಕಾಶವಿದೆ. ಬಡರೋಗಿಗಳಿಗೆ ಉಚಿತವಾಗಿ ರಕ್ತ, ಕೃತಕ ಅಂಗಾಂಗಗಳು, ಫಿಜಿಯೋಥೆರಪಿ, ಮೊದಲಾದ ಪ್ರಾಥಮಿಕ ಆರೋಗ್ಯ ಪರಿಕರಗಳು, ಪರಿಪೂರಕಗಳು ದೊರೆಯುವಂತೆ ಮಾಡುವುದೇ ತಿ. ತಿ. ದೇವಸ್ಥಾನಗಳು ರೂಪಿಸಿರುವ ವಿಶೇಷವಾದ ''ಶ್ರೀ ವೆಂಕಟೇಶ್ವರ ಪ್ರಾಣದಾನ ಯೋಜನೆಯ'' ಗುರಿ.

**ತಿ. ತಿ. ದೇ. ಸಹಯೋಗ :** ಈ ದತ್ತಿನಿಧಿಯ ಸ್ವಯಂ ಪೂರ್ಣವಾಗುವಂತೆ ಮಾಡಲು ತಿ. ತಿ. ದೇವಸ್ಥಾನಗಳು ಯೋಜನೆಗೆ ಬರುವ ದಾನಗಳಿಗೆ ತಕ್ಕ ಮೂಲಬಂಡವಾಳವನ್ನು ಬಿಡುಗಡೆ ಮಾಡಲು ಯೋಜಿಸಿದೆ.

**ದಾನಿಗಳಿಗೆ ದೊರೆಯುವ ಸೌಲಭ್ಯಗಳು :** ಈ ಯೋಜನೆಗೆ ಐದು ಲಕ್ಷ ರೂಪಾಯಿ ಹಾಗೂ ಅಧಿಕ ಮೊತ್ತದ ಧನವನ್ನು ನೀಡುವ ದಾನಿಗಳಿಗೆ ಕೆಳಕಂಡ ರೀತಿಯ ಸೌಲಭ್ಯಗಳನ್ನು ಒದಗಿಸಲಾಗುವುದು.

1. ದಾನಿಯೂ ಸೇರಿದಂತೆ ಐವರಿಗೆ ವರ್ಷಕ್ಕೆ ಒಮ್ಮೆ ಮೂರು ದಿನಗಳು ವಿ.ಐ.ಪಿ. ದರ್ಶನವನ್ನು ವೈಕುಂಠದ ಸೆಲ್ಲಾರ್ ಮೂಲಕ ಅನುಮತಿಸಲಾಗುವುದು.
2. ದಾನಿಯ ಮೊದಲನೆಯ ದರ್ಶನ ಕಾಲದಲ್ಲಿ ಸ್ವಾಮಿ ಹಾಗೂ ಅಮ್ಮನವರ ಚಿನ್ನದ ಮುಲಾಮಿನ ರಜತ ಚಿತ್ರಗಳಿರುವ ಜ್ಞಾಪಿಕೆಯನ್ನು ನೀಡಲಾಗುವುದು.
3. ದಾನಿಗೆ ವರ್ಷಕ್ಕೆ ಒಮ್ಮೆ ಒಂದು ಉತ್ತರೀಯವನ್ನು ಬಹೂಕರಿಸಲಾಗುವುದು.
4. ತಿರುಮಲೆಯ ಸಾಮಾನ್ಯ ಅತಿಥಿಗೃಹಗಳಲ್ಲಿ ವರ್ಷಕ್ಕೆ ಒಮ್ಮೆ ಒಟ್ಟಿಗೆ ಮೂರುದಿನ ಉಚಿತವಾಗಿ (ದೊರಕುವಂತಿದ್ದ ಪಕ್ಷದಲ್ಲಿ ಶುಲ್ಕ ಸಹಿತವಾದ ವಿ.ಐ.ಪಿ. ವಸತಿ) ವಸತಿಯನ್ನು ಒದಗಿಸಲಾಗುವುದು.
5. ವೈಯಕ್ತಿಕ ದಾನಿಗಳ ಜೀವಮಾನ ಪರ್ಯಂತವೂ, ಸಂಸ್ಥೆ, ಕಂಪನಿ, ಅವಿಭಕ್ತ ದಾನಿಗಳಿಗೆ 20 ವರ್ಷವೂ ಈ ಸೌಲಭ್ಯ ಉಂಟು.

ಆದಾಯತೆರಿಗೆ ವಿನಾಯತಿ : 80 (ಜಿ) ಕಲಮಿನನ್ವಯ ದಾನಿಯು ಆದಾಯ ತೆರಿಗೆ ವಿನಾಯಿತಿ ಪಡೆಯಬಹುದು.

**ವಿನಂತಿ :** ಶ್ರೀ ವೆಂಕಟೇಶ್ವರ ಪ್ರಾಣದಾನ ಯೋಜನೆಗೆ ಉದಾರವಾಗಿ ವಂತಿಗೆಗಳನ್ನು ನೀಡಬೇಕೆಂದೂ ಆ ಮೂಲಕವಾಗಿ ಸಾವಿರಾರು ಹೃದಯ, ಮೂತ್ರಕೋಶ, ಮೆದುಳು ರೋಗಿಗಳಿಗೆ ನೆರವು ನೀಡಬೇಕೆಂದೂ ವಿನಂತಿಸಿಕೊಳ್ಳಲಾಗಿದೆ. ತಾವು ನೀಡುವ ಪ್ರತಿ ಕಾಣಿಕೆಯೂ ಪವಿತ್ರವಾಗಿ ಬಡವರಿಗೆ ಆಧಾರವಾಗಿ ಅವರು ಜೀವನವನ್ನು ಪರಿಪೂರ್ಣ ಆರೋಗ್ಯದಿಂದ ಕಳೆಯಲು ಅನುಕೂಲ ಮಾಡಿಕೊಡುತ್ತದೆ.

**ಮಾನವ ಸಮಾಜಕ್ಕೆ ಸೇವೆ ಸಲ್ಲಿಸುವುದರಿಂದ ದೇವರ ಸೇವೆಯನ್ನು ಸಲ್ಲಿಸಿರಿ**

ತಮ್ಮ ಎಲ್ಲ ದಾನಗಳೂ ಕಾರ್ಯನಿರ್ವಹಣಾಧಿಕಾರಿ ಶ್ರೀವೆಂಕಟೇಶ್ವರ ಪ್ರಾಣದಾನ ಟ್ರಸ್ಟ್ ತಿ.ತಿ.ದೇ. ತಿರುಪತಿ - ಇವರ ಹೆಸರಿನಲ್ಲಿ ಪಡೆದ ಡಿ.ಡಿ.ಯ ರೂಪದಲ್ಲಿದ್ದು, ಅವುಗಳನ್ನು ಕಳುಹಿಸಬೇಕಾದ ವಿಳಾಸ - **ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ಆಡಳಿತ ಭವನ. ಕೆ.ಟಿ. ರಸ್ತೆ, ತಿರುಪತಿ – 517 507.**

**ದಾನಿಗಳಾಗಿರಿ – ದುಃಖಿಗಳಿಗೆ ಜೀವದಾನ ಮಾಡಿರಿ.**







ದಾರಿಯ ತೋರೋ ಗೋಪಾಲ
ವಾರಿಜ ನಾಭನೆ ವೈಕುಂಠ ಲೋಲ ॥ ಪ ॥

ಸಿಕ್ಕಿದೆ ಭವದ ಕಾಡಿನೊಳಗೆ ಲೆಕ್ಕ ವಿಲ್ಲದ ಜಂತುಗಳಿಗೆ
ದಿಕ್ಕೊಬ್ಬರಿಲ್ಲವೊ ಎನಗೆ ಕಕ್ಕಸವಕಳೆ ನಿನ್ನಯ ಪಾದಗಳಿಗೆ ॥ 1 ॥

ಗಜೇಂದ್ರ ರಕ್ಷಕನು ನೀನೆಂದು ಅಜರುದ್ರಾದಿಗಳೆಂದು
ನಿಜವಾಗಿ ಪೇಳಿದರೆಂದು ಸುಜನರೊಡೆಯನೆ ಕೇಳಿದೆ ನಾ ಇಂದು ॥ 2 ॥

ವರದ ಶ್ರೀ ಹಯವದನನೆ ಬಾರೈ ಕರೆದೆನ್ನ ದಾರಿಯ ತೋರೈ
ಪರಮ ಭಕುತರಿಗಿನ್ನಾರೈ ಪರಮಪುರುಷ ಗತಿಯಾರೈ ॥ 3 ॥

-ಶ್ರೀ ವಾದಿರಾಜರು.





ಸಂದರ್ಶಿಸಿ. ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲ

# ವಾರ್ಷಿಕ ಪವಿತ್ರೋತ್ಸವಗಳು

**17-8-2002 ರಿಂದ 20-8-2002 ವರೆಗೆ**



| | | |
|---|---|---|
| **17-8-2002** | ಶನಿವಾರ | ಅಂಕುರಾರ್ಪಣೆ |
| **18-8-2002** | ಭಾನುವಾರ | ಪವಿತ್ರ ಪ್ರತಿಷ್ಠೆ |
| **19-8-2002** | ಸೋಮವಾರ | ಪವಿತ್ರ ಸಮರ್ಪಣೆ |
| **20-8-2002** | ಮಂಗಳವಾರ | ಪೂರ್ಣಾಹುತಿ |

ಸೂಚನೆ : ಪವಿತ್ರೋತ್ಸವದಲ್ಲಿ ಆರ್ಜಿತ ಶುಲ್ಕವನ್ನು ಸಲ್ಲಿಸಿ ಭಕ್ತರು ಭಾಗವಹಿಸಬಹುದು. ನಿಮ್ಮ ಬಳಿಯ ತಿ.ತಿ.ದೇ. ವಿಚಾರಣಾ ಕೇಂದ್ರದಲ್ಲಿ ವಿವರಗಳಿಗಾಗಿ ವಿಚಾರಿಸಿರಿ.

ನೀವೂ ಬನ್ನಿ. ನಿಮ್ಮವರನ್ನೂ ಕರೆತನ್ನಿ.

# ಸಪ್ತಗಿರಿ

ಸಂಪುಟ - 33 ಜುಲೈ 2002 ಸಂಚಿಕೆ - 2

## ಜ್ಯೇಷ್ಠ - ಆಷಾಢ ಸಂಚಿಕೆ

## ವಿಷಯಸೂಚಿ



ಮುಖಚಿತ್ರ : ಶ್ರೀ ಮಲಿಯಪ್ಪಸ್ವಾಮಿ .

ಹಿಂಬದಿಯಲ್ಲಿ : ಶ್ರೀ ವಿಖನಸಾಚಾರ್ಯ.


ಗೌರವ ಸಂಪಾದಕರು :
**ಡಾ|| ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
**ಡಾ|| ಎನ್.ಎಸ್. ರಾಮಮೂರ್ತಿ,**

ಮುದ್ರಣ :
**ಐ. ಪಾರ್ವತೀಶ್ವರ ರಾವ್,**
ಬಿ.ಎ., ಎಲ್.ಪಿ..ಟಿ.,
ಮ್ಯಾನೇಜರ್,
ತಿ.ತಿ.ದೇ. ಮುದ್ರಣಾಲಯ, ತಿರುಪತಿ.

ಉಪಸಂಪಾದಕ :
**ಬಿ. ಎನ್. ಶ್ರೀನಿವಾಸನ್,** ಎಂ.ಎ.

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ-
*ಸಂಪಾದಕರು*
*ತಿರುಮಲೆ ತಿರುಪತಿ ದೇವಸ್ಥಾನಗಳು,*
*ತಿರುಪತಿ.*

**ಬಿಡಿ ಪ್ರತಿ ರೂ. 5/-**
**ವಾರ್ಷಿಕ ಚಂದಾ ರೂ. 60/-**
**ಆಜೀವ ಚಂದಾ ರೂ. 500/-**


*ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ||*

**ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ । ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ ॥**

# ನಿಮ್ಮೊಡನೆ ಎರಡು ಮಾತು......



ಸಕಲ ಚರಾಚರ ಸೃಷ್ಟಿಸ್ಥಿತಿ ಲಯ ಕಾರಕನಾದ ಶ್ರೀ ಮಹಾವಿಷ್ಣುವು ಮಾನವರನ್ನು ಉದ್ಧರಿಸಬಯಸಿ ವೈಕುಂಠವನ್ನು ಈ ಭೂಮಿಯ ಮೇಲೆ ಸ್ಥಿರಗೊಳಿಸಿದ. ಅಷ್ಟೇ ಅಲ್ಲ ತಾನೇ ಸ್ವಯಂ ಬಂದು ಇಲ್ಲಿಯೇ ನೆಲೆಸಿದ. ಅಂತಹ ಕಲಿಯುಗ ವೈಕುಂಠವೇ ತಿರುಮಲೆ. ಎಲ್ಲರಿಗೆ ಸದ್ಗತಿ ದೊರಕಿಸಲು ಆ ಮಹಾವಿಷ್ಣುವೇ ಶ್ರೀ ವೆಂಕಟೇಶ್ವರಸ್ವಾಮಿಯಾಗಿ ತಿರುಮಲೆಯಲ್ಲಿ ನೆಲೆಸಿದನು. ಎಂತಲೇ ಅನ್ನಮಾಚಾರ್ಯರು ಹೇಳಿದರು ''ವೇದಗಳೆ ಶಿಲೆಗಳಾಗಿ ನೆಲೆನಿಂತ ಬೆಟ್ಟವಿದು''.

ಇಂತಹ ಶ್ರೀನಿವಾಸನ ಆವಾಸವಾದ ತಿರುಮಲೆ ಅತ್ಯಂತ ಪವಿತ್ರವಾದದ್ದು. ದರ್ಶಿಸಿದ ಮಾತ್ರಕ್ಕೆ ಪಾಪಗಳೆಲ್ಲ ದಹಿಸಿ ಹೋಗುತ್ತದೆ. ಎಂತಲೇ ಭಗವದ್ರಾಮಾನುಜರು ತಿರುಮಲೆಯನ್ನು ಪಾದಗಳಿಂದ ಮುಟ್ಟಬಾರದೆಂದು ಮೊಣಕಾಲಿನಲ್ಲಿಯೇ ತೆವಳುತ್ತ ಹತ್ತಿದರಂತೆ.

ನಮ್ಮ ಭಾಗ್ಯದ ಭಾಗವಾಗಿ ನಮ್ಮ ಸಮೀಪದಲ್ಲಿ, ನಮ್ಮ ಮಧ್ಯೆ ನೆಲೆಯಾಗಿರುವ ತಿರುಮಲೆಯನ್ನು ಪವಿತ್ರವಾಗಿ ಪರಿಶುಭ್ರವಾಗಿ ಇಡಬೇಕು, ಇಟ್ಟುಕೊಳ್ಳಬೇಕು. ಎಲ್ಲಿ ಪರಿಶುಭ್ರತೆಯಿದೆಯೋ ಅಲ್ಲಿ ಪರಮಾತ್ಮನಿರುವನು ಎನ್ನುತ್ತದೆ ಪರಂಪರೆಯ ಪ್ರಜ್ಞೆ.

ನಿತ್ಯವೂ ಸಾವಿರಾರು ಮಂದಿ ಸ್ವಾಮಿಯನ್ನು ದರ್ಶಿಸಲು ತಿರುಮಲೆಗೆ ಬರುತ್ತಾರೆ. ಎಲ್ಲರಿಗೂ ವಸತಿ ದರ್ಶನಗಳನ್ನು ಕಲ್ಪಿಸಲು ದೇವಸ್ಥಾನದ ಆಡಳಿತವು ಶಕ್ತಿ ವಂಚನೆಯಿಲ್ಲದೆ ಕೃಷಿ ಮಾಡುತ್ತಿದೆ. ಆಧುನಿಕ ಸಾಂಕೇತಿಕ ತಂತ್ರಜ್ಞಾನದ ನೆರವಿನಿಂದ ಮೊದಲೇ ವಸತಿ ಸೇವೆಗಳನ್ನು ರಿಸರ್ವ್ ಮಾಡಿಸಿಕೊಳ್ಳುವ ಸೌಲಭ್ಯವನ್ನು ಪ್ರವೇಶಗೊಳಿಸಲಾಗಿದೆ. ಈ ಸೌಲಭ್ಯಗಳನ್ನು ಬಳಸಿಕೊಳ್ಳುವ ಭಕ್ತರಿಗೆ ತಿರುಮಲೆಯ ಪ್ರಯಾಣ, ಸೇವೆ, ದರ್ಶನ ಅತ್ಯಂತ ಸುಲಭವಾಗುತ್ತದೆ. ಸ್ವಾಮಿ ದರ್ಶನದ ಕಂಕಣಗಳನ್ನು ಧರಿಸುವುದರಿಂದ ಎಲ್ಲರಿಗೂ ಸ್ವಾಮಿದರ್ಶನದ ಸಮಯ ಮೊದಲಿಗೇ ತಿಳಿಯುತ್ತದೆ. ಇದರಿಂದಾಗಿ ಭಕ್ತರು ಮಿಕ್ಕ ಸಮಯವನ್ನು ಸದ್ವಿನಿಯೋಗ ಪಡಿಸಿಕೊಳ್ಳಬಹುದು. ತಿರುಪತಿಯ ಸಮೀಪದ ತಿರುಚಾನೂರು, ಶ್ರೀನಿವಾಸ ಮಂಗಾಪುರ - ಮೊದಲಾದ ಸ್ಥಳಗಳ ಆಲಯಗಳ ಸಂದರ್ಶನ ಮಾಡಿಬರಬಹುದು. ಅವುಗಳಿಗೂ ದೇವಸ್ಥಾನದ ಪ್ರತ್ಯೇಕ ಬಸ್‌ಗಳು ಇವೆ. ಆಯಾ ಆಲಯಗಳನ್ನು ದರ್ಶಿಸಿ ತಿರುಮಲೆಯನ್ನು ಸ್ವಾಮಿ ದರ್ಶನ ಸಮಯಕ್ಕೆ ಸ್ವಲ್ಪ ಮೊದಲು ಸೇರಿಕೊಂಡರೂ ಸಾಕು. ಸ್ವಾಮಿಯನ್ನು ಸಂದರ್ಶಿಸಿ ಹರಕೆಗಳನ್ನು ಹಾಯಾಗಿ ಸಲ್ಲಿಸಬಹುದು.

ತಿರುಮಲೆಯಲ್ಲಿರುವಷ್ಟು ಹೊತ್ತು ಭಕ್ತರು ಪ್ರಶಾಂತವಾಗಿಯೂ, ಪವಿತ್ರವಾಗಿಯೂ ಇರಲು ಪ್ರಯತ್ನಿಸಬೇಕು. ದೈನಂದಿನ ಯಾಂತ್ರಿಕ ಬದುಕಿನಿಂದ ಬಿಡುಗಡೆ ಬಯಸಿ ತಿರುಮಲೆಗೆ ಬರುವ ಭಕ್ತರು ಇಲ್ಲಿರುವಷ್ಟು ಹೊತ್ತೂ ಪ್ರಶಾಂತಿಯಿಂದಿರಲು ಪ್ರಯತ್ನಿಸಬೇಕು. ತಿರುಮಲೆಯಲ್ಲಿ ಮತ್ತು ಪದಾರ್ಥಗಳೂ, ಮಾದಕ ದ್ರವ್ಯಗಳೂ ಮಾಂಸ ಹೊಗೆಸೊಪ್ಪುಗಳೂ ನಿಷಿದ್ಧ. ನಿಷಿದ್ಧ ವಸ್ತುವೆಂದೇ ಅಲ್ಲಿ ಭಕ್ತರು ತಾವಾಗಿ ಸ್ವಚ್ಛಂದವಾಗಿ ಈ ವಸ್ತುಗಳನ್ನು ವಿರೋಧಿಸಬೇಕು. ಪವಿತ್ರವಿಲ್ಲದ ಪರಿಶುಭ್ರವಿಲ್ಲದ ಮನದಿಂದ ಪರಮಾತ್ಮನನ್ನು ಪ್ರಾರ್ಥಿಸಿದರೂ ಫಲವಿರದು.

ತಿರುಮಲೆ - ತಿರುಪತಿಗಳ ಪರಿಶುಭ್ರತೆಯೆಂಬುದು ಎಲ್ಲರ ಹೊಣೆಗಾರಿಕೆ. ದೇವಸ್ಥಾನಗಳೊಂದಿಗೆ ಸಹಕರಿಸಿ ಇದನ್ನು ಒಂದು ಯಜ್ಞದೋಪಾದಿಯಲ್ಲಿ ಸರ್ವರೂ ಆಚರಣೆಗೆ ತರಬೇಕು. ತಿರುಮಲೆಯ ಉದ್ಯಾನವನಗಳ ಎಲ್ಲ ಹೂವುಗಳೂ ಸ್ವಾಮಿಗೆ ಸೇರಿದವು. ಈ ಉದ್ಯಾನವನಗಳಲ್ಲಿ ಹೂವು ಕೀಳುವುದಾಗಲೀ, ಕಸ ಕಡ್ಡಿ ಎಸೆಯುವುದಾಗಲೀ ಮಾಡಬಾರದು. ಕಲಿಯುಗ ವೈಕುಂಠವೆಂದು ಕರೆದು ಕಲ್ಮಶವಿದ್ದರೆ ಹೇಗೆ? ಅದಕ್ಕೆಂದೇ ಪರಿಸರವನ್ನಷ್ಟೇ ಅಲ್ಲ ಮನವನ್ನು ಪರಿಶುಭ್ರವಾಗಿರಿಸಿಕೊಳ್ಳಬೇಕು.

ವೇದಗಳೇ ಶಿಲೆಗಳಾಗಿರುವ ವೆಂಕಟಾದ್ರಿಯಲ್ಲಿರುವಷ್ಟು ಹೊತ್ತೂ ಶ್ರೀನಿವಾಸ ನಾಮಗಾನದ ಧ್ಯಾನದ ಹೊರತು ಮತ್ತೊಂದು ಆಸಕ್ತಿ ಪ್ರವೃತ್ತಿ ಇರಬಾರದು. ಅಂತಹವರೇ ಸ್ವಾಮಿಯ ಕೃಪೆಗೆ ಪಾತ್ರರಾಗುತ್ತಾರೆ.

ತಿರುಮಲೆಯನ್ನು ಪರಿಶುಭ್ರವಾಗಿ ಇಟ್ಟುಕೊಳ್ಳಲು ಪ್ರತಿಯೊಬ್ಬರೂ ಪ್ರಯತ್ನಪೂರ್ವಕವಾಗಿ ಸಹಕರಿಸುವರೆಂದು ಭಾವಿಸುತ್ತ -

**ಡಾ|| ಪಿ. ಕೃಷ್ಣಯ್ಯ**, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.
ತಿ.ತಿ.ದೇ.

# ವೇದಗಳಲ್ಲಿ ಭಗವತ್ತತ್ವದರ್ಶನ

- ಸಂತ ಹರಿಹರಾನಂದ ಸರಸ್ವತೀ

ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನೂ ಸಕಲ ಜಗತ್ಪಾಲಕನೂ, ಸೃಷ್ಟಿ - ಸ್ಥಿತಿ - ಸಂಹಾರಕಾರಕನೂ, ದೇವಕೀ ವಸುದೇವ ಬಾಲಕನೂ, ಶ್ರೀಗೋಪಾಲ - ಬ್ರಹ್ಮ - ವಾಚಕ ಶ್ರೀಕೃಷ್ಣಚಂದ್ರ ಭಗವಾನನು ಪರಿಪೂರ್ಣ ಪುರುಷೋತ್ತಮನೆಂದು ಪರಮಜ್ಞಾನಿಗಳು ಹೇಳಿರುವರು. ಅವನು ಷೋಡಶ ಕಲಾಯುಕ್ತನು ಅಷ್ಟಸಿದ್ಧಿ, ಷಡೈಶ್ವರ್ಯ ಸಂಪನ್ನನು.

ವದಂತಿ ತತ್ತ್ವವಿದಸ್ತತ್ವಂ<br>
ಯತ್ ಜ್ಞಾನ ಮದ್ವಯಮ್<br>
ಬ್ರಹ್ಮೇತಿ ಪರಮಾತ್ಮೇತಿ<br>
ಭಗವಾನಿತಿ ಶಬ್ದ್ಯತೇ<br>
(ಶ್ರೀಮದ್ರಾಮಾಯಣ)

ತತ್ವಜ್ಞಾನಿಗಳಾದ ಮಹಾಪುರುಷರು, ಅವನನ್ನು ಎಂದರೆ - ಆ ಭಗವಂತನನ್ನು, ಪರಮತತ್ವವಾದ ವೇದಾಂತ ರೀತಿಯಿಂದ 'ಬ್ರಹ್ಮ' ಎಂದೂ ಸ್ಮೃತಿಗಳಲ್ಲಿ 'ಪರಮಾತ್ಮ' ಎಂದೂ, ಪುರಾಣಗಳಿಂದ ಭಗವಾನ್ ಎಂದೂ ಅಭಿಹಿತವಾಗಿರುವುದನ್ನು ತಿಳಿಸಿದ್ದಾರೆ. ಅವನ ನಿಃಶ್ವಾಸದಿಂದ ವೇದಗಳ ರಚನೆಯಾಗಿದೆ. ಇದು ಸಾಧಾರಣ ಪುರುಷದ್ವಾರಾ ಕಲ್ಪಿತವಾದುದಲ್ಲ. ಇದು ಅಪೌರುಷೇಯವು - ಇವುಗಳ ಮೂಲಕ ''ಪರಮತತ್ವದ ಜ್ಞಾನ''ವಾಗುತ್ತದೆ. ವೇದ ಜ್ಞಾನಾರ್ಥಕ - ''ವಿದ್'' - ಧಾತುವಿನಿಂದ ನಿಷ್ಪನ್ನವಾಗಿದೆ. ಎಲ್ಲ ವೇದಗಳ ತಾತ್ಪರ್ಯವೂ ಪರಬ್ರಹ್ಮವೇ! ಇದು ಶ್ರೀಮದ್ಭಗವದ್ಗೀತೆಯ ವಾಕ್ಯದಿಂದ ಸಂಪುಷ್ಟಿಗೊಂಡಿದೆ.

''ವೇದೈಶ್ಚ ಸರ್ವೈರಹಮೇವ ವೇದ್ಯಃ'' ವೇದವು ಭಗವಂತನ ಆಜ್ಞಾರೂಪವಾಗಿದೆ - ''ವೇದಾ ಬ್ರಹ್ಮಾತ್ಮವಿಷಯಾಃ'' (ಇದು) ಭಾಗವತೀಯ ಕೃತಿಯಲ್ಲಿ - ''ಜೀವ - ಬ್ರಹ್ಮ''ದ ಸ್ವರೂಪವು ನಿರೂಪಿತವಾಗಿದೆ. ವೇದವು ಆದಿ - ಮಧ್ಯ - ಅಂತ್ಯದಲ್ಲಿ ಕೂಡ - ಶ್ರೀಹರಿಯ ಯಶೋಗಾಥೆಯನ್ನೇ ಪ್ರಸ್ತುತ ಪಡಿಸುತ್ತದೆ. ನಾನಾ ನಾಮರೂಪಗಳಲ್ಲಿ ಅವನ ಮಹತ್ವವನ್ನು ಸ್ತುತಿಸಿದೆ ವೇದ.

ಇಂದ್ರಂ ಮಿತ್ರಂ ವರುಣಂ<br>
ಅಗ್ನಿಮಾಹುರಥೋ<br>
ದಿವ್ಯಃ ಸ ಸುಪರ್ಣೋಗರುತ್ಮಾನ್<br>
ಏಕಂ ಸತ್ ವಿಪ್ರಾ ಬಹುಧಾವದಂತ್ಯಗ್ನಿಂ<br>
ಯಮಂ ಮಾತರಿಶ್ವಾ ನಮಾಹುಃ

ಭಗವಾನ್ ಶ್ರೀಕೃಷ್ಣನು ಸರ್ವದೇವ ಮಯನಾಗಿದ್ದಾನೆ. ಅವನ ಅಂಗ - ಪ್ರತ್ಯಂಗಗಳಲ್ಲಿಯೂ ಎಲ್ಲ ದೇವತೆಗಳೂ ವಾಸಿಸುತ್ತಿದ್ದಾರೆ. ಅವನು ಆ ಎಲ್ಲರ ಅಂತರ್ಯಾಮಿಯೂ ಹೌದು. ಅವನನ್ನುಳಿದು ಚರಾಚರ ಜಗತ್ತು ಇರಲು ಸಾಧ್ಯವೇ ಇಲ್ಲ. ಹೀಗೆ ಸರ್ವವ್ಯಾಪ್ತನಾದ ಭಗವಂತನು - ವಿಷ್ಣು - ಬ್ರಹ್ಮ - ನಾರಾಯಣ - ವಾಸುದೇವಾದಿ ನಾಮಗಳಿಂದ - ವ್ಯವಹರಿಸಲ್ಪಡುತ್ತಾನೆ. ಅವನು ಎಲ್ಲಕ್ಕೂ ಸಾಕ್ಷಿಮಾತ್ರನಾಗಿದ್ದಾನೆ.

ಅಂತಃ ಬಹಿಃ ಚ ತತ್ ಸರ್ವಂ<br>
ವ್ಯಾಪ್ಯ ನಾರಾಯಣ ಸ್ಥಿತಃ

ಅವನು ಈ ಬ್ರಹ್ಮಾಂಡದ ಒಳಹೊರಗೆಲ್ಲ ವ್ಯಾಪಿಸಿದ್ದಾನೆ - ಅವನ ದರ್ಶನವಾಗಬೇಕಾದರೆ ಅವನಿಚ್ಛೆಯೂ ಬೇಕು. ಅವನ ದರ್ಶನಮಾಡುವ ಹಂಬಲವೂ ಆತ್ಮವಿಶ್ವಾಸವೂ ಸಾಧಕನಿಗೆ ಇರಬೇಕು. ದಿವ್ಯ ವಸ್ತುವನ್ನು ದಿವ್ಯದೃಷ್ಟಿಯಿಂದಲೇ ನೋಡಬೇಕು.

ಮಧ್ಯಮ ಪಾಂಡವನಾದ ಪಾರ್ಥನಿಗೆ, ಭಗವಂತನಾದ ವಾಸುದೇವ ಶ್ರೀಕೃಷ್ಣನು ''ದಿವ್ಯಂ ದದಾಮಿ ತೇ ಚಕ್ಷುಃ'' ಎಂದು, ದಿವ್ಯ ದೃಷ್ಟಿಯನ್ನು ಅನುಗ್ರಹಿಸಿ, ತನ್ನ ವಿಶಾಲ ವಿರಾಟ್ ರೂಪವನ್ನು ತೋರಿಸಿದ.

ಸಹಸ್ರ ಶೀರ್ಷಾಪುರುಷಃ<br>
ಸಹಸ್ರಾಕ್ಷಃ ಸಹಸ್ರ ಪಾತ್<br>
ಸಭೂಮಿಂ ವಿಶ್ವತೋವೃತ್ವಾ<br>
ಅತ್ಯತಿಷ್ಠದ್ದಶಾಂಗುಲಮ್

ಎಂದು ಭಗವಂತನ ಸರ್ವವ್ಯಾಪಕತ್ವವನ್ನೂ, ಅವನ ದಿವ್ಯ (ಶರೀರವನ್ನೂ) ಮಂಗಳವಿಗ್ರಹವನ್ನೂ ಋಗ್ವೇದವು ಈ ರೀತಿ ವಿವರಿಸಿದೆ. ಅವನು - ಆ ಕೃಪಾಸಿಂಧುವು ಎಲ್ಲೆಲ್ಲಿಯೂ ಇದ್ದಾನೆ. ಎಲ್ಲರಲ್ಲಿಯೂ ಇದ್ದಾನೆ.

ಈಶ್ವರಃ ಸರ್ವಭೂತಾನಾಂ<br>
ಹೃದ್ದೇಶೇಽರ್ಜುನ ತಿಷ್ಠತಿ

ಪಾರ್ಥನಿಗೆ ತಿಳಿಸಿದಂತೆ ಭಗವಂತನು ಎಲ್ಲಾ ಜೀವಿಗಳ ಹೃತ್ಕಮಲ ಮಧ್ಯದಲ್ಲಿ ವಿರಾಜಮಾನನಾಗಿದ್ದಾನೆ.

ಪರೀತ್ಯಭೂತಾನಿ ಪರೀತ್ಯಲೋಕಾನ್<br>
ಪರೀತ್ಯ ಸರ್ವಾಃ<br>
ಪ್ರದಿಶೋ ದಿಶಶ್ಚ<br>
ಉಪಸ್ಥಾಯ ಪ್ರಥಮಜಾಮೃತಸ್ಯಾತ್<br>
ಆತ್ಮನಾತ್ಮಾನ ಮಭಿ ಸಂನಿವೇಶ

ಈ ಪ್ರಕಾರ ಯಜುರ್ವೇದ ಮಂತ್ರದಿಂದ ಸಿದ್ಧವಾಗಿದೆ. ''ತಂ ಭೂತನಿಲಯಂ ದೇವಮ್ ಸುಪರ್ಣಮುಪಧಾವತ'' (ಉಪನಿಷತ್)

ಏಕಃ ಸುಪರ್ಣಃ ಸ ಸಮುದ್ರಮಾವಿವೇಶ<br>
ಸ ಇದಂ ವಿಶ್ವಂ ಭುವನಂ ವಿ ಚಷ್ಟೇ

ಅರ್ಥಾತ್ - ಅದ್ವಿತೀಯ ಪರಮತತ್ವವು - ಸುಪರ್ಣ - ಸುಂದರ ಕಮಲದೆಳೆಷ್ಟೆ



## ಮಾರಾಟಕ್ಕೆ ಸಿದ್ಧವಾಗಿರುವ ಕನ್ನಡ ಗ್ರಂಥರಾಶಿ

| | | | | |
|---|---|---|---|---|
| 1. | ಭಕ್ತ ಪುರಂದರದಾಸರು | ನಾಟಕ | ರೂ. | 2-60 |
| 2. | ಕರ್ನಾಟಕದ ಹರಿದಾಸರು | | ರೂ. | 2-25 |
| 3. | ಸ್ತೋತ್ರ ಕುಸುಮಮಾಲ | | ರೂ. | 3-00 |
| 4. | ಶ್ರೀ ವೆಂಕಟೇಶ್ವರ ಸುಪ್ರಭಾತ | | ರೂ. | 5-00 |
| 5. | ಶ್ರೀ ತ್ಯಾಗರಾಜಸ್ವಾಮಿ ಕೃತಿಗಳ ಹಲವು ಮುಖಗಳು | | ರೂ. | 5-00 |
| 6. | ಗುರುಶ್ರೀಶ ವಿಠಲದಾಸರ ಕೃತಿಗಳು | | ರೂ. | 6-00 |
| 7. | ದಾಸತತ್ವ ಪ್ರಕಾಶಿಕೆ | | ರೂ. | 10-00 |
| 8. | ಉರಗಾದ್ರಿವಾಸ ವಿಠಲದಾಸರ ಕೃತಿಗಳು | | ರೂ. | 15-00 |
| 9. | ವಿಜಯದಾಸರ ಅಷ್ಟಕ | | ರೂ. | 3-00 |
| 10. | ಶ್ರೀದವಿಠಲದಾಸರ ಕೃತಿಗಳು | | ರೂ. | 9-00 |
| 11. | ಕನಕದಾಸರು - ಅವರ ಸಾಹಿತ್ಯ ಸಮೀಕ್ಷೆ | | ರೂ. | 16-00 |
| 12. | ಗೀತಾಸಾರೋದ್ಧಾರ | | ರೂ. | 14-00 |
| 13. | ಗೋವಿಂದದಾಸರ ಕೃತಿಗಳು | | ರೂ. | 8-00 |
| 14. | ದಾಸರು ಕಂಡ ವ್ಯಾಸರ ಹೃದಯ | | ರೂ. | 8-50 |
| 15. | ಶ್ರೀನಿವಾಸನ ಹಾಡುಗಳು | (ಗೋಪಾಲದಾಸರು) | ರೂ. | 12-50 |
| 16. | ಶ್ರೀನಿವಾಸನ ಹಾಡುಗಳು | (ವಿಜಯದಾಸರು) | ರೂ. | 18-50 |
| 17. | ಶ್ರೀನಿವಾಸನ ಹಾಡುಗಳು | (ಸಂ -1) | ರೂ. | 11-00 |
| 18. | ಶ್ರೀನಿವಾಸನ ಹಾಡುಗಳು | (ಸಂ -2) | ರೂ. | 11-00 |
| 19. | ಸೃಷ್ಟಿಪ್ರಕರಣ | | ರೂ. | 23-00 |
| 20. | ಶ್ಯಾಮಸುಂದರ ದಾಸರ ಕೃತಿಗಳು | | ರೂ. | 21-00 |
| 21. | ಗುರುಜಗನ್ನಾಥದಾಸರ ಕೃತಿಗಳು | | ರೂ. | 32-00 |
| 22. | ಗೋಪಾಲದಾಸರು | (ಮಕ್ಕಳ ಪುಸ್ತಕ) | ರೂ. | 4-00 |
| 23. | ವ್ಯಾಸರಾಯರು | (ಮಕ್ಕಳ ಪುಸ್ತಕ) | ರೂ. | 4-00 |
| 24. | ಶ್ರೀಪಾದರಾಜರು | (ಮಕ್ಕಳ ಪುಸ್ತಕ) | ರೂ. | 4-00 |
| 25. | ಪುರಂದರದಾಸರು | (ಮಕ್ಕಳ ಪುಸ್ತಕ) | ರೂ. | 5-00 |
| 26. | ಪ್ರಸನ್ನವೆಂಕಟದಾಸರು | (ಮಕ್ಕಳ ಪುಸ್ತಕ) | ರೂ. | 5-00 |
| 27. | ಮಹಿಪತಿದಾಸರು | (ಮಕ್ಕಳ ಪುಸ್ತಕ) | ರೂ. | 4-00 |

**ಅಂಚೆ ವೆಚ್ಚ ಪ್ರತ್ಯೇಕ**

ತಕ್ಕ ಹಣದ ಡಿ.ಡಿ. ಯನ್ನೂ, ಪುಸ್ತಕದ ಪಟ್ಟಿಯನ್ನು - ಮಾರಾಟ ವಿಭಾಗ, ತಿ.ತಿ.ದೇ. ಪ್ರಕಟನ ಶಾಖೆ, ತಿ.ತಿ.ದೇ. ತಿರುಪತಿ, ಆಂಧ್ರಪ್ರದೇಶ - ಇವರಿಗೆ ಕಳುಹಿಸಬೇಕು. ಎಂ.ಓ. ಸ್ವೀಕರಣೆ ಇಲ್ಲ. ವಿ.ಪಿ.ಪಿ. ವ್ಯವಸ್ಥೆ ಇಲ್ಲ.

ಸಮಾನವಾದ ಚರಣಾರವಿಂದವುಳ್ಳ, ಸಮುದ್ರಕ್ಕೆ (ಸದೃಶವಾದ) ಸಮಾನವಾದ ಹೃದಯ ಕಮಲದಲ್ಲಿ ಪ್ರತಿಷ್ಠಿತನಾಗಿ, ಈ ಸೃಷ್ಟಿಯ ಎಲ್ಲ ಪ್ರಾಣಿಗಳಲ್ಲಿಯೂ ಅಂತರ್ಗತನಾಗಿದ್ದಾನೆ. ಅಲ್ಲದೆ - ತನ್ನ ಚಿತ್ ಶಕ್ತಿಯಿಂದ ಎಲ್ಲರ ಜೀವನ ವ್ಯಾಪಾರಕ್ಕೂ ಚಾಲನೆಯನ್ನು ನೀಡುತ್ತಿರುವನು.

ರಸಿಕಶೇಖರ ಶ್ಯಾಮಸುಂದರನಾದ ಭಗವಂತನನ್ನು ಕುರಿತು - ರಾಸಪಂಚಾಧ್ಯಾಯದ ಗೋಪಿಕಾ ಗೀತೆಯಲ್ಲಿನ ಈ ವರ್ಣನೆ ಸುಂದರವಾಗಿದೆ.

ನಖಲು ಗೋಪಿಕಾ ನಂದನೋಭವಾನ್
ಅಖಿಲದೇಹಿನಾಮಂತರಾತ್ಮದೃಕ್
ವಿಖನಸಾರ್ಥಿತೋ ವಿಶ್ವಗುಪ್ತಯೇ
ಸಖ ಉದೇಯಿವಾನ್ ಸಾತ್ವತಾಂ ಕುಲೇ
-ಶ್ರೀಮದ್ಭಾಗವತ

ಅರ್ಥಾತ್ - ಹೇ ಸಖೇ! ನೀನು ಕೇವಲ ಯಶೋದಾನಂದನ ಮಾತ್ರವಲ್ಲ. ಪ್ರಸ್ತುತ ಎಲ್ಲ ದೇಹಧಾರೀಜೀವಿಗಳ ಅಂತರ್ಯಾಮಿ - ಬ್ರಹ್ಮದೇವರ ಪ್ರಾರ್ಥನೆಯ ಮೇರೆಗೆ - ವಿಶ್ವವನ್ನು ಪಾಲಿಸುವ ನಿಮಿತ್ತದಿಂದ ನೀನು ಯಾದವ ಕುಲದಲ್ಲಿ ಅವತರಿಸಿದೆ. ನೀನು ಅನೇಕ ಸ್ಪರ್ಧಾಳು ವಿರೋಧೀಶತ್ರುಗಳನ್ನು ನಿಗ್ರಹಿಸಿದೆ. ರಾಜ, ಗೋವರ್ಧನವನ್ನು ನಿನ್ನ ಎಡಗೈಯಿಂದ ಎತ್ತಿ ಹಿಡಿದು - ಇಂದ್ರನ ಪ್ರಳಯ ಕಾರೀ ಶಕ್ತಿಯನ್ನು ಸ್ತಂಭನ ಮಾಡಿ, ಸಂಪೂರ್ಣ ಗೋಪೀವ್ರಜವನ್ನು ರಕ್ಷಿಸಿದೆ. ನಿನ್ನ ಅಪರಿಮಿತ ಶಕ್ತಿಯ ಬಲದಿಂದ - ದೇವದಮನ, ನಾಗದಮನ, ಇಂದ್ರದಮನ, ಕಾಲೀಯ ಮರ್ದನ ಕಂಸನಿಕಂದನ ಮೊದಲಾದ ಕಾರ್ಯಗಳನ್ನು ಮಾಡಿ ವಿಜೃಂಭಿಸಿದೆ. ನಿನ್ನ ಕೃಪೆ ನಮ್ಮ ಮೇಲೆ ಇರಲಿ.

ವೇದವು ಇಂತಹ ಭಗವಂತನ ಲೀಲಾವಿಭೂತಿಯನ್ನು ಮುಕ್ತವಾಗಿ ಗಾನ ಮಾಡಿದೆ. ಇದನ್ನು ಅನುಭವಿಸುವ ಯೋಗವು ನಮಗೆ ಬರಬೇಕು.

★★★★★

# ಭಗವಾನ್ ಶ್ರೀವಿಷ್ಣು

- ಅನಂತ ಚಿಂತಾಮಣಿ ಜ್ಯೋತಿಷಿ.

ಹಿಂದೂ ಧರ್ಮದೊಳಗಿನ ಅನೇಕ ದೇವ ದೇವತೆಗಳ ಪ್ರಭಾವಳಿಯಲ್ಲಿ ವೇದ ಕಾಲದಿಂದ ಭಗವಾನ್ ವಿಷ್ಣುವಿಗೆ ಪ್ರಮುಖ ಸ್ಥಾನ ದೊರಕಿದ್ದು, ತುಂಬಾ ಸಾತ್ವಿಕ ದೇವರೂ ಅಲಂಕಾರ ಪ್ರಿಯನೂ ಆಗಿ ಎಲ್ಲರ ಪ್ರೀತಿಗೆ ಪಾತ್ರನಾಗಿದ್ದಾನೆ. ರಾಜನಿಂದ ರಂಕನ ತನಕ ವಿಷ್ಣು ಪರಮಾತ್ಮನಿಗೆ ಭಕ್ತರಿರುವರು. ದೀನದುರ್ಬಲರಿಂದ ಬಲಾಢ್ಯ ಸಾಮ್ರಾಟರ ತನಕ ಭಕ್ತರು ವಿಷ್ಣುವನ್ನು ನಿರಲಸ ಭಕ್ತಿಯ ಮಾರ್ಗದಿಂದ ಪ್ರಸನ್ನಗೊಳಿಸಿಕೊಂಡ ಉಲ್ಲೇಖ ಪುರಾಣಗಳಿಂದ ತಿಳಿದುಬರುತ್ತದೆ. ರೂಢಿ ಪ್ರಧಾನ ತೀವ್ರ ಪವಿತ್ರತೆಯ ತುಲನೆಯಲ್ಲಿ ವಿಷ್ಣುವು ಅತಿಶಯ ಸೌಮ್ಯನಾಗಿ ಭಕ್ತರ ಅಪರಾಧಗಳನ್ನು ಹೊಟ್ಟೆಯಲ್ಲಿ ಹಾಕಿಕೊಂಡು ಅನುಗ್ರಹಿಸುತ್ತಾನೆ.

ತೀರ ಸರಳ ರೀತಿಯಿಂದ ಎಲೆ ಹೂವುಗಳ ಪಾದ್ಯ ಪೂಜೆಯಿಂದ ರಾಜಭೋಗ ಪೂಜೆ ತನಕ ಯಾವುದೇ ಪದ್ಧತಿಯಿಂದ ಭಕ್ತರು ತಮಗೆ ಅನುಕೂಲ ರೀತಿಯಿಂದ ಪೂಜೆಯನ್ನು ಮಾಡಬಹುದು. ಬ್ರಹ್ಮನು ಸೃಷ್ಟಿಕರ್ತನಾದರೆ ಶಿವ ಸಂಹಾರ ಕರ್ತ. ವಿಷ್ಣುಪಾಲನ ಕರ್ತನಾಗಿದ್ದು, ಸೃಷ್ಟಿಯೊಳಗಿನ ದೈನಂದಿನ ಪ್ರಾಣಿ ಪಶುಪಕ್ಷಿ ಮಾನವ ಜಲಚರ ನಿಶಾಚರಗಳ ಜೀವಸಕ್ರಮ ಸೌಖ್ಯ, ಆಹಾರ, ನಿದ್ರೆ, ಕುಟುಂಬ ಸುಖಿಗಳ ನಿರ್ವಹಿಸುವುದನ್ನು ವಿಷ್ಣುವು ಮಾಡುತ್ತಿರುವನು. ವಿಷ್ಣುವು ಕ್ಷೀರಸಾಗರ ತಳಕ್ಕೆ ಶೇಷ ಶಾಯಿಯಾದಾಗ ವಿಶ್ವದಲ್ಲಿ ಸಂಕಟವಾಗಿ ನೈಸರ್ಗಿಕ ಆಪತ್ತು ವಿತ್ತ ಹಾನಿ ಮತ್ತು ದುಷ್ಟಪ್ರವೃತ್ತಿಗಳ ನಿರ್ಮಾಣವಾಗುತ್ತದೆ. ಈ ಕಾಲದಲ್ಲಿ ಅಬಾಲ ವೃದ್ಧರು ಪೂಜಾವಿಧಿ, ಜಪ, ಪಾಠ ಉಪವಾಸ ಮೊದಲಾದವುಗಳನ್ನು ಮಾಡಿ ಸಂಕಟಗಳನ್ನು ನಿವಾರಿಸಲು ನೈತಿಕ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಾರೆ. ಮನುಷ್ಯನ ಮತ್ತು ದೇವನ ಶುಚಿತ್ವವು ದುಷ್ಟ ಪ್ರವೃತ್ತಿಯನ್ನು ದೂರಕ್ಕೆ ನಿಲ್ಲಿಸುತ್ತದೆ.

ವಿಷ್ಣುವಿನ ನಿದ್ರೆಯ ಕಾಲವಧಿ (ಶಯನೀ ಏಕಾದಶಿ) ಆಷಾಢ ಶುದ್ಧ ಏಕಾದಶಿಯಿಂದ ಮಳೆಗಾಲ ಮುಗಿಯುವ ತನಕ (ಪ್ರಬೋಧಿನಿ ಏಕಾದಶಿ) ಕಾರ್ತೀಕ ಶುದ್ಧ ಏಕಾದಶಿಯ ತನಕ ಇರುತ್ತದೆ. ವಿಷ್ಣುಪರಮಾತ್ಮನು ಪ್ರಬೋಧಿನಿ ಏಕಾದಶಿಯಂದು ನಿದ್ರೆಯಿಂದ ಜಾಗೃತ ನಾಗಿರುವನು. ಈ ಕಾಲದಲ್ಲಿ ಮನೆ ಮನೆಯಲ್ಲಿ



ವಿಷ್ಣುಪೂಜೆ, ಸತ್ಯನಾರಾಯಣ ಪೂಜೆ, ಬಾಲಕೃಷ್ಣನ ಪೂಜೆ ಮಾಡುವರು. ಬಾಲಕೃಷ್ಣನು ವಿಷ್ಣುವಿನ ಅವತಾರದ ಪೂರ್ಣಾಂಶವಾಗಿದೆ. ಹಾಗೆಯೇ ಸಂಹಾರಕರ್ತ ಶಿವನನ್ನು ಈ ಕಾಲದಲ್ಲಿ ಸಂತುಷ್ಟಗೊಳಿಸಲು ಶ್ರಾವಣ ಸೋಮವಾರ ಉಪೋಷಣೆ ಪೂಜೆಯನ್ನು ಮಾಡುವರು.

ವ್ರತ ಪೂಜೆಯಲ್ಲಿ ಕಲಶ ಸ್ಥಾಪನೆ ಮಾಡಬೇಕೆಂಬುದು ಹೇಳಿದೆ. ನೀರಿನ ಕಲಶವೆಂದರೆ ಸಾಗರ ನದಿಗಳ ಪ್ರತೀಕ. ಸಮೃದ್ಧಿಗಾಗಿ ಪರಿಸರವನ್ನು ಧಾನ್ಯ ಶೇಖರಣೆ ಮಾಡಿರುವುದು. ಸುಫಲತ್ವದ ಸಂಕೇತ. ಆಕಾಶನ್ನು ಸೃಷ್ಟಿಯ ಪ್ರತೀಕವಾಗಿರುವ ನವಗ್ರಹಗಳ ಸ್ಥಾಪನೆ. ಹೀಗೆ ಒಂದೇ ಪೂಜನದಲ್ಲಿ ಇಡೀ ವಿಶ್ವದ ಮತ್ತು ಜಗನ್ನಿಯಂತ್ರಣದ ಪೂಜೆಯು ಪುಣ್ಯವು ಸಿಗುತ್ತದೆ. ಬಾಲಕ ಧ್ರುವನಿಗೆ ವಿಷ್ಣು ಪ್ರಸನ್ನನಾಗಿ ಆತನಿಗೆ ಧ್ರುವ ತಾರೆಯ ಪಟ್ಟ ನೀಡಿರುತ್ತಾನೆ. ವಿಷ್ಣುವು ಶ್ರೀಕೃಷ್ಣನ ರೂಪದಲ್ಲಿ ಪಾಂಡು ಪುಂಡರೀಕನ ಆಜ್ಞೆಯಂತೆ ಇಟ್ಟಿಗೆಯ ಮೇಲೆ ನಿಂತು ಟೊಂಕದ ಮೇಲೆ ಕೈ ಇಟ್ಟುಕೊಂಡು ನಿಂತು ಅನುಗ್ರಹಿಸುತ್ತಿದ್ದಾನೆ. ಈ ವಿಷ್ಣುವು ಲಕ್ಷಗಟ್ಟಲೇ ದೀನ ದುರ್ಬಲರ ಕಷ್ಟಸಹಿಷ್ಣುಗಳ ಶ್ರಮ ಜೀವಿಗಳ ಆರಾಧ್ಯ ದೇವತೆ ಯಾಗಿರುವನು. ವಾರಕರಿ ಪಂಥದವರು ವಿಟ್ಠಲನಿಗಾಗಿ ಅನುದಿನವೂ ನೆನೆಯುತ್ತಾರೆ. ಅಲ್ಲದೇ ಸನ್ಯಾಸ ಧರ್ಮದಂತೆ ಪೂಜ್ಯ ಚಕ್ರಧರ ಸ್ವಾಮಿಗಳು ಕೂಡ ಶ್ರೀಕೃಷ್ಣನ ಪೂಜಾ ವಿಧಿಯನ್ನು ಮಾಡಿ ಅನುಗ್ರಹ ಪಡೆದುಕೊಂಡಿದ್ದಾನೆ.

ಬಾಲಕೃಷ್ಣನು ಮಕ್ಕಳಿಗೆಲ್ಲ ಪ್ರಿಯ. ಬಾಲಕೃಷ್ಣನ ಕುರಿತಾಗಿ ಒಂದು ಕವಿತೆಯು ಕೇಳಿಬರುತ್ತದೆ. ಒಂದೂರಿನಲ್ಲಿ ಬಡವಿ ಯೊಬ್ಬಳಿದ್ದಳು. ತನ್ನ ಚಿಕ್ಕ ಹುಡುಗನೊಡನೆ ಇರುತ್ತಿದ್ದಳು. ಆ ಹುಡುಗನಿಗೆ ಕಲಿಯುವ ಆದಮ್ಯ ಬಯಕೆ ಇದ್ದುದರಿಂದ ಕಾಡಿನ ದಾರಿಯಿಂದ ದೂರದ ಊರಿಗೆ ಹೋಗಬೇಕಾಗಿತ್ತು. ಹುಡುಗನು ಕಾಡಿನ ದಾರಿಯಲ್ಲಿ ಹೋಗಲು ಭಯವಾಗುತ್ತದೆ. ಎಂದಾಗ ನಿನಗೆ ಹೆದರಿಕೆಯಿಲ್ಲ ಕಾರಣ ನನ್ನ ದೊಡ್ಡಮಗ ಕಾಡಿನಲ್ಲಿ ಇದ್ದು ಅವನು ಪ್ರಿಯಾದ ನಿನಗೆ ಕಾಡಿನಿಂದ ಊರಿಗೆ ಮುಟ್ಟಿಸುವನು



## ವರ್ಷದಲ್ಲಿ ಆಚರಿಸುವ ವಿಷ್ಣುಪೂಜೆ

| | | |
|---|---|---|
| ಚೈತ್ರ ಶುದ್ಧ ದ್ವಿತೀಯ | - | ಮತ್ಸ್ಯ ಜಯಂತಿ. |
| ಚೈತ್ರ ಶುದ್ಧ ಚತುರ್ಥಿ | - | ಲಕ್ಷ್ಮಿ ಪೂಜೆ. |
| ಚೈತ್ರ ಶುದ್ಧ ನವಮೀ | - | ಶ್ರೀರಾಮ ನವಮಿ. |
| ಚೈತ್ರ ಶುದ್ಧ ದ್ವಾದಶಿ | - | ವಿಷ್ಣುವಿಗೆ ಹವನ ಅರ್ಪಣೆ. |
| ಚೈತ್ರ ಶುದ್ಧ ಚತುರ್ದಶಿ | - | ನರಸಿಂಹ ಡೋಲೋತ್ಸವ. |
| ವೈಶಾಖ ಶುದ್ಧ ತೃತೀಯ | - | ಅಕ್ಷಯ ತೃತೀಯ, ಪರಶುರಾಮ ಜಯಂತಿ, ಮತ್ತು ಆಕಳ ಪೂಜನ ವಿಷ್ಣುವಿಗೆ ಕೃಷ್ಣತುಲಸಿಯಿಂದ ತ್ರಿಕಾಲ ಪೂಜನ ಸತತಧಾರಾ. |
| ವೈಶಾಖ ಶುದ್ಧ ಏಕಾದಶಿ | - | ಮೋಹಿನೀ ಏಕಾದಶಿ, ವಿಷ್ಣುಪೂಜೆ ಮಾಡಿ ಭಜನ ಕೀರ್ತನೆ, ಜಾಗರಣೆ, ಉಪೋಷಣೆ, ಮಾಡಿದ್ದರಿಂದ ವಿಷ್ಣುಲೋಕ ಪ್ರಾಪ್ತಿ. |
| ವೈಶಾಖ ಶುದ್ಧ ದ್ವಾದಶಿ | - | ಮಧುಸೂದನ ಪೂಜೆ. |
| ವೈಶಾಖ ಶುದ್ಧ ತ್ರಯೋದಶಿ | - | ನೃಸಿಂಹ ಜನ್ಮೋತ್ಸವ. |
| ಆಷಾಢ ಶುದ್ಧ ದ್ವಿತೀಯ | - | ಜಗನ್ನಾಥ ರಥ ಯಾತ್ರೆ, ಜಗನ್ನಾಥ ಪುರೀ. |
| ಆಷಾಢ ಶುದ್ಧ ಏಕಾದಶಿ | - | ಶಯನಿ ಏಕಾದಶಿ, ವಿಷ್ಣುಪೂಜನ, ಪಂಢರಪುರ ಯಾತ್ರೆ, ಉಪೋಷಣೆ. |
| ಆಷಾಢ ಶುದ್ಧ ದ್ವಾದಶಿ | - | ಪಾರಣೆ, ಭಜನೆ, ಗಾಯನ, ರಾತ್ರೆ - ಸುವಾಸನಾ ಯುಕ್ತ ಹೂಗಳಿಂದ ವಿಷ್ಣುಪೂಜನ, ವಾಮನ ಪೂಜನ. |
| ಶ್ರಾವಣ ಶುದ್ಧ ತ್ರಯೋದಶಿ | - | ವರದಲಕ್ಷ್ಮಿ ವ್ರತ ಕೊನೆಯ ಶುಕ್ರವಾರದಂದು ಕಲಶದ ಮೇಲೆ ವರದ ಲಕ್ಷ್ಮಿಯ ಸ್ಥಾಪನೆ 21 ಅತಿರಸ ನೈವೇದ್ಯ. |
| ಶ್ರಾವಣ ಪೂರ್ಣಿಮೆ | - | ವಿಷ್ಣುವಿಗೆ ಸೂತ್ರ ಅರ್ಪಣೆ. |
| ಶ್ರಾವಣ ಕೃಷ್ಣ ಅಷ್ಟಮಿ . | - | ಗೋಕುಲ ಅಷ್ಟಮಿ, ರಾತ್ರೆ ಜನ್ಮೋತ್ಸವ, ಪಾರ್ಥಿವ ಮೂರ್ತಿ ಪೂಜನ - ಉಪವಾಸ. |
| ಶ್ರಾವಣ ಕೃಷ್ಣನವಮಿ | - | ಪಾರಣೆ, ಗೋಪಾಲ ಕಾಲಾ, ವಿಷ್ಣುಪೂಜನದಿಂದ ಸಂತತಿ ಸಂಪತ್ತಿ ಮತ್ತು ವೈಕುಂಠ ಲೋಕ ಪ್ರಾಪ್ತಿ. |
| ಭಾದ್ರಪದ ಶುದ್ಧ ಏಕಾದಶಿ | - | ಪರಿವರ್ತಿನಿ ಏಕಾದಶಿ, ಉಪವಾಸ, ವಿಷ್ಣು ಪೂಜನ |
| ಭಾದ್ರಪದ ಶುದ್ಧ ದ್ವಾದಶಿ | - | ಪರಿವರ್ತಿನಿನೋತ್ಸವ, ವಾಮನ ಜಯಂತಿ ಪೂಜೆ. |
| ಆಶ್ವೀನ ಶುದ್ಧ ದಶಮಿ | - | ಸಂಜೆ ವಿಷ್ಣುಪೂಜೆ, ದಸರೆ ವಿಷ್ಣುಪೂಜೆ. |
| ಆಶ್ವೀನ ಶುದ್ಧ ಏಕಾದಶಿ | - | ಪಾಶಾಂಕುಶ ಏಕಾದಶಿ, ಬಾಲಕೃಷ್ಣಪೂಜನ, ಉಪವಾಸ ಭಜನ ಕೀರ್ತನ. |

(9 ನೇ ಪುಟನೋಡಿ)

ಎಂದಳು. ದಿನಾಲು ಅವಳು ಬಾಲಕೃಷ್ಣನ ಪೂಜೆ ಮಾಡಿದ್ದಳು. ಈ ಬಾಲಕೃಷ್ಣನನ್ನು ತನ್ನ ಹಿರಿಯ ಮಗನೆಂದು ಭಾವಿಸಿರುವಳು. ಅವಳು ಮಗನಿಗೆ ನಿನಗೆ ಹೆದರಿಕೆಯಾದಾಗ ಬಾಲಕೃಷ್ಣನನ್ನು ಕರೆ ಎಂದಳು. ಅದರಂತೆ ಬಾಲಕೃಷ್ಣನನ್ನು ಕರೆದು ತನ್ನ ಹೆದರಿಕೆಯನ್ನು ದೂರ ಮಾಡಿಕೊಳ್ಳುತ್ತಿದ್ದನು. ಇದನ್ನು ಕಂಡ ಆ ಬಾಲಕನ ತಾಯಿಯ ಅವಾಕ್ಕಾದಳು. ಮನದಲ್ಲಿಯೇ ಕೃಷ್ಣನನ್ನು ಮನಸಾ ವಂದಿಸಿದಳು. ಕೃಷ್ಣ ಭಕ್ತಿಯನ್ನು ಕಂಡ ಅವಳ ಹೃದಯ ತುಂಬಿತು.

ಮಗಳ ಲಗ್ನ [illegible] ದ ನಂತರ ಅತ್ತೆಯ ಮನೆಗೆ ಹೋಗ[illegible] ಬೆಳ್ಳಿಯ ಬಟ್ಟಲಲ್ಲಿ ಬಾಲಕೃಷ್ಣನ ಮೂರ್ತಿ ಕೊಡುವ ಪದ್ಧತಿ ಇದೆ. ಈ ಬಾಲಕೃಷ್ಣನು ಪತಿಗೃಹದ ದೇವರ ಮಂಟಪದಲ್ಲಿ [illegible]ಜನಾಗಿ ಆತನು ಮಕ್ಕಳ ಸ್ವರೂಪದಲ್ಲಿ ಫಲರೂಪನಾಗಿ ಮನೆಯನ್ನು [illegible] ಕುಲವನ್ನಾಗಿರಿಸುವನು. ಕಾರ್ತೀಕ [illegible] ದಶೀಯಂದು ಈ ಬಾಲಕೃಷ್ಣನ [illegible] ತುಲಸಿ ವಿವಾಹದ ವೇಳೆಯಲ್ಲಿ [illegible] ಜಿಸಲಾಗುವುದು. ಆಚಾರ್ಯರಾದ ಪೂಜ್ಯ ಶಂಕರ ಭಗವತ್ಪಾದಾ[illegible] ಸಾಲಗ್ರಾಮ ರೂಪದಲ್ಲಿ ಸ್ಥಾಪ[illegible]ದರು.

ಭಗವಾನ್ ವಿಷ್ಣು[illegible] ರಾಜ ಮಹಾರಾಜರ ಆರಾಧ್ಯ ದೇವ[illegible]ರುವನು. ಹಿಂದೂ ಧರ್ಮದಲ್ಲಿ ರಾಜ[illegible] ವಿಷ್ಣುವಿನ ಅಂಶವೆಂದು ಭಾವಿಸುತ್ತಾರೆ. [illegible] ಮಹಾರಾಜನು ಸಿಸೋದಿಯಾ [illegible]ವಾಗಿದ್ದು ಇದು ರಾಜಪೂತರೊಳಗಿನದು ಎಂದಿದೆ. ಸೂರ್ಯವಂಶ ಅಯೋಧ್ಯೆಯ ಅರಸು ರಾಮಚಂದ್ರ ವಿಷ್ಣುವಿನ ಅವತಾರವಂಶವೆಂದು ಭಾವಿಸುತ್ತಾರೆ. ವಿಜಯನಗರದ ಹಂಪಿ, ಹಿಂದೂ ಸಾಮ್ರಾಜ್ಯ ವೈಷ್ಣವ ಧರ್ಮಕ್ಕೆ ಮಹತ್ತೆಯನ್ನು ತಂದು ಕೊಟ್ಟಿದೆ. ಅವರಲ್ಲಿಯ ರಾಜರಾದ ಕೃಷ್ಣದೇವರಾಯ ವಿಷ್ಣು ಪೂಜಕರಾಗಿದ್ದರು. ಅವರು ವಿಜಯನಗರದ ಸಾಮ್ರಾಜ್ಯದಲ್ಲಿ ವಿಷ್ಣುವಿನ, ನರಸಿಂಹನ

ರಾಮಕೃಷ್ಣರ ಸುಂದರ ಶಿಲ್ಪಕಲೆಯಿಂದಾದ ದೇಗುಲಗಳನ್ನು ಕಟ್ಟಿದರು.

ಉತ್ತರ ಭಾರತದ ಕುಲುಮನಾಲಿ, ಹೃಷೀಕೇಶ, ಬದರೀನಾಥ, ಮಥುರಾ ಹರಿದ್ವಾರ, ದ್ವಾರಕಾ ವೃಂದಾವನ, ಬೇಟ ದ್ವಾರಕಾ, ಜಗನ್ನಾಥಪುರೀ, ಅಯೋಧ್ಯಾ, ದಕ್ಷಿಣ ಭಾರತದ ಕಾಂಚಿ, ಪುರಿ, ತಿರುಪತಿ ಬಾಲಾಜಿ, ಉಡುಪಿ, ಹಂಪಿ, ಶ್ರೀರಂಗಪಟ್ಟಣ, ಪಂಡರಪುರ - ಇವು ವೈಷ್ಣವರ ಪವಿತ್ರ ತೀರ್ಥಸ್ಥಳಗಳಾಗಿದ್ದು, ತಿರುಪತಿ ಬಾಲಾಜಿ ವೇಂಕಟೇಶನ ಸ್ಥಾನವು ಅತ್ಯಂತ ಪವಿತ್ರ ಮತ್ತು ಶ್ರೀಮಂತ ಎನಿಸಿದೆ. ಆಂಧ್ರಪ್ರದೇಶದ ತಿರುಪತಿ ಬಾಲಾಜಿ ವೇಂಕಟೇಶನು ಭಗವಾನ್ ವಿಷ್ಣುವಿನ ಸ್ವರೂಪನು. ತಿರುಪತಿಯ ಚಿತ್ತೂರು ಜಿಲ್ಲೆಯ ಚಂದ್ರಗಿರಿ ತಾಲೂಕಿನ ಶೇಷಾಚಲ ಪರ್ವತದ ಮೇಲಿದೆ. ಮಂದಿರದ ಗರ್ಭಗುಡಿ ಮೇಲಿನ ವಿಮಾನ ಮತ್ತು ಕಳಸ ಇವು ಪೂರ್ಣವಾಗಿ ಬಂಗಾರದಿಂದ ಹೊದಿಸಲ್ಪಟ್ಟಿದೆ. ಮಹಾದ್ವಾರದ ಮೇಲೆ ಗೋಪುರ ಎತ್ತರವಾಗಿದೆ. ವಾಸ್ತುಶಿಲ್ಪ ಶಾಸ್ತ್ರದಲ್ಲಿ ಈ ದೇಗುಲವು ಉತ್ತಮ ಮಾದರಿ ಎನಿಸಿದೆ. ವೆಂಕಟೇಶನು ಮೂರ್ತಿಯು ಬೆಳ್ಳಿ ಬಂಗಾರ ವಜ್ರಗಳಿಂದ ಅಲಂಕೃತ ಗೊಂಡಿದೆ. ಕೃಷ್ಣದೇವರಾಯ ಮತ್ತು ಅಚ್ಯುತರಾಯ ಮುಂತಾದ ರಾಜ ಪುರುಷರು ದೇಗುಲವನ್ನು ಬೆಳೆಸಿದರು. ದೇಗುಲದಲ್ಲಿ ವೆಂಕಟೇಶನ ಮೂರ್ತಿಯು ಏಳು ಅಡಿಯಿದ್ದು ನಿಂತ ಸ್ಥಿತಿಯಲ್ಲಿದೆ. ಮತ್ತು ಕೈಯಲ್ಲಿ ಶಂಖ ಚಕ್ರ ಧರಿಸಿದ್ದಾನೆ. ಭಕ್ತ ಭಜಕರು ದ್ರವ್ಯಗಳನ್ನು ಅರ್ಪಿಸಿ ತಿರುಪತಿ ವೆಂಕಟೇಶನ ಅನುಗ್ರಹಕ್ಕೆ ಪಾತ್ರರಾಗುತ್ತಾರೆ.

ವಿಷ್ಣುವು ಶೇಷಾಚಲದಿಂದ ಆಕಾಶ ಮಾರ್ಗದಿಂದ ಹೋಗುತ್ತಿರುವಾಗ ಈ ರಮಣೀಯ ನೆಲೆಯನ್ನು ಕಂಡು ಆತನಿಗೆ ಹಿಡಿಸಿತು. ಆವನು ಅಲ್ಲಿಯೇ ಧ್ಯಾನ ಧಾರಣೆ

(8 ನೇ ಪುಟದಿಂದ)

| | | |
|---|---|---|
| ಅಶ್ವೀನ ಪೂರ್ಣಿಮೆ | - | ದಾಮೋದರ ಭಜನ, ನವಾನ್ನ ಭಕ್ಷಣ, ಅಂಗಣದಲ್ಲಿ ಆಕಾಶ ದೀಪ ಬೆಳಗುವಿಕೆ. |
| ಅಶ್ವೀನ ಕೃಷ್ಣ ಏಕಾದಶಿ | - | ರಮಾ ಏಕಾದಶಿ, (ಲಕ್ಷ್ಮೀ ಪೂಜನ) ವಸುಬಾಸ ಕರು ಸಹಿತ ಆಕಳ ಪೂಜನ. |
| ಅಶ್ವೀನ ಕೃಷ್ಣ ಚತುರ್ದಶಿ | - | ನರಕ ಚತುರ್ದಶಿ, ಅಭ್ಯಂಗ ಸ್ನಾನ, ವಿಷ್ಣುಪೂಜನ, ನಾಲ್ಕು ಬತ್ತಿಗಳ ದೀಪ ಬೆಳಗಿಸುವಿಕೆ. |
| ಅಶ್ವೀನ ಅಮಾವಾಸ್ಯೆ | - | ಲಕ್ಷ್ಮೀ ಪೂಜನ. |
| ಕಾರ್ತೀಕ ಶುದ್ಧ ಪ್ರತಿಪದೆ | - | ಬಲಿಪ್ರತಿಪದೆ, ದೀಪೋತ್ಸವ ಅನ್ನ ಕೂಟ, ಗೋಕ್ರೀಡೆ, ಗೋವರ್ಧನ ಪೂಜೆ, ಬಾಲ ಕೃಷ್ಣನ ಪೂಜನದಿಂದ ಕುಲ ದೀಪಕ ಪುತ್ರ ಜನ್ಮ ಪ್ರಾಪ್ತಿ. |
| ಕಾರ್ತೀಕ ಶುದ್ಧ ಏಕಾದಶಿ | - | ಪ್ರಬೋಧಿನೀ ಏಕಾದಶಿ, ಉಪವಾಸ ಪಂಢರ ಪುರ ಯಾತ್ರೆ, ವಿಷ್ಣು ಪೂಜನ, ವಿಠಲ ಪೂಜೆ, ಅಭ್ಯಂಗ ಕೀರ್ತನೆ, ವಿಷ್ಣು ಜಾಗೃತಿ. |
| ಕಾರ್ತೀಕ ಶುದ್ಧ ದ್ವಾದಶಿ | - | ತುಳಸಿ ವಿವಾಹ, ಬಾಲಕೃಷ್ಣ ತುಳಸಿ ಪೂಜನ ಮಂತ್ರಾಕ್ಷತೆ ನೈವಿದ್ಯ. |
| ಕಾರ್ತೀಕ ಶುದ್ಧ ಚತುರ್ದಶಿ | - | ವೈಕುಂಠ ಚತುರ್ದಶಿ,ರಾತ್ರಿವಿಷ್ಣುವಿಗೆಕೃಷ್ಣತುಳಸಿ ಅರ್ಪಣೆ. |
| ಮಾರ್ಗಶೀರ್ಷ ಶುದ್ಧ ಏಕಾದಶಿ | - | ಮೋಕ್ಷದಾ ಏಕಾದಶಿ, ಗೀತಾಜಯಂತಿ,ಶ್ರೀಕೃಷ್ಣಪೂಜೆ. ಪ್ರತಿ ಗುರುವಾರ ಕಲಶ ಮತ್ತು ಲಕ್ಷ್ಮೀ ಪೂಜನ. |
| ಪೌಷ ಪೂರ್ಣಿಮೆ | - | ವಿಷ್ಣು ಪೂಜನ ತೀರ್ಥ ಸ್ನಾನ, ದಾನ, ಧರ್ಮ. |
| ಪೌಷ ಕೃಷ್ಣ ಏಕಾದಶಿ | - | ಷಟ್ ತಿಲಾ ಏಕಾದಶಿ, ಉಪವಾಸ, ಜಪ, ಶ್ರೀಕೃಷ್ಣಮಂತ್ರ ಜಪ 8-28-108-1000 ಬಾರಿ. |
| ಮಾಘ ಪೂರ್ಣಿಮೆ | - | ಮಾಧವ ಪೂಜೆ, ಉಪವಾಸ ತಿಲ ಶರ್ಕರ ದಾನ, ಮಾಘಸ್ನಾನ, ದಾನ, ಧರ್ಮ, ಗೆಣಸು ವ್ಯರ್ಜ್ಯ. |
| ಪಾಲ್ಗುಣ ಶುದ್ಧ ದ್ವಾದಶಿ | - | ಮನೋರಥ ದ್ವಾದಶಿ, ವಿಷ್ಣು ಪೂಜನ,ಭೋಜನ. |
| ಪಾಲ್ಗುಣ ಕೃಷ್ಣ ಪಂಚಮಿ | - | ರಂಗಪಂಚಮಿ, ವಿಷ್ಣು ಪೂಜನ ಮಾಡಿ ದೇವರಿಗೆ ರಂಗೇರಿಸುವಿಕೆ, ಮೃಷ್ಟಾನ್ನ ನೈವೇದ್ಯ. |

ಉಳಿದ ದೇವ ದೇವತೆಯರಿಗಿಂತ ಸ್ಥಳ ಮಹತ್ವದ ಹೊರತಾಗಿ ಮನೆ ಮನೆಯಲ್ಲಿ ನೈಮಿತ್ತಿಕವಾಗಿ ಪೂಜೆಕೊಳ್ಳುವ ದೇವತೆಯೆಂದರೆ ಶ್ರೀ ವಿಷ್ಣು ಪರಮಾತ್ಮನೊಬ್ಬನೇ ಎಂದು ಹೇಳುವುದರಲ್ಲಿ ಸಂಶಯವಿಲ್ಲ.



ಮಾಡಿದನು. ರಾಜ ಪುರುಷರು ಈ ಸುಂದರ ದೇಗುಲ ಮತ್ತು ಮೂರ್ತಿ ಅರ್ಚನೆ ಮಾಡಿದರು. ದೇವಸ್ಥಾನ ಟ್ರಸ್ಟ ಮೂಲಕ ಸೇವೆ, ಶಿಕ್ಷಣ ಸಂಸ್ಥೆಗಳು ಕಾರ್ಯನಿರ್ವಹಿಸುತ್ತವೆ.

ಕರ್ನಾಟಕದ ಉಡುಪಿಯಲ್ಲಿ ಮಧ್ವಾಚಾರ್ಯರು ಕೃಷ್ಣನನ್ನು ಸ್ಥಾಪಿಸಿದ ವಿವರ ಎಲ್ಲರಿಗೂ ಗೊತ್ತಿದೆ. ಮೈಸೂರಿನ ಹತ್ತಿರ ಶ್ರೀರಂಗಪಟ್ಟಣ ಕ್ಷೇತ್ರದಲ್ಲಿ ಶೇಷಶಾಯಿ ವಿಷ್ಣು ಮೂರ್ತಿಯಿರುತ್ತದೆ. ಜಗನ್ನಾಥ ಪುರಿಯಲ್ಲಿ ಶ್ರೀಕೃಷ್ಣ ಬಲರಾಮ ಸುಭದ್ರೆಯರ ಕಟ್ಟಿಗೆಯ ಮುಖವಾಡಗಳಿವೆ. ಅಲ್ಲಿಯ ರಾಜನು ದೇಗುಲದಲ್ಲಿ ವಂಶ ಪಾರಂಪರ್ಯದಿಂದ ರಥಯಾತ್ರೆಯಲ್ಲಿ ನವಿಲುಗರಿಯ ಕಸ ಬರಿಗೆಯಿಂದ ಸ್ವಚ್ಛಗೊಳಿಸುತ್ತಿದ್ದನು. ಹೃಷೀಕೇಶವು ಅಲಕನಂದದ ತಪ್ಪಲಿನಲ್ಲಿ ಹಿಮಾಲಯದೊಳಗಿನ ತೀರ್ಥಕ್ಷೇತ್ರವಾಗಿದೆ. ಬದರಿನಾಥದಲ್ಲಿ ವಿಷ್ಣುವಿನ ಮಂದಿರವಿದ್ದು, ಈ ಪವಿತ್ರ ತೀರ್ಥಕ್ಷೇತ್ರ ಹಿಮಾಲಯದಲ್ಲಿದೆ. ಗುಜರಾತದಲ್ಲಿ ದ್ವಾರಕಾ, ಬೇಟ ದ್ವಾರಕೆಯು ಶ್ರೀಕೃಷ್ಣನ ಸ್ಥಳವಾಗಿದೆ. ಉತ್ತರ ಪ್ರದೇಶದ ಮಥುರಾ ವೃಂದಾವನಗಳಲ್ಲಿ ಶ್ರೀಕೃಷ್ಣನ ಸುಂದರ ದೇಗುಲಗಳಿವೆ. ವೃಂದಾವನದಲ್ಲಿ ಕೃಷ್ಣನು ರಾಧೆಯೊಂದಿಗೆ ವಿಹರಿಸಿದ್ದು, ರಾತ್ರೆಯ ಪ್ರವೇಶ ಅಲ್ಲಿ ನಿಷಿದ್ಧವಾಗಿದೆ. ಒಂದೊಮ್ಮೆ ವೃಂದಾವನದ ತೋಟದಲ್ಲಿ ರಾತ್ರೆ ಪ್ರವೇಶಿಸಿದರೆ ಮೃತರಾಗುವದು ಎಂದು ಹೇಳುತ್ತಾರೆ. ದೆಹಲಿಯಲ್ಲಿ ಬಿರ್ಲಾರವರು ಅಮೃತ ಶಿಲೆಯಿಂದ ವಿಷ್ಣು ಮತ್ತು ಲಕ್ಷ್ಮಿಯ ಮಂದಿರವನ್ನು ಕಟ್ಟಿಸಿದ್ದು, ಸ್ಪಟಿಕದಂತಿರುವ ಮೂರ್ತಿಗಳು ನಯನ ಮನೋಹರ ಎನಿಸಿವೆ. ಅಯೋಧ್ಯೆಯಲ್ಲಿ ವಾದಗ್ರಸ್ತ ಜಾಗೆಯಲ್ಲಿ ಶ್ರೀ ರಾಮಚಂದ್ರ ಅಥವಾ ವಿಷ್ಣು ಅವತಾರದ ಜನ್ಮ ಸ್ಥಾನಗಳು ಸಮಸ್ತ ಹಿಂದುಗಳ ಪವಿತ್ರ ಕ್ಷೇತ್ರಗಳಾಗಿವೆ. ಹಿಮಾಲಯದ ಬದರಿನಾಥ, ಹೃಷಿಕೇಶ, ಹರಿದ್ವಾರದ ಪವಿತ್ರ ವೈಷ್ಣವ ಸ್ಥಾನದಂತೆ ಹಿಮಾಚಲ ಪ್ರದೇಶದ ಕುಲುಮನಾಲಿಯ ರಘುನಾಥ ಎಂದರೆ ಶ್ರೀ ರಾಮಚಂದ್ರ ವೈಷ್ಣವ ದೇವರ ದಸರೆಯು ಪ್ರಸಿದ್ಧವಾಗಿದೆ. ಮಥುರೆಯು ಭಗವಾನ್ ಶ್ರೀಕೃಷ್ಣನ ಜನ್ಮಸ್ಥಾನವಾಗಿದೆ. ಮಥುರೆಯಲ್ಲಿ ಶ್ರೀಕೃಷ್ಣ ಮಂದಿರವಿದ್ದು ಭವ್ಯ ರಾಜಗೃಹಗಳಂತೆ ಅನೇಕ ಗೋಪುರಗಳಿಂದ ಶೋಭಿತಗೊಂಡಿವೆ. ಪ್ರಖ್ಯಾತ ವಿಠ್ಠಲ ಶ್ರೀಕೃಷ್ಣ ಅವತಾರ ಸ್ವರೂಪವಾಗಿದ್ದು ವಿಠ್ಠಲನ ದೇಗುಲದಲ್ಲಿ ಟೊಂಕದ ಮೇಲೆ ಕೈಯಿಟ್ಟುಕೊಂಡು ನಿಂತುಕೊಂಡಿರುತ್ತಾನೆ. ಮಹಾರಾಷ್ಟ್ರದ ಹಳ್ಳಿಹಳ್ಳಿಗಳಲ್ಲಿ ವಿಠ್ಠಲ ಮಂದಿರಗಳನ್ನು ಕಾಣಬಹುದು. ಕೊಲ್ಲಾಪುರದ ಪ್ರಸಿದ್ಧ ಶಾಕ್ತ ಪಂಥದ ಮಹಾಲಕ್ಷ್ಮಿಯ ಮಂದಿರವಿದ್ದು, ಅಲ್ಲಿಯ ಪೂರ್ವಕ್ಕೆ ಮಹಾವಿಷ್ಣುವಿನ ಸುಂದರ ವಿಗ್ರಹದ ಗುಡಿಯಿದೆ. ಉತ್ತರಕ್ಕೆ ವೆಂಕಟೇಶನ ಹಾಗೂ ವಿಠ್ಠಲ ದೇವಸ್ಥಾನಗಳಿದ್ದು, ವೆಂಕಟೇಶನ ಸುಂದರ ಮೂರ್ತಿ ತಿರುಪತಿ ಬಾಲಾಜಿಸ್ವರೂಪದ್ದು. ಶಾಹಪೂರದ ರಾಧಾಕೃಷ್ಣ ಗುಡಿ, ನಾಸಿಕ, ಪುಣೆಯಲ್ಲಿಯ ರಾಮ ಗುಡಿ, ಶ್ರೀಕೃಷ್ಣ ದೇಗುಲಗಳು ಪುರಾತನ ಮತ್ತು ಪ್ರಸಿದ್ಧಿ ಹೊಂದಿವೆ.

ವಿಷ್ಣು ಮತ್ತು ಅವನ ಅವತಾರ ಸ್ವರೂಪಗಳಿಗೆ ರತ್ನರಂಜಿತ ಬಂಗಾರದ ನಾಣ್ಯಗಳಿಂದ ಹೂ - ಹಣ್ಣುಗಳಿಂದ ಶೃಂಗರಿಸಿದೆ. ಮೂರ್ತಿಯು ಮನಮೋಹಕ ಮತ್ತು ಸುಖಮಯವಾಗಿ ಕಂಗೊಳಿಸುತ್ತದೆ.

ದಸರೆ ಮತ್ತು ದೀಪಾವಳಿ ಇವು ಹಿಂದುಗಳ ಮಹತ್ತರ ಹಬ್ಬಗಳೆನಿಸಿದ್ದು, ವಿಷ್ಣು ಪೂಜನವೂ ಈ ಎರಡು ದಿನಗಳಲ್ಲಿ ನಡೆಯುತ್ತದೆ. ದಸರೆಯ ದಿನದಂದು ವಿಷ್ಣು ಅವತಾರದ ಶ್ರೀ ರಾಮನು ರಾವಣನ ವಧೆ ಮಾಡಿದನು. ಈ ದಿನದಂದು ಅಜ್ಞಾತವಾಸ ಮುಗಿಸಿ ಪಾಂಡವರು ಶಮೀವೃಕ್ಷದಡಿಯಲ್ಲಿಯ ಶಸ್ತ್ರಗಳನ್ನು ತೆಗೆದುಕೊಂಡರು. ದೀಪಾವಳಿಗೆಯ ನರಕ ಚತುರ್ದಶಿಯಂದು ಶ್ರೀಕೃಷ್ಣನು ನರಕಾಸುರನನ್ನು ವಧಿಸಿದ ನಂತರ ಆಯಾಸದ ಪರಿಹಾರವಾಗಿ ಅಭ್ಯಂಗಸ್ನಾನ ಮಾಡಿದನು. ಶ್ರೀ ನಾರಾಯಣನ ಪತ್ನಿ ಲಕ್ಷ್ಮೀದೇವಿಯ ಪೂಜನ ಆಶ್ವೀಜ ಅಮಾವಾಸ್ಯೆಯಂದು ನಡೆಯುತ್ತದೆ. ಕಾರ್ತೀಕ ಶುದ್ಧ ಪಾಡ್ಯದಂದು ಬಲಿಪ್ರತಿಪದೆ ಆಚರಿಸುವರು. ಬಲಿಗೆ ಶ್ರೀ ವಿಷ್ಣುವು ವಾಮನ ರೂಪಿಯಾಗಿ ವಿಶ್ವರೂಪ ತೋರಿಸಿ ಪಾತಾಳಕ್ಕೆ ತುಳಿದನು. ಈ ದಿನದಂದು ರಾಮ ಪ್ರಭುವು ಅಯೋಧ್ಯೆಯಲ್ಲಿ ರಾಜ್ಯಾಭಿಷಿಕ್ತಗೊಂಡನು.

ಮಾಸಗಳಲ್ಲಿ ವೈಶಾಖ, ಶ್ರಾವಣ, ಕಾರ್ತೀಕ, ಮಾಘ - ಇವು ವಿಷ್ಣುವಿಗೆ ಬಹು ಪ್ರೀತಿಯ ಮಾಸಗಳಾಗಿವೆ. ಸಾಪ್ತಾಹಿಕದ ಬುಧವಾರವು ವಿಷ್ಣುವಿನ ಮೆಚ್ಚಿಗೆಯ ವಾರವಾಗಿದ್ದು ಅಂದು ವಿಶೇಷ ಪೂಜನ ಸಲ್ಲಿಸುವರು. ಶುಭ್ರ ಬುಧವಾರ ವ್ರತವೂ ಒಂದಿದೆ. ಉಪವಾಸದಿಂದ ಶಾರೀರಿಕವಾಗಿ ಮಾನಸಿಕವಾಗಿ ನೆಮ್ಮದಿ ಲಭಿಸುತ್ತದೆ. ವಿಷ್ಣು ಸ್ಮರಣೆಯಿಂದ ಸಂತೃಪ್ತಿ ದೊರಕುತ್ತದೆ. ಅಧಿಕ ಮಾಸವು ವಿಷ್ಣುವಿಗೆ ಪ್ರೀತಿಯದಾಗಿದ್ದು ಅದನ್ನು ಪುರುಷೋತ್ತಮ ಮಾಸವೆಂದು ಕರೆಯುವರು.

ಜಯದೇವ ಗೀತಗೋವಿಂದ, ಮಹಾಭಾರತ ದೊಳಗಿನ ಕರ್ಮವಾದದ ಮೇಲೆ ಅರ್ಜುನನಿಗೆ ಶ್ರೀಕೃಷ್ಣನು ಉಪದೇಶಿಸಿದ ಗೀತೋಪನಿಷತ್ತು - ಹಿಂದೂಗಳಿಗೆ ಅಮೂಲ್ಯ ನಿಧಿಗಳು. ಮೂಲ ಸಂಸ್ಕೃತ ಗೀತೆಯನ್ನು ಜ್ಞಾನೇಶ್ವರರು ಮರಾಠಿಯಲ್ಲಿ ಅನುವಾದಿಸಿದ್ದು ಜ್ಞಾನೇಶ್ವರಿ ಕೃತಿಯು ಮಹಾರಾಷ್ಟ್ರದಲ್ಲಿ ಜನಪ್ರಿಯವಾಗಿದೆ. ಮೀರಾಬಾಯಿಯ ಹಿಂದಿ ಭಜನೆ, ತುಳಸಿದಾಸರ ತುಲಸೀ ರಾಮಾಯಣ, ಮಹಾರಾಷ್ಟ್ರದಲ್ಲಿಯ ಸಂತ ಜ್ಞಾನದೇವ, ತುಕಾರಾಮ, ನಾಮದೇವ, ಜನಾಬಾಯಿ, ಕರ್ನಾಟಕದ ಪುರಂದರದಾಸ, ಕನಕದಾಸ, ವ್ಯಾಸರಾಯರು, ವಿಜಯದಾಸ ಮೊದಲಾದ ಹರಿಭಕ್ತರ ಗೀತೆಗಳು ಮೊದಲಾಗಿ ವೈಷ್ಣವ ಪಂಥವು ಹಿಂದೂ ಧರ್ಮಕ್ಕೆ ನೀಡಿದ ಬಹು ಮುಖ್ಯ ದೇಣಿಗೆ ಎನಿಸಿದೆ.

★★★★★

# ಯೋಗಃ ಚಿತ್ತವೃತ್ತಿ ನಿರೋಧಃ

ಡಾ|| ವಿ. ಕೆ. ವಿಶ್ವೇಶ್ವರ.

ಉಪನಿಷತ್ತಿನಲ್ಲಿ ಒಂದು ಮಾತಿದೆ : 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಅಂತ. ಅಂದರೆ ಮನುಷ್ಯ ಜೀವಿಯ ಬಂಧನಕ್ಕೂ ಮೋಕ್ಷಕ್ಕೂ ಆತನ ಮನಸ್ಸೇ ಕಾರಣ. ಜೀವಾತ್ಮವು ಭವಬಂಧನದಲ್ಲಿ ಸಿಲುಕಿರುವುದೋ ಅಥವಾ ಸದ್ಗತಿಯತ್ತ ಚಲಿಸುವುದೋ ಎಂಬುದನ್ನು ನಿರ್ಧರಿಸುವುದು ಆ ಮನಸ್ಸು. ಮನುಷ್ಯನ ಮನಸ್ಸೆಂಬುದು ಒಂದು ಅದ್ಭುತವಾದ ಶಕ್ತಿಯ ಆಕರ. ಅದು ಎಂತೆಂಥ ಪವಾಡಗಳನ್ನೂ ಸಾಧ್ಯವಾಗಿಸಬಲ್ಲುದು. ಅದೇ ಮನಸ್ಸು ತೀರ ದುರ್ಬಲವಾಗಿ ವರ್ತಿಸಿ ಕ್ಷುಲ್ಲಕ ಸಾಂಸಾರಿಕ ಸಾಗರದ ತೆರೆಗಳಲ್ಲೇ ಮುಳುಗೇಳುತ್ತಿರಲೂ ಬಹುದು. ವ್ಯಕ್ತಿಯ ಜೀವಿತದ ಮೂಲ ಸಾಧನ ಮನಸ್ಸು.

ಮನಸ್ಸಿನ ನಾಶವಾದರೆ ಅಂದರೆ ಮನಸ್ಸು ಆ ಬೃಹತ್ ಚೈತನ್ಯದಲ್ಲಿ ಲೀನವಾದರೆ, ಮತ್ತೆ ಅದು ಹುಟ್ಟುವುದಿಲ್ಲ. ಮುಕ್ತಿಯೆಂದರೆ ಅದೇ, ಆದರೆ ಆ ಪ್ರಕ್ರಿಯೆಯು ಅಷ್ಟು ಸುಲಭವಲ್ಲ. ಮೊದಲಾಗಿ, ನಿರಂತರ ಯೋಚಿಸುತ್ತಲೇ ಇರುವ, ವಿವಿಧ ವಿಷಯಗಳಲ್ಲಿ ಎಡೆಬಿಡದೆ ಹರಿಯುತ್ತಲೇ ಇರುವ ಮನಸ್ಸನ್ನು ಒಂದೆಡೆ ಹಿಡಿದು ನಿಲ್ಲಿಸಬೇಕು. ಸತತ ಯೋಚನೆಯೇ ವೈಶಿಷ್ಟ್ಯವಾಗಿರುವ ಚಿತ್ತವನ್ನು ಒಂದು ರೀತಿಯ ನಿದ್ದೆಗೆ ಒಳಪಡಿಸಬೇಕು. ಮತ್ತೆ ಮನಸ್ಸು ಪರಮಶಕ್ತಿಯ ಕಡೆಗೆ ಕೇಂದ್ರೀಕೃತವಾಗಬೇಕು. ಅಂಥ ಸಾಧನೆಗೆ ನಮ್ಮ ಗ್ರಂಥಗಳು ಸೂಚಿಸುವ ಸಾಧನವೇ ಯೋಗ. ''ಯೋಗಃ ಚಿತ್ತವೃತ್ತಿ ನಿರೋಧಃ'' ಎಂಬ ಮಾತು ಧ್ವನಿಸುವುದು ಇದನ್ನೇ.

ಕ್ಷಿಪ್ತ, ಮೂಢ, ವಿಕ್ಷಿಪ್ತ, ಏಕಾಗ್ರ ಮತ್ತು ನಿರುದ್ಧ - ಹೀಗೆ ಐದು ಅವಸ್ಥೆಗಳು ಮನಸ್ಸಿನ ಬೆಳವಣಿಗೆಯಲ್ಲಿ - ಇವುಗಳಲ್ಲಿ ಕೊನೆಯ ಎರಡು - ಏಕಾಗ್ರ, ನಿರುದ್ಧ - ಯೋಗಸಾಧನೆಯಡಿ ಬರುತ್ತವೆ. ''ತಾಂ ಯೋಗಮಿತಿ ಮನ್ಯಂತೇ ಸ್ಥಿರಮಿಂದ್ರಿಯ ಧಾರಣಾಂ'' ಎಂಬ ಮಾತಿನಂತೆ ತನ್ನ ಇಂದ್ರಿಯಗಳನ್ನು ಬುದ್ಧಿಯ ಸ್ಥಿರ ಹಿಡಿತದಲ್ಲಿ ಇರಿಸಿಕೊಳ್ಳುವುದೇ ಯೋಗ. ಮನಸ್ಸಿನ ವ್ಯಾಪಾರ - ವ್ಯವಹಾರಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದೇ ಯೋಗ. ''ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ''



ಎಂದು ಗೀತಾಚಾರ್ಯನು ಹೇಳಿದಂತೆ, ಕಠಿಣವಾದ ಅಭ್ಯಾಸ ಮತ್ತು ಅಚಲವಾದ ವೈರಾಗ್ಯಗಳು ಯೋಗಸಾಧನೆಯ ಎರಡು ಅಂಗಗಳು. ಪತಂಜಲಿ ಮಹರ್ಷಿಯಿಂದ ಪ್ರವರ್ತಿಸಲ್ಪಟ್ಟ ಯೋಗದರ್ಶನವು ಭಾರತದ ಆರು ಆಸ್ತಿಕ ದರ್ಶನಗಳಲ್ಲಿ ಒಂದಾಗಿದೆ.

'ಯುಜ್ ಸಮಾಧೌ' ಎಂಬ ಧಾತುವಿನಿಂದ ಉತ್ಪತ್ತಿಯಾದ ಶಬ್ದ ಯೋಗ. ಅರ್ಥಾತ್ ಯೋಗವೆಂದರೆ ಸಮಾಧಿ. ಅಂತೆಯೇ 'ಯುಜಿರ್ ಯೋಗೇ' ಎಂಬ ವ್ಯುತ್ಪತ್ತಿಯನ್ನು ಪರಿಗಣಿಸಿದರೆ, ಯುಜನ ಅಥವಾ ಸೇರುವುದು ಎಂಬರ್ಥ ಬರುತ್ತದೆ. ಅಂದರೆ, ಜೀವಾತ್ಮ ಪರಮಾತ್ಮದೊಡನೆ ಸೇರುವುದು ಯೋಗ. ಆದರೆ, ಜೀವಾತ್ಮವು ಪರಮಾತ್ಮನ ಭಾಗವೇ ಆಗಿರುವುದರಿಂದ, ಇನ್ನಷ್ಟು ಸ್ಪಷ್ಟವಾಗಿ, ಜೀವಾತ್ಮಭಾವದ ನಾಶವಾಗಿ ಪರಬ್ರಹ್ಮ ಭಾವದ ಸ್ಥಿತಿ ಉಂಟಾಗುವುದೇ ಯೋಗ ಅಂತ ಹೇಳಬಹುದು. ಒಟ್ಟಿನಲ್ಲಿ ಭಕ್ತ - ಭಗವಂತನ ಮಿಲನವೇ ಯೋಗ.

ಇಂಥ ಯೋಗಕ್ಕೆ ಎಂಟು ಅಂಗಗಳು - ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ ಮತ್ತು ಸಮಾಧಿ ಅಂತ.

''ದೇಹೇಂದ್ರಿಯೇಷು ವೈರಾಗ್ಯಂ ಯಮ ಇತ್ಯುಚ್ಯತೇ ಬುಧೈಃ'' ಎಂಬ ಉಪನಿಷತ್ ಮಾತಿನಂತೆ ಶರೀರದ ಇಂದ್ರಿಯಗಳ ಕುರಿತಾದ ವೈರಾಗ್ಯವೇ ಯಮ. ಯಮಕ್ಕೆ ಐದು ಅಂಗಗಳು - ಅಹಿಂಸೆ, ಸತ್ಯ., ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ. 'ಅಹಿಂಸಾ ಪ್ರತಿಷ್ಠಾಯಾಂ ತತ್ಸನ್ನಿಧೌ ವೈರತ್ಯಾಗಃ' ಎಂಬಂತೆ ಅಹಿಂಸೆಯನ್ನಾಚರಿಸುವ ಯೋಗಿಯ ಸನ್ನಿಧಾನದಲ್ಲಿ ಹಾವು - ಮುಂಗುಸಿಗಳೂ ಸ್ವಭಾವತಃ ಇರುವ ದ್ವೇಷವನ್ನು ತ್ಯಜಿಸಿರುತ್ತವೆ. 'ಸತ್ಯಪ್ರತಿಷ್ಠಾಯಾಂ ಕ್ರಿಯಾಫಲಾಶ್ರಯತ್ವಂ' ಎಂಬ ನುಡಿಯಂತೆ ಸತ್ಯವನ್ನು ನುಡಿಯುವ ಯೋಗಿಗೆ ಯಜ್ಞವನ್ನಾಚರಿಸಿದ ಫಲವು ಲಭ್ಯವಾಗುತ್ತದೆ. ಪರಧನವನ್ನು ಅಪಹರಿಸದೆ ಅಸ್ತೇಯಗುಣವನ್ನು ರೂಢಿಸಿಕೊಂಡವನಿಗೆ ಇಚ್ಛಿತ ರತ್ನಸ್ವರೂಪಿ ವಸ್ತುಗಳೆಲ್ಲ ದೊರಕುತ್ತವೆ. ಆಸ್ತೇಯ ಪ್ರತಿಷ್ಠಾಯಾಂ ಸರ್ವರತ್ನೋಪಸ್ಥಾನಮ್ - ಕಾಮನೆಗಳ ನಿಯಂತ್ರಣದಿಂದ ಬ್ರಹ್ಮಚರ್ಯವನ್ನು ಸಾಧಿಸಿದರೆ ನಿಜವಾದ



ಅರ್ಥದಲ್ಲಿ ವೀರ್ಯಲಾಭವಾಗುತ್ತದೆ - 'ಬ್ರಹ್ಮಚರ್ಯಪ್ರತಿಷ್ಠಾಯಾಂ ವೀರ್ಯಲಾಭಃ' ಭೋಗಸಾಧನಗಳನ್ನು ಸಂಗ್ರಹಿಸದೇ ಇರುವುದೇ ಅಪರಿಗ್ರಹ. 'ಅಪರಿಗ್ರಹಪ್ರತಿಷ್ಠಾಯಾಂ ಜನ್ಮ ಕಥಂತಾ ಸಂಬೋಧಃ' ಎಂಬ ಮಾತಿನಂತೆ ಅಪರಿಗ್ರಹವನ್ನು ರೂಢಿಗೆ ತಂದವನಿಗೆ ಈ ಜನ್ಮವಲ್ಲದೆ ಹಿಂದಿನ ಮತ್ತು ಮುಂದಿನ ಜನ್ಮಗಳ ಬಗೆಗೂ ಅರಿವು ಉಂಟಾಗುತ್ತದೆ.

''ಅನುರಕ್ತಿಃ ಪರೇ ತತ್ತ್ವೇ ಸತತಂ ನಿಯಮಃ ಸ್ಮೃತಃ'' - ಪರಮ ತತ್ವದಲ್ಲಿ ಎಡೆಬಿಡದ ಅನುರಕ್ತಿಯೇ ನಿಯಮವೆಂದು ಕರೆಯಲ್ಪಡುತ್ತದೆ. ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ, ಈಶ್ವರ ಪ್ರಣಿಧಾನ - ಇವೈದು ವಿಷಯಗಳಿಂದ ನಿಯಮದ ಸಾಧನೆಯಾಗುತ್ತದೆ.

'ಸರ್ವವಸ್ತೂನ್ಯುದಾಸೀನಭಾವಮ್ ಆಸನಮುತ್ತಮಮ್' ಅಂದರೆ, ಅನಾತ್ಮವಸ್ತುಗಳ ಮೇಲೆ ಅಲಕ್ಷ್ಯಭಾವವನ್ನು ತಾಳುವುದಕ್ಕೆ ಉತ್ತಮ ಸಾಧನವಾಗಿ ಒದಗುವುದೇ ಆಸನ. ಧ್ಯಾನಾಭ್ಯಾಸಕ್ಕಾಗಿ ಸುಖಕರವಾದ ಮತ್ತು ಸ್ಥಿರವಾದ ಸಿದ್ಧಾಸನ, ಪದ್ಮಾಸನ, ಸಿಂಹಾಸನ, ಭದ್ರಾಸನಾದಿಗಳು ಸಹಾಯಕವಾಗುತ್ತವೆ.

ಉಚ್ಛ್ವಾಸ - ನಿಃಶ್ವಾಸಗಳ ಗತಿಯ ನಿಯಂತ್ರಣವನ್ನು ಪ್ರಾಣಾಯಾಮ ಎನ್ನುತ್ತಾರೆ. ವಾಯುವಿನ ಬೀಸುವಿಕೆಯಿಂದ ಬೆಂಕಿಯ ಸುತ್ತಲಿನ ಬೂದಿಯ ಘಟಕ ಮರೆಯಾಗಿ ಅದು ಪ್ರಜ್ವಲಿಸತೊಡಗುವ ರೀತಿಯಲ್ಲಿಯೇ ಪ್ರಾಣಾಯಾಮದಿಂದಾಗಿ ಯೋಗವು ತನ್ನ ಅಜ್ಞಾನಾಚ್ಛಾದಿತ ಕತ್ತಲೆಯನ್ನು ಕಳಚಿಕೊಂಡು ವಿವೇಕಯುತವಾಗಿ ಬೆಳಗತೊಡಗುತ್ತದೆ.

''ಚಿತ್ತಸ್ಯಾಂತರ್ಮುಖೀಭಾವಃ ಪ್ರತ್ಯಾಹಾರಸ್ತು ಸತ್ತಮ'' ಎಂಬ ವಾಣಿಯಂತೆ ಮನಸ್ಸು ಒಳಮುಖಿಯಾಗಿ ಚಲಿಸುವ ಪ್ರಕ್ರಿಯೆಯೇ ಪ್ರತ್ಯಾಹಾರ. ಶರೀರದ ಇಂದ್ರಿಯಗಳೆಲ್ಲ ತಂತಮ್ಮ ಗ್ರಹಿಕೆಗಳಿಂದ ಸಂಬಂಧವನ್ನು ಬಿಡಿಸಿಕೊಂಡು ಮನಸ್ಸಿನ ರೂಪದ ಅನುಕರಣೆಯನ್ನು ಮಾಡುವುದು ಪ್ರತ್ಯಾಹಾರದ ಸಾಧನೆಯ ಲಕ್ಷಣವಾಗಿರುತ್ತದೆ.

ಮನಸ್ಸನ್ನು ಒಂದು ಸ್ಥಾನದಲ್ಲಿ ಸ್ಥಿರವಾಗಿ ನಿಲ್ಲಿಸುವುದಕ್ಕೆ ಧಾರಣಾ ಎನ್ನುತ್ತಾರೆ. 'ಚಿತ್ತಸ್ಯ ನಿಶ್ಚಲೀಭಾವೋ ಧಾರಣಾ ಧಾರಣಂ ವಿದುಃ', 'ದೇಶಬಂಧಶ್ಚಿತ್ತಸ್ಯ ಧಾರಣಾ' ಎಂಬ ನುಡಿಗಳ ಪ್ರಕಾರ ಎತ್ತೆತ್ತಲೋ ಸುತ್ತುವ ಮನಸ್ಸೆಂಬ ಮರ್ಕಟವನ್ನು ಒಂದೇ ಕೇಂದ್ರದಲ್ಲಿ ನೆಲೆಗೊಳಿಸುವ ಸಾಧನೆಯೇ ಧಾರಣಾ.

ಧಾರಣಗೊಳಿಸಿದ ವಿಷಯದ ಕುರಿತಾಗಿ ಸತತವಾದ ಚಿಂತನೆಯೇ ಧ್ಯಾನ. ಧ್ಯಾನದ ಸಮ್ಯಕ್ ವಿಸ್ಮೃತಿಯೇ ಸಮಾಧಿ. 'ಧ್ಯಾನಸ್ಯ ವಿಸ್ಮೃತಿಃ ಸಮ್ಯಕ್ ಸಮಾಧಿ ರಭಿಧೀಯತೇ' ಎಂಬುದಾಗಿ ತ್ರಿಶಿಖಿ ಬ್ರಾಹ್ಮಣೋಪನಿಷತ್ ನಿರ್ವಚನ ನೀಡುತ್ತದೆ. ಅಂದರೆ, ಧ್ಯಾನದಲ್ಲಿ ಮುಳುಗಿದ ಮನಸ್ಸು ತನ್ನ ಇರುವಿಕೆಯನ್ನೇ ಮರೆತುಬಿಡುತ್ತದಲ್ಲ, ಆ ಸ್ಥಿತಿಯೇ ಸಮಾಧಿ, ಇದೇ ಯೋಗದ ಅಂತಿಮ ಅಂಗ.

ಸಂಸಾರೋತ್ತಾರಣೇ ಯುಕ್ತಿ
ಯೋಗಶಬ್ದೇನ ಕಥ್ಯತೇ
ಐಕ್ಯಂ ಜೀವಾತ್ಮನೋ ರಾಹು
ಯೋಗಂ ಯೋಗ ವಿಶಾರದಾಃ

ಯೋಗ ವಾಶಿಷ್ಠದಲ್ಲಿ ಬರುವ ಈ ಶ್ಲೋಕದ ಪ್ರಕಾರ ಸಂಸಾರದಿಂದ ಮೇಲಕ್ಕೇಳುವುದಕ್ಕೆ ಇರುವಂತಹ ಉಪಾಯವನ್ನೇ ಯೋಗವೆಂಬ ಶಬ್ದದಿಂದ ಕರೆಯಲಾಗುತ್ತದೆ. ಜೀವಾತ್ಮವು ಪರಮಸತ್ಯದ ಜತೆ ಲೀನವಾಗುವುದೇ ಯೋಗವೆಂದು ಗುರುತಿಸಲ್ಪಡುತ್ತದೆ. ಯೋಗಸಾಧನೆಯಿಂದ ಜೀವ, ಬ್ರಹ್ಮ - ಬಿಂಬ, ಪ್ರತಿಬಿಂಬಗಳಾಗುತ್ತವೆ.

ಶ್ರೀಮದ್ಭಾಗವತದಲ್ಲಿ ಹೇಳಿದಂತೆ -

ಯೋಗಾಸ್ತ್ರಯೋ ಮಯಾ ಪ್ರೋಕ್ತಂ
ನೃಣಾಂ ಶ್ರೇಯೋವಿಧಿತ್ಸಯಾ
ಜ್ಞಾನಂ ಕರ್ಮಂ ಚ ಭಕ್ತಿಶ್ಚ
ನೋಪಾಯೋಽಸ್ತಿ ಕರ್ಹಿಚಿತ್

ಮನುಷ್ಯನ ಶ್ರೇಯಸ್ಸಿನ ಸಾಧನೆಗೆ ಹೇಳಿರುವಂತಹ ಮೂರು ವಿಧದ ಯೋಗಗಳೆಂದರೆ - ಜ್ಞಾನಯೋಗ, ಕರ್ಮಯೋಗ ಮತ್ತು ಭಕ್ತಿಯೋಗ. ಯೋಗವನ್ನು ಬಿಟ್ಟರೆ ಮುಕ್ತಿ ಪಥದಲ್ಲಿ ಬೇರೆ ದಾರಿಗಳಿಲ್ಲ, ಉಪಾಯಗಳಿಲ್ಲ.

ಬುದ್ಧಿರ್ಯುಕ್ತೋ ಜಹಾತೀಹ
ಉಭೇ ಸುಕೃತದುಷ್ಕೃತೇ
ತಸ್ಮಾದ್ಯೋಗಾಯ ಯುಜ್ಯಸ್ವ
ಯೋಗಃ ಕರ್ಮಸು ಕೌಶಲಂ

''ಬುದ್ಧಿಯನ್ನು ಹೊಂದಿದ ಮನುಷ್ಯನು ವರ್ತಮಾನದಲ್ಲಿಯೇ ಪಾಪ ಮತ್ತು ಪುಣ್ಯಗಳ ಬಗೆಗೆ ನಿರ್ಲಿಪ್ತತೆಯನ್ನು ಹೊಂದುತ್ತಾನೆ. ಆದ್ದರಿಂದ ನೀನು, ಅಂತಹ ಬುದ್ಧಿಯ ಸಮತೆ ಅರ್ಥಾತ್ ಯೋಗವನ್ನು ಅನುಸರಿಸು. ಏಕೆಂದರೆ ಯೋಗವು ಕರ್ಮದಲ್ಲಿನ ಕುಶಲತೆಯೇ ಆಗಿದೆ'' ಎಂಬುದಾಗಿ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುವ ಮೂಲಕ ಯೋಗವೆಂದರೆ ತನ್ನ ಕರ್ತವ್ಯವನ್ನು ಕೌಶಲದಿಂದ ನಿಭಾಯಿಸುವುದೇ ಆಗಿದೆಯೆಂದು ಸ್ಪಷ್ಟಪಡಿಸುತ್ತಾನೆ. ಈ ಮಾತುಗಳನ್ನು 'ಕರ್ಮಗಳಲ್ಲಿ ಕುಶಲತೆಯೇ ಯೋಗ' ಮತ್ತು 'ಕರ್ಮಗಳಲ್ಲಿ ಯೋಗವೇ ಕುಶಲತೆ' - ಹೀಗೆ ಎರಡೂ ರೀತಿಯಲ್ಲಿ ಅರ್ಥೈಸಿಕೊಳ್ಳಲು ಸಾಧ್ಯವಿದೆ.

ಯೋಗಸ್ಥಃ ಕುರು ಕರ್ಮಾಣಿ
ಸಂಗಂ ತ್ಯಕ್ತ್ವಾ ಧನಂಜಯ
ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ
ಸಮತ್ವಂ ಯೋಗ ಉಚ್ಯತೇ

''ಎಲೈ ಧನಂಜಯನೇ, ನೀನು ಮೋಹವನ್ನು ತ್ಯಜಿಸಿ ಸಿದ್ಧಿ - ಅಸಿದ್ಧಿಗಳನ್ನು ಸಮವಾಗಿ ಪರಿಗಣಿಸುವ ಸಮಚಿತ್ತಸ್ಥಿತಿಯನ್ನು ಅರ್ಥಾತ್ ಯೋಗವನ್ನು ಅಭ್ಯಸಿಸು, ಆದರಿಸು'' ಎಂಬ ಶ್ರೀಕೃಷ್ಣನ ಮಾತು, ಯೋಗವೆಂದರೆ ಸಮಚಿತ್ತತೆ ಎಂಬ ಅತ್ಯಂತ ಸರಳವಾದ ಅರ್ಥವನ್ನು ನಮ್ಮೆದುರು ತೆರೆದಿಡುತ್ತದೆ. ಇಂದಿನ ದಿನಗಳಲ್ಲಿ ಯೋಗ ನಮಗೆ ಎಷ್ಟು ಅನಿವಾರ್ಯ ಎಂಬುದನ್ನು ಮನಕ್ಕೆ ತಂದುಕೊಳ್ಳಬಹುದು.





# ಶ್ರೀಕಾಳಹಸ್ತಿ



- ಅಣ್ಣಾಸ್ವಾಮಿ ಮೊದಲಿಯಾರ್.

ತಿರುಪತಿ - ತಿರುಮಲೆ ಜಗತ್ಪ್ರಸಿದ್ಧ ಯಾತ್ರಾಸ್ಥಳ. ಜಗತ್‌ಪಿತ, ಜಗನ್ನಾಥ, ಜಗದೀಶ್ವರ, ಜಗದ್ರಕ್ಷಕ, ಜಗದೋದ್ಧಾರಕ ಶ್ರೀ ವೆಂಕಟೇಶ್ವರಸ್ವಾಮಿಯ ದರ್ಶನ ಮಾತ್ರದಿಂದ ಕೋಟ್ಯಾನುಕೋಟಿ ಭಗವದ್ಭಕ್ತರು ಪುನೀತರಾಗುತ್ತಿದ್ದಾರೆ.

ಜಾಗ್ರತಕ್ಷೇತ್ರವಾದ ತಿರುಪತಿಯ ಆಸುಪಾಸಿನಲ್ಲಿ ಹಲವಾರು ಪುಣ್ಯಕ್ಷೇತ್ರಗಳು ಇವೆ. ಅವುಗಳಲ್ಲಿ ಕಾಳಹಸ್ತಿ ಹಾಗೂ ತಿರುತ್ತಣಿ ತೀರ್ಥಕ್ಷೇತ್ರಗಳು ಬಹು ಪ್ರಸಿದ್ಧವಾದವು. ಕಾಳಹಸ್ತಿ ಶಿವನ ಆವಾಸಸ್ಥಾನವಾದರೆ ತಿರುತ್ತಣಿ ಸುಬ್ರಹ್ಮಣ್ಯಕ್ಷೇತ್ರ.

ಕಾಳಹಸ್ತಿಯು ದಕ್ಷಿಣ ಕಾಶಿಯೆಂದು ಪ್ರಸಿದ್ಧವಾಗಿದೆ. ಬನಾರಸಿನ ಶಿವಾಲಯದ ಸಮೀಪದಲ್ಲಿ ಗಂಗಾನದಿಯು ಹರಿಯುತ್ತಿದ್ದರೆ ಪಾವನಕರ ಸ್ವರ್ಣಮುಖಿ ನದಿಯು ಕಾಳಹಸ್ತಿಯ ಸನಿಹದಲ್ಲಿ ಹರಿಯುತ್ತಿದೆ. ಇದು ಗಂಗೆಯಂತೆಯೇ ಜೀವನದಿ, ಎಲ್ಲ ಋತುಗಳಲ್ಲಿಯೂ ಈ ನದಿಯಲ್ಲಿ ನೀರು ಹರಿಯುವುದು. ಈ ನದಿಯು ಶಿವಾಲಯದ ಬಳಿ ದಕ್ಷಿಣದಿಂದ ಉತ್ತರ ದಿಕ್ಕಿಗೆ ಹರಿಯುತ್ತದೆ. ಆದ್ದರಿಂದಾಗಿ ಈ ನದಿಗೆ 'ಉತ್ತರವಾಹಿನಿ' ಎಂದೂ ಹೆಸರುಂಟು. ಮುಂದೆ ಉತ್ತರದಿಕ್ಕಿನಿಂದ ಪೂರ್ವಕ್ಕೆ ತಿರುಗಿ ಬಂಗಾಳ ಕೊಲ್ಲಿಯನ್ನು ಸೇರುತ್ತದೆ. ಕಾಶಿಯಲ್ಲಿ ಪಾವನತಮವಾದ ಗಂಗಾನದಿಯೂ ಶಿವಾಲಯದ ಬಳಿ ದಕ್ಷಿಣದಿಂದ ಉತ್ತರಕ್ಕೆ ಹರಿಯುತ್ತದೆ. ನಂತರ ಉತ್ತರ ದಿಕ್ಕಿನಿಂದ ಪೂರ್ವಕ್ಕೆ ತಿರುಗಿ ಬಂಗಾಳ ಕೊಲ್ಲಿಯನ್ನು ಸೇರುತ್ತದೆ. ಹೀಗಾಗಿ ಪುರಾಣಗಳಲ್ಲಿ ಸ್ವರ್ಣಮುಖಿ ನದಿಯನ್ನು ದಕ್ಷಿಣದ ಗಂಗೆಯೆಂದು ಕರೆಯುವರು.

ಗಂಗೆಯಲ್ಲಿ ಸ್ನಾನಮಾಡುವುದರಿಂದ ಪಾಪಗಳನ್ನು ಕಳೆದುಕೊಂಡಂತೆ ಸ್ವರ್ಣ ಮುಖಿಯಲ್ಲಿ ಸ್ನಾನಮಾಡಿ ಕಾಳಹಸ್ತೀಶ್ವರನ ದರ್ಶನ ಮಾಡಿ ಅನೇಕ ಮಂದಿ ಭಕ್ತರು ತಮ್ಮ ಪಾಪಗಳನ್ನು ತೊಳೆದುಕೊಂಡು ಪುನೀತ ರಾಗಿದ್ದಾರೆ. ಇಂದ್ರನು ಈ ನದಿಯಲ್ಲಿ ಸ್ನಾನಮಾಡಿ ಗೌತಮರ ಶಾಪವನ್ನು ಕಳೆದುಕೊಂಡನಂತೆ.

ಕಾಳಹಸ್ತಿಯ ಸುತ್ತಮುತ್ತ ಮೂವತ್ತಾರು ಪುಣ್ಯತೀರ್ಥಗಳಿದ್ದು ಭಕ್ತರ ಪಾಪ ವಿಮೋಚನೆ ಮಾಡುತ್ತಿವೆ. ಅವುಗಳಲ್ಲಿ ಮುಖ್ಯವಾದವು ಗಳೆಂದರೆ ಭಾರದ್ವಾಜತೀರ್ಥ, ಹರಿಹರ ತೀರ್ಥ, ಮಾರ್ಕಂಡೇಯ ತೀರ್ಥ, ಭೈರವ ತೀರ್ಥ, ಪಾತಾಳಗಂಗ, ಬ್ರಹ್ಮತೀರ್ಥ, ಸೂರ್ಯ ಪುಷ್ಕರಿಣಿ, ಚಂದ್ರ ಪುಷ್ಕರಿಣಿ, ಸಹಸ್ರಲಿಂಗತೀರ್ಥ - ಮೊದಲಾದವುಗಳು.

ಸ್ವರ್ಣ ಮುಖಿ ನದಿಯ ನೀರು ಸ್ಫಟಿಕದಂತೆ ತಿಳಿಯಾಗಿದ್ದು, ಹೊನ್ನಿನ ಕಣಗಳನ್ನು ಬೆಟ್ಟಗುಡ್ಡಗಳಿಂದ ಹೊತ್ತು ತರುವುದರಿಂದ ಸೂರ್ಯನ ಬೆಳಕಿನಲ್ಲಿ ಹೊನ್ನಿನ ಹೊಳೆಯಂತೆ ಹೊಳೆಯುತ್ತದೆ. ಸ್ವರ್ಣಮುಖಿಯೆಂದು ಹೆಸರು ಬರಲು ಇದೂ ಒಂದು ಕಾರಣವಾಗಿದೆ. ಆದರೆ





ಈ ಹೊನ್ನಿನ ಕಣಗಳನ್ನು ಬೇರ್ಪಡಿಸಲು ಅಪಾರವಾದ ಹಣ ಮತ್ತು ಶ್ರಮ ಅಗತ್ಯವಾಗಿರುವುದರಿಂದ ಯಾರೂ ಅಂತಹ ಪ್ರಯತ್ನ ಮಾಡಲಿಲ್ಲ.

ಸ್ವರ್ಣಮುಖಿ ನದಿಯ ಬಗ್ಗೆ ಅದರ ಜನನದ ಬಗ್ಗೆ ಒಂದು ಕತೆಯಿದೆ- ಪುರಾಣ ಪ್ರಸಿದ್ಧ ಕಾಳಹಸ್ತಿಯಲ್ಲಿ ಶಿವನು ಪಾರ್ವತೀಸಮೇತ ನೆಲೆಸಿದ ಮೇಲೆ ಸುತ್ತಲೂ ಇದ್ದ ಗಜಾರಣ್ಯದಲ್ಲಿ ಋಷಿಗಳು, ಶಿವಗಣಗಳು, ಆಶ್ರಮಗಳನ್ನು ಕಟ್ಟಿಕೊಂಡು ಯಜ್ಞ, ಯಾಗ, ವ್ರತ, ಶಿವಪೂಜೆಗಳಲ್ಲಿ ತೊಡಗಿದ್ದರು. ಸ್ನಾನ ಮಾಡಿ ತಮ್ಮ ದೇವತಾಕಾರ್ಯದಲ್ಲಿ ತೊಡಗಲು ಸಮೀಪದಲ್ಲಿ ನದಿಯಿರಲಿಲ್ಲ. ಕಾಡಿನಲ್ಲಿ ಬಹಳ ದೂರ ನೀರಿನಾಸರೆಗಾಗಿ ನಡೆದು ಹೋಗಬೇಕಾಗಿದ್ದಿತು. ಕಾಡಿನಲ್ಲಿ ಆನೆಗಳ ಹಿಂಡು ಹೆಚ್ಚಾಗಿದ್ದು, ದುಷ್ಟಮೃಗಗಳೂ ಇದ್ದವು. ಅಗಸ್ತ್ಯ ಮಹರ್ಷಿಯು ತಮ್ಮ ಪತ್ನಿ ಲೋಪಾಮುದ್ರೆಯೊಡನೆ ತೀರ್ಥಯಾತ್ರೆ ಮಾಡುತ್ತಾ ಕಾಳಹಸ್ತಿಗೆ ಬಂದು ಶಿವನ ದರ್ಶನ ಮಾಡಿ ಸಂತುಷ್ಟರಾಗಿ ಮುನಿಗಳ ಆಶ್ರಮಕ್ಕೆ ಭೇಟಿ ನೀಡಿದರು. ಮುನಿಗಳು ಅಗಸ್ತ್ಯರಿಗೆ ತಮ್ಮ ಕಷ್ಟಸುಖಗಳ ಬಗ್ಗೆ ತಿಳಿಸುತ್ತಾ ಹತ್ತಿರದಲ್ಲಿ ಸ್ನಾನಕ್ಕೆ ನದಿಯಿಲ್ಲದಿರುವ ಕೊರತೆಯನ್ನು ವಿವರಿಸುವರು. ಅಗಸ್ತ್ಯರು ವಿಂಧ್ಯಪರ್ವತಕ್ಕೆ ಹೋಗಿ ಘನಘೋರ ತಪಸ್ಸು ಮಾಡಿದರು. ಬ್ರಹ್ಮದೇವರು ಪ್ರತ್ಯಕ್ಷರಾದಾಗ ಕಾಳಹಸ್ತಿಯ ಬಳಿ ಗಂಗೆ ಹರಿಯಬೇಕೆಂಬ ತಮ್ಮ ಕೋರಿಕೆಯನ್ನು ಮುಂದಿಟ್ಟರು. ಬ್ರಹ್ಮದೇವರು ಗಂಗಾದೇವಿಗೆ ಕಾಳಹಸ್ತಿಯ ಬಳಿ ಹರಿದು ಶಿವನ ಪಾದಗಳನ್ನು ತೊಳೆದು ಪಾವನಳಾಗು ಎಂದು ಹೇಳುತ್ತಾರೆ. ಶಿವನನ್ನು ಅಗಲಿದ್ದ ಗಂಗೆಯು ಸಂತಸದಿಂದ ಇಳಿದು ಬಂದು ಸ್ವರ್ಣವರ್ಣದಿಂದ ಕಾಳಹಸ್ತಿಯನ್ನು ಸುತ್ತುವರಿದು ಹರಿದಳು. ಹೀಗೆ ದೇವಗಂಗೆಯು ಸ್ವರ್ಣಮುಖಿಯಾಗಿ ಕಾಳಹಸ್ತಿಯ ಸಮೀಪದಲ್ಲಿ ಹರಿಯುತ್ತಿದ್ದಾಳೆ.

ಪಂಚ ಭೂತಗಳ ಪ್ರಧಾನಾಂಶಗಳಾಗಿ ಪಂಚ ಶೈವಕ್ಷೇತ್ರಗಳಿವೆ. ಭೂಮಿ, ನೀರು, ಬೆಂಕಿ, ಗಾಳಿ, ಆಕಾಶಗಳಿಗನುಗುಣವಾಗಿ ಐದು ಶಿವಾಲಯಗಳಿವೆ. ಕಾಳಹಸ್ತಿಯಲ್ಲಿರುವ ಶಿವ ವಾಯುಸ್ವರೂಪಿ. ವಾಯುವಿನಿಂದ ಪೂಜಿಸಲ್ಪಟ್ಟವನು. ವಾಯುವನ್ನು ಪ್ರಧಾನಾಂಶವಾಗಿ ಉಳ್ಳವನು. ಈಗಲೂ ಗರ್ಭಗುಡಿಯಲ್ಲಿ ವಾಯುವಿನಿಂದ ಬೆಳಗಿಸಲ್ಪಟ್ಟ ಜ್ಯೋತಿ ಉರಿಯುತ್ತಿದೆ. ಈ ಜ್ಯೋತಿ ಸರ್ವದಾ ಗಾಳಿಗೊಡ್ಡಿದಂತೆ ವಿಚಲಿತವಾಗಿ ಉರಿಯುತ್ತಿದೆ. ಗರ್ಭಗುಡಿಯಲ್ಲಿ ಬೆಳಕಿಂಡಿಗಳಾಗಲೀ, ಕಿಟಕಿಗಳಾಗಲೀ ಇಲ್ಲದೆ ಹೋದರೂ ಜ್ಯೋತಿ ಅಲ್ಲಾಡುತ್ತಲೇ ಇರುವುದು, ನೆಟ್ಟಗೆ ನಿಲ್ಲುವುದೇ ಇಲ್ಲ. ಲಿಂಗದಿಂದಲೇ ಗಾಳಿಯು ಬರುತ್ತಿರುವುದೆಂಬ ನಂಬಿಕೆ ಪರಂಪರೆಯಾಗಿದೆ. ಆದ್ದರಿಂದ ಈ ಶಿವಲಿಂಗಕ್ಕೆ ವಾಯುಲಿಂಗವೆಂಬ ಹೆಸರು ಬಂದಿದೆ.

ಪಾಂಡವರಲ್ಲಿ ಒಬ್ಬನಾದ ಅರ್ಜುನನು ತೀರ್ಥಯಾತ್ರೆ ನಿಮಿತ್ತವಾಗಿ ಇತ್ತ ಬಂದಾಗ ಕಾಳಹಸ್ತಿಯ ಸಮೀಪದಲ್ಲಿದ್ದ ಕೈಲಾಸಗಿರಿಯ ಭಾರದ್ವಾಜ ಮುನಿಗಳ ಆಶ್ರಮಕ್ಕೆ ಬಂದು ಅವರನ್ನು ಸೇವಿಸಿದಾಗ ಅವರಿಂದ ಕಾಳಹಸ್ತಿಯ ಮಹಿಮೆಯನ್ನು, ಸ್ವರ್ಣಮುಖಿಯ ಮಹತ್ವವನ್ನು ತಿಳಿದು ಕಾಳಹಸ್ತಿ ಕ್ಷೇತ್ರದರ್ಶನ ಮಾಡಿದ ಬಗ್ಗೆ ಸ್ಕಂದ ಪುರಾಣದಲ್ಲಿ ವಿವರವಾಗಿ ತಿಳಿಸಲಾಗಿದೆ.

ಕಾಳಹಸ್ತಿಯ ಸಮೀಪದಲ್ಲಿರುವ ಬೆಟ್ಟದ ಮೇಲೆ ಕಣ್ಣಪ್ಪನ ದೇವಾಲಯವಿದೆ. ಹತ್ತಿರದ ಬೆಟ್ಟದ ಮೇಲೆ ದುರ್ಗಾದೇವಿ ಹಾಗೂ ಬ್ರಹ್ಮ ದೇವಾಲಯಗಳಿವೆ. ಸುಬ್ರಹ್ಮಣ್ಯ ದೇವಾಲಯವಿದೆ. ಶಿವಗಣಗಳು, ಮುನಿಗಳು, ಸ್ಥಾಪಿಸಿದ ಶಿವಲಿಂಗಗಳಿವೆ. ಋಷ್ಯಾಶ್ರಮಗಳಿವೆ. ಮಂಟಪಗಳಿವೆ.

ಕ್ಷತ್ರಿಯ ರಾಜನಾದ ವಿಶ್ವಾಮಿತ್ರನು ದೇವಲೋಕದ ಗೋಮಾತೆಗಾಗಿ ವಸಿಷ್ಠರೊಡನೆ ಯುದ್ಧಮಾಡಿ, ಋಷಿಯ ಮಕ್ಕಳನ್ನು ಕೊಂದುಹಾಕಲು, ದುಃಖ ಪೀಡಿತರಾದ ವಸಿಷ್ಠ ಮಹರ್ಷಿಗಳು ಶಿವನನ್ನು ಕುರಿತು ಹಲವು ವರ್ಷ ತಪಸ್ಸು ಮಾಡಿದರು. ಈಶ್ವರನು ಪ್ರತ್ಯಕ್ಷನಾದನು. ಐದು ಹೆಡೆಯ ನಾಗನಿಂದ ಆವೃತನಾಗಿರುವ ಪಂಚಮುಖ ನಾಗಲಿಂಗ ರೂಪದಲ್ಲಿ ಪ್ರಕಟನಾದ ಶಿವನನ್ನು ಕುರಿತು ವಸಿಷ್ಠರು ಹೇಳುವರು - ''ಸ್ವಾಮಿ; ನಾನು ಸದಾಕಾಲವೂ ನಿನ್ನ ಪೂಜೆ ಮಾಡಿ ಮುಕ್ತಿ ಪಡೆಯಬೇಕು. ಆದ್ದರಿಂದ ನೀನು ಇಲ್ಲಿಯೇ ನೆಲೆಸಬೇಕು.'' ವಸಿಷ್ಠರು ಕೇಳಿದ ವರವನ್ನು ಒಪ್ಪಿದ ಶಿವನು ಕಾಳಹಸ್ತಿಯಲ್ಲಿ ನೆಲೆಸಿದನು. ಈಶ್ವರನನ್ನು ಅನುಸರಿಸಿ ಪಾರ್ವತಿ, ಗಣೇಶ, ವೀರಭದ್ರ, ಸುಬ್ರಹ್ಮಣ್ಯ - ಮೊದಲಾದ ದೇವತೆಗಳು ಶಿವಗಣಗಳು ಬಂದು ನೆಲೆಸಿದರು. ಆದ್ದರಿಂದ ಈ ಕ್ಷೇತ್ರವು ದಕ್ಷಿಣ ಕಾಶಿಯೆಂದು ಪ್ರಸಿದ್ಧವಾಯಿತು. ಈ ಕ್ಷೇತ್ರದಲ್ಲಿ ಪಾರ್ವತಿಯು ಜ್ಞಾನ ಪ್ರಧಾನಳಾಗಿದ್ದು ''ಜ್ಞಾನಪ್ರಸೂನಾಂಬಿಕೆ'' ಎಂದು ಪ್ರಸಿದ್ಧಳಾಗಿದ್ದಾಳೆ.

ಶಿವನ ಮಹಿಮೆಗಳನ್ನು ವರ್ಣಿಸುವ ಶಿವಪುರಾಣದಲ್ಲಿ ಈ ಕ್ಷೇತ್ರದ ಬಗ್ಗೆ ಉಲ್ಲೇಖಗಳಿವೆ. ಶಿವನು ಎಂಟು ರೂಪದಲ್ಲಿ ಆವಿರ್ಭವಿಸಿದ ಎಂಬುದು ಪುರಾಣಪ್ರಸಿದ್ಧ. ಭೂಮಿಯ ರೂಪದಲ್ಲಿ 'ಶರ್ವ'ನೆಂದೂ ನೀರಿನ ರೂಪದಲ್ಲಿ 'ಭವ'ನೆಂದೂ ಅಗ್ನಿಯ ರೂಪದಲ್ಲಿ 'ರುದ್ರ'ನೆಂದೂ ಗಾಳಿಯ ರೂಪದಲ್ಲಿ 'ಉಗ್ರ'ನೆಂದೂ ಆಕಾಶರೂಪದಲ್ಲಿ 'ಭೀಮ'ನೆಂದೂ, - ಹೀಗೆಯೇ ತನ್ನ ಎಂಟು ರೂಪದಲ್ಲಿ ಅವತರಿಸಿದ್ದಾನೆ. ಈ ಎಂಟು ರೂಪದಲ್ಲಿ ಉಗ್ರ ಅಥವಾ ಗಾಳಿಯ ರೂಪದಲ್ಲಿ ಕಾಳಹಸ್ತಿಯಲ್ಲಿ ನೆಲೆಸಿದ್ದಾನೆ.

ಕಾಳಹಸ್ತಿಯ ಶಿವಲಿಂಗವು ನಾಗರೂಪದಲ್ಲಿರುವುದರಿಂದಲೂ, ನಾಗಲಿಂಗನಾಗಿ ನೆಲೆಸಿರುವುದರಿಂದಲೂ, ಈ ಕ್ಷೇತ್ರವು ರಾಹು-ಕೇತು ಕ್ಷೇತ್ರವೆಂದೂ ಪ್ರಸಿದ್ಧವಾಗಿದೆ. ರಾಹು ಅಥವಾ ಕೇತುವಿನ ಪೂಜೆ ಇಲ್ಲಿ ಮಾಡಿದರೆ ಅಧಿಕ ಪರಿಣಾಮಕಾರಿ ಎಂದು ಭಕ್ತಾದಿಗಳು ಇಲ್ಲಿ ರಾಹುಕೇತು ಪರಿಹಾರ ಪೂಜೆ ಮಾಡುವರು.

ಓಂಕಾರವು ಅ,ಉ,ಮ ಅಕ್ಷರಗಳಿಂದ ಉಂಟಾಗಿದೆ. ಈ ಪ್ರಣವಾಕ್ಷರ ಸ್ವರೂಪನು ಶಿವ. ಎಂದರೆ ಓಂಕಾರದಲ್ಲಿ ಶಿವನು ನೆಲೆಸಿದ್ದಾನೆ.

"ಓಂ ನಮಃ ಶಿವಾಯ" ಎಂಬ ಮಂತ್ರವನ್ನು ಶ್ರದ್ಧಾಭಕ್ತಿಗಳಿಂದ ಜಪಿಸಿದರೆ ಶಿವನ ಪೂರ್ಣಾನುಗ್ರಹಕ್ಕೆ ಪಾತ್ರರಾಗುವರು.

ಶ್ರೀ ಕಾಳಹಸ್ತೀಶ್ವರನೆಂಬ ಹೆಸರು ಈ ಕ್ಷೇತ್ರದಲ್ಲಿ ಶಿವನಿಗೆ ಹೇಗೆ ಬಂದಿತು ಎಂಬ ಬಗ್ಗೆ ಕಥೆಗಳಿವೆ.

ದೇವಲೋಕದ ಶಿಲ್ಪಿ ವಿಶ್ವಕರ್ಮನ ಮಗ ಊರ್ಣನಾಭನು ಶ್ರೇಷ್ಠಶಿಲ್ಪಿಯಾಗಿದ್ದನು. ಅವನಿಗೆ ವಿದ್ಯಾಗರ್ವವು ಅತಿಯಾಗಿದ್ದು ಎಲ್ಲರನ್ನೂ ಧಿಕ್ಕರಿಸುತ್ತಿದ್ದನು. ಬ್ರಹ್ಮದೇವನನ್ನು ಧಿಕ್ಕರಿಸಿ ಸೃಷ್ಟಿಗೆ ಪ್ರತಿಸೃಷ್ಟಿ ಮಾಡತೊಡಗಿದನು. ಇದರಿಂದ ಕೋಪಗೊಂಡ ಬ್ರಹ್ಮದೇವನು ಭೂಲೋಕದಲ್ಲಿನ ಗಜಾರಣ್ಯದಲ್ಲಿ ಜೇಡರ ಹುಳುವಾಗಿ ಹುಟ್ಟುವಂತೆ ಅವನಿಗೆ ಶಾಪನೀಡುವನು. ಊರ್ಣನಾಭನು ಗಜಾರಣ್ಯದಲ್ಲಿ ಶ್ರೀ ಎಂಬ ಹೆಸರಿನ ಜೇಡರ ಹುಳುವಾಗಿ ಬಿಲ್ವ ಗಿಡದ ಎಲೆಯ ಮರೆಯಲ್ಲಿ ನೆಲೆಸುವನು. ಒಬ್ಬ ಸನ್ಯಾಸಿಯು ದೇವರ ಪೂಜೆಗೆಂದು ಬಿಲ್ವದ ಪತ್ರೆಗಳನ್ನು ಕೀಳುವಾಗ ಜೇಡನು ಇದ್ದ ಎಲೆಯನ್ನೂ ಕಿತ್ತು ಬುಟ್ಟಿಯಲ್ಲಿ ಹಾಕಿಕೊಂಡು ಹೋಗಿ ಬಂದು ಸ್ವರ್ಣಮುಖಿ ನದಿಯಲ್ಲಿ ಬುಟ್ಟಿಯ ಸಹಿತನಾಗಿ ಮುಳುಗು ಹಾಕುವನು. ಸ್ವರ್ಣಮುಖೀನದಿಯ ನೀರಿನ ಸ್ಪರ್ಶವಾದಾಗ ಜೇಡರ ಹುಳುವಿಗೆ ತನ್ನ ಪೂರ್ವಜನ್ಮದ ನೆನಪು ಮರಳಿಬರುವುದು. ಸನ್ಯಾಸಿಯು ತಾನು ತಂದಿಟ್ಟ ಹೂವು ಮತ್ತು ಪತ್ರೆಗಳಿಂದ ಶಿವನನ್ನು ಅರ್ಚಿಸುತ್ತಾನೆ. ಆಗ ಜೇಡರ ಹುಳು ತಪ್ಪಿಸಿಕೊಂಡು ಲಿಂಗದ ಸಮೀಪದ ಮರವನ್ನೇರುತ್ತದೆ. ಶಿವಲಿಂಗವು ಮಳೆಗಾಳಿ ಬಿಸಿಲುಗಳಲ್ಲಿ ನೆರಳಿಲ್ಲದಿರುವುದನ್ನು ಕಂಡು ಮರುಗಿ ತನ್ನ ನೂಲಿನಿಂದ ಶಿವಲಿಂಗದ ಮೇಲೆ ದೇವಾಲಯದಂತೆ ಸುಂದರವಾಗಿ ಹೆಣೆಯುತ್ತಾನೆ. ಅವನ ಭಕ್ತಿ ಮತ್ತು ಕೌಶಲ್ಯಗಳಿಗೆ ಮರುಳಾದ ಶಿವನು ಅವನನ್ನು ಪರೀಕ್ಷಿಸಲು ಬೆಂಕಿಯನ್ನುಂಟುಮಾಡಿ ಅವನು ರಚಿಸಿದ್ದ ನೂಲಿನ ಆಲಯವನ್ನು ಸುಟ್ಟುಬಿಡುತ್ತಾನೆ. ಅತಿಯಾದ ದುಃಖದಿಂದ ಜೇಡನು ಪ್ರಲಾಪಿಸಲು ಶಿವನು ಪ್ರತ್ಯಕ್ಷನಾಗಿ ಏನು ವರಬೇಕು ಎಂದು ಕೇಳಲು ಜೇಡನು ಕೈವಲ್ಯ ಬೇಕು ಎನ್ನುವನು. ಶಿವನು ಅವನನ್ನು ತನ್ನಲ್ಲಿ ಐಕ್ಯ ಮಾಡಿಕೊಳ್ಳುವನು. ಅಂದಿನಿಂದ ಕಾಳಹಸ್ತೀಶ್ವರನಿಗೆ ಶ್ರೀಕಾಳಹಸ್ತೀಶ್ವರ ಎಂಬ ಹೆಸರಾಗುವುದು.

ಕೈಲಾಸದಲ್ಲಿ ಕಾಳನೆಂಬ ಸರ್ಪವು ಶಿವನ ಸೇವೆ ಮಾಡಿಕೊಂಡು ಅವನ ಪ್ರೀತಿಗೆ ಪಾತ್ರನಾಗಿದ್ದಿತು. ಒಂದು ದಿನ ಪಾತಾಳದಲ್ಲಿದ್ದ ತನ್ನಪ್ರಿಯೆಯನ್ನು ಕಾಣಲು ಹೋಗಿ ಮೈಮರೆತು ಮೂರನೆಯ ದಿನ ಶಿವನ ಸೇವೆಗೆ ತಡವಾಗಿ ಬರಲು, ಕೋಪಗೊಂಡ ಶಿವನು ಭೂಲೋಕದಲ್ಲಿನ ಗಜಾರಣ್ಯದಲ್ಲಿ ಹುಟ್ಟುವಂತೆ ಶಾಪವಿತ್ತನು. ಕಾಳನು ಪಾಶ್ಚಾತ್ತಾಪದಿಂದ ಕೂಡಿ, ಶಿವನ ಕೃಪೆಗೆ ಮತ್ತೆ ಪಾತ್ರನಾಗಬೇಕೆಂಬ ತವಕದಿಂದ ದಿನವೂ ಸ್ವರ್ಣಮುಖಿಯಲ್ಲಿ ಸ್ನಾನಮಾಡಿ ಮುತ್ತು ರತ್ನಗಳಿಂದ ಶಿವನನ್ನು ಪೂಜಿಸಿ, ಬಿಸಿಲು ಮಳೆ ಬೀಳದ ಹಾಗೆ ತನ್ನ ಹೆಡೆಯನ್ನು ತೆರೆದು ನೆರಳು ಓಡಿದು ರಾತ್ರಿಯ ವರೆಗೆ ಇದ್ದು ಹೋಗುತ್ತಿದ್ದನು.

ಕೈಲಾಸದಲ್ಲಿ ಹಸ್ತಿ ಎಂಬ ಶಿವಗಣದವನು ಒಬ್ಬನಿದ್ದನು. ಈತನು ಪರಮೇಶ್ವರನ ಆಪ್ತಸೇವಕ. ಒಂದು ದಿನ ಶಿವ ಪಾರ್ವತಿಯರು ಪ್ರಣಯದಲ್ಲಿದ್ದಾಗ ಈತನು ಅವರ ಶಯ್ಯಾಗೃಹವನ್ನು ಪ್ರವೇಶಿಸಿದನು. ಇದರಿಂದ ಕೋಪಗೊಂಡ ಪಾರ್ವತಿಯು ಭೂಲೋಕದ ಗಜಾರಣ್ಯದಲ್ಲಿ ಆನೆಯಾಗಿ ಹುಟ್ಟುವಂತೆ ಅವನನ್ನು ಶಪಿಸಿದಳು.

ಹಸ್ತಿಯು ಭೂಲೋಕದಲ್ಲಿ ಜನಿಸಿದರೂ ಪೂರ್ವಜನ್ಮದ ನೆನಪು ಇದ್ದಿತು. ಅವನು ಪ್ರತಿದಿನವೂ ಬ್ರಾಹ್ಮೀ ಮುಹೂರ್ತದಲ್ಲಿ ಸ್ವರ್ಣಮುಖಿ ನದಿಯಲ್ಲಿ ಸ್ನಾನಮಾಡಿ ತಾವರೆ ಹೂ, ಬಿಲ್ವ ಪತ್ರೆಗಳನ್ನುತಂದು ಶಿವಲಿಂಗವನ್ನು ಪೂಜಿಸುತ್ತಿದ್ದನು.

ಕಾಳನು ಹಸ್ತಿಯು ಪೂಜಿಸಿದ ಹೂವು ಎಲೆಗಳನ್ನು ತೆಗೆದುಹಾಕಿ ಶುದ್ಧಗೊಳಿಸಿ, ಮಣಿರತ್ನಗಳಿಂದ ಶಿವಲಿಂಗವನ್ನು ಪೂಜಿಸುತ್ತಿದ್ದನು. ಒಂದುದಿನ ಕಾಳನು ಹೊಂಚು ಹಾಕಿ ನೋಡಿ ಆನೆಗೆ ತಕ್ಕ ಪಾಠ ಕಲಿಸಬೇಕೆಂದು ಬಗೆದು ಸಣ್ಣ ಆಕಾರ ಪಡೆದು ಆನೆಯ ಸೊಂಡಿಲಿನಲ್ಲಿ ಸೇರಿಕೊಂಡು ಬಾಧೆ ಉಂಟು ಮಾಡಿದನು. ಇಬ್ಬರಿಗೂ ಸೆಣಸಾಟವಾಯಿತು. ನೋವು ತಾಳಲಾರದೆ ಹಸ್ತಿಯು ಶಿವಲಿಂಗದ ಬಳಿ ಬಂದು ಶಿವಧ್ಯಾನ ಮಾಡುತ್ತ ಅಸು ನೀಗಿತು.

ಈಶ್ವರನು ಪ್ರತ್ಯಕ್ಷನಾಗಿ ಕಾಳ ಮತ್ತು ಹಸ್ತಿಯರನ್ನು ಕೈಲಾಸಕ್ಕೆ ಕರೆದೊಯ್ದನು. ಇವುಗಳ ಜ್ಞಾಪಕಾರ್ಥವಾಗಿ ಗಜಚರ್ಮಾಂಬರ ಧಾರಿಯಾದನು. ಕಾಳನನ್ನು ಕೊರಳಿನಲ್ಲಿ ಧರಿಸಿದನು. ಹೀಗೆ ಶ್ರೀಕಾಳಹಸ್ತೀಶ್ವರನೆಂದು ಹೆಸರಾಯಿತು.

ಗಜಾರಣ್ಯದಲ್ಲಿ ಬೇಡರ ಕುಲದ ನಾಯಕ ನಾಗಿ ಕಣ್ಣಪ್ಪನೆಂಬುವವನಿದ್ದನು. ಒಂದು ದಿನ ಈತನು ತನ್ನ ಪರಿವಾರ ಸಮೇತನಾಗಿ ಬೇಟೆಗೆ ಹೊರಟನು. ಬೇಟೆ ನಡೆದಿರುವಾಗ ಕಣ್ಣಪ್ಪನು ತನ್ನಪರಿವಾರದಿಂದ ಬೇರೆಯಾಗಿ, ಬೇಟೆ ಸಿಗದೆ ದಾರಿತಪ್ಪಿ ನಡೆಯುತ್ತ ನಾಗಲಿಂಗವಿದ್ದ ಕಡೆಗೆ ಬಂದನು. ಲಿಂಗದ ಬಳಿಯಿದ್ದ ಬಿಲ್ವದ ಮರವನ್ನೇರಿ ಬೇಟೆಗಾಗಿ ಕಾಯುತ್ತ ಕುಳಿತನು. ನಿದ್ದೆ ಬಾರದಾಯಿತು. ಬೇಸರ ನೀಗಲೆಂದು ಬಿಲ್ವದ ಮರದ ಎಲೆಗಳನ್ನು ಕಿತ್ತು ಲಿಂಗದ ಮೇಲೆ ಎಸೆಯ ತೊಡಗಿದನು. ನಂತರ ಬೆಳಗಾದಾಗ ಲಿಂಗದ ಮೇಲಿನ ಭಕ್ತಿಯಿಂದ ಸ್ವರ್ಣ ಮುಖಿನದಿಯಲ್ಲಿ ಸ್ನಾನ ಮಾಡಿ ಲಿಂಗಕ್ಕೆ ನೈವೇದ್ಯ ಮಾಡಿ ತಾನೂ ಪ್ರಸಾದ ಸ್ವೀಕರಿಸಿದನು. ಇದು ದೈನಂದಿನ ವ್ಯವಹಾರ ವಾಯಿತು. ಅಲ್ಲಿನ ಅರ್ಚಕರಿಗೆ ಈ ತಂತು ಸರಿಹೋಗಲಿಲ್ಲ. ಶಿವನು ಕಣ್ಣಪ್ಪನೀಡಿದ ನಿವೇದನೆಯನ್ನು ಸ್ವೀಕರಿಸುವನೇ ಎಂಬುದು ಅವರ ಪ್ರಶ್ನೆ. ಒಂದು ದಿನ ಕಣ್ಣಪ್ಪನು ನೈವೇದ್ಯ ನೀಡಿದಾಗ ಶಿವನು ಸ್ವೀಕರಿಸಲಿಲ್ಲ, ಬದಲಿಗೆ ಲಿಂಗದ ಕಣ್ಣಿನಿಂದ ನೀರು ಸುರಿಯ ಹತ್ತಿತು. ಮುಗ್ಧ ಭಕ್ತನು ಕಣ್ಣಪ್ಪ ತನ್ನ ಕಣ್ಣನು ಬಾಣದಿಂದ ಹೆಕ್ಕಿ ತೆಗೆದು ಲಿಂಗಕ್ಕೆ ಅರ್ಪಿಸಿದ. ಸುರಿಯುತ್ತಿದ್ದ ಕಣ್ಣೀರು ನಿಂತಿತಾದರೂ ಮತ್ತೊಂದು ಕಣ್ಣಿನಿಂದ ನೀರೂರಲು ಆರಂಭವಾಯಿತು. ಕಣ್ಣಪ್ಪನು ತನ್ನ ಮತ್ತೊಂದು ಕಣ್ಣನ್ನು ತೆಗೆದು ನಿವೇದಿಸಿದ. ಭಕ್ತಿಗೆ ಮೆಚ್ಚಿದ ಶಿವನು ಕಣ್ಣಪ್ಪನಿಗೆ ಮುಕ್ತಿಯನ್ನು ಪ್ರದಾನಿಸಿದ.

## ಸಪ್ತಗಿರಿ

### ಬರಹಗಾರರಿಗೆ ಸೂಚನೆ

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಲ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತುವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು. ತಮಿಳು, ಹಿಂದಿ, ಆಂಗ್ಲಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಆಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು,**

ಸಪ್ತಗಿರಿ,
ತಿ.ತಿ. ದೇವಸ್ಥಾನಗಳು, ತಿರುಪತಿ - 517507,
ಚಿತ್ತೂರು ಜಿಲ್ಲೆ, ಆಂ.ಪ್ರ.

ಕಣ್ಣಪ್ಪನು ಪೂರ್ವ ಜನ್ಮದಲ್ಲಿ ಪಾಂಡವರಲ್ಲನು ಅರ್ಜುನ. ಪಾಶುಪತಾಸ್ತ್ರಸಂಗ್ರಹದ ಮೊದಲು ಪಾರ್ಥನು ಶಿವನೊಡನೆ ಯುದ್ಧಮಾಡುತ್ತಾನೆ. ಅವನ ಪರಾಕ್ರಮ ಕಂಡು ಬೆರಗಾದ ಪಶುಪತಿಯು ಪಾಶುಪತಾಸ್ತ್ರ ನೀಡಿದ್ದೇ ಅಲ್ಲದೆ ಕಲಿಯುಗದಲ್ಲಿ ಅರ್ಜುನನು ಬೇಡರ ಕಣ್ಣಪ್ಪನಾಗಿ ಹುಟ್ಟಿದಾಗ ಮುಕ್ತಿಯನ್ನು ನೀಡುವುದಾಗಿ ಮಾತು ಕೊಟ್ಟಿದ್ದನೆಂದೂ ಪ್ರತೀತಿಯುಂಟು.

ಇಂತಹ ಪುರಾಣಪ್ರಸಿದ್ಧ ಕಾಳಹಸ್ತಿಯು ಚಿತ್ತೂರು ಜಿಲ್ಲೆಯಲ್ಲಿದೆ. ಕಾಳಹಸ್ತಿಗೆ ಹೋಗಲು ಚೆನ್ನೈ, ಗೂಡೂರು, ನೆಲ್ಲೂರು, ಕಡಪ, ಚಿತ್ತೂರು, ಬೆಂಗಳೂರು - ಮೊದಲಾದ ಕಡೆಗಳಿಂದ ಬಸ್‌ಗಳಿವೆ.

ಬಹಳ ಹಿಂದೆ ಪಲ್ಲವ ರಾಜರು ಕಾಳಹಸ್ತೀಶ್ವರ ದೇವಾಲಯ ನಿರ್ಮಾಣ ಮಾಡಿದರು. ನಂತರ ತೊಂಡಮಾನನು ದುರಸ್ತಿಗೊಳಿಸಿದ್ದೇ ಅಲ್ಲದೆ ವಿಸ್ತರಿಸಿದನು. ಕ್ರಿ.ಶ. 13 ನೇ ಶತಮಾನದಲ್ಲಿ ಚೋಳರ ಕಾಲದಲ್ಲಿ ಈ ದೇವಾಲಯದ ಮುಖ್ಯ ಭಾಗಗಳ ನಿರ್ಮಾಣವಾಯಿತು. ಯಾದವರಾಯನೆಂಬ ದೊರೆಯು ಹೊರಪ್ರಾಕಾರ ಹಾಗೂ ನಾಲ್ಕು ಗೋಪುರಗಳನ್ನು ನಿರ್ಮಿಸಿದನು. ಕ್ರಿ.ಶ. 1516 ರಲ್ಲಿ ವಿಜಯನಗರದ ರಾಜ ಕೃಷ್ಣದೇವರಾಯನು 120 ಅಡಿ ಎತ್ತರದ ಗೋಪುರವನ್ನೂ, ಸಾವಿರಕಾಲು ಮಂಟಪವನ್ನೂ ಕಟ್ಟಿಸಿದನು. ನಂತರದ ರಾಜ ಅಚ್ಯುತರಾಯನು ಕ್ರಿ.ಶ. 1529 ರಲ್ಲಿ ಕಾಳಹಸ್ತಿಯ ಸನ್ನಿಧಿಯಲ್ಲಿ ಪಟ್ಟಾಭಿಷೇಕ ಮಾಡಿಸಿಕೊಂಡನು. ಈತನು ಆಲಯವನ್ನು ಅಭಿವೃದ್ಧಿ ಪಡಿಸಿದನು. ಕ್ರಿ.ಶ. 1912 ರಲ್ಲಿ ದೇವಕೋಟೆಯ ನಟ್ಟುಕೋಟ್ಟೈ ಚೆಟ್ಟಿಯಾರ್ ತನ್ನ ಸ್ವಂತ ಸಂಪತ್ತಿನಲ್ಲಿ ಒಂಭತ್ತು ಲಕ್ಷ ರೂಪಾಯಿಗಳನ್ನು ವೆಚ್ಚಮಾಡಿ ಕಾಳಹಸ್ತಿ ದೇವಾಲಯದ ಜೀರ್ಣೋದ್ಧಾರ ಮಾಡಿದನು.

ಶಂಕರಾಚಾರ್ಯರು ತಮ್ಮ ಶಿವಾನಂದ ಲಹರಿಯಲ್ಲಿ ಬೇಡರ ಕಣ್ಣಪ್ಪನ ಬಗ್ಗೆ ಹೇಳಿದ್ದಾರೆ. ಕಾಳಹಸ್ತಿ ಕ್ಷೇತ್ರಕ್ಕೆ ಆಗಮಿಸಿದ್ದ ಶಂಕರಾಚಾರ್ಯರು ''ಜ್ಞಾನ ಪ್ರಸೂನಾಂಬಿಕಾ'' ದೇವಾಲಯದಲ್ಲಿ ಶ್ರೀಚಕ್ರ ಪ್ರತಿಷ್ಠಾಪನೆ ಮಾಡಿದ್ದಾರೆ. ಕಾಳಹಸ್ತಿ ದೇವಾಲಯದಲ್ಲಿ ಸ್ಫಟಿಕ ಲಿಂಗವನ್ನೂ ಪ್ರತಿಷ್ಠಾಪನೆ ಮಾಡಿರುವರು.

ತೆಲುಗಿನಲ್ಲಿ ಶ್ರೀಕಾಳಹಸ್ತೀಶ್ವರ ಶತಕಮು - ಶತಕ ಕಾವ್ಯವನ್ನು ಬರೆದ ಮಹಾಕವಿ ಧೂರ್ಜಟಿ - ಸ್ಥಳದ ಮಹಾತ್ಮೆಯನ್ನು ಕೊಂಡಾಡಿದ್ದಾನೆ. ರಾಮಲಿಂಗಸ್ವಾಮಿಗಳೂ, ಪಟ್ಟಿನತ್ತಾರರೂ ತಮ್ಮ ಹಾಡುಗಳಲ್ಲಿ ಕಾಳಹಸ್ತಿಯನ್ನು ಬಗೆ ಬಗೆಯಾಗಿ ವರ್ಣಿಸಿದ್ದಾರೆ. ತಮಿಳಿನ ಪುರಾತನರಲ್ಲಿ ಹೆಸರಾದ ನಾಯನ್ಮಾರರು - ಸಂಬಂಧರ್, ಮಾಣಿಕ್ಯವಾಚಕರ್ ಸುಂದರರ್, ಅಪ್ಪರ್ ಅವರು ತಮ್ಮ ತೇವಾರಗಳಲ್ಲಿ ಸ್ವಾಮಿಯ ದಿವ್ಯದರ್ಶನವನ್ನು ಕುರಿತು ಹೇಳಿದ್ದಾರೆ.

ಕ್ರಿ.ಪೂ. 3 ನೇ ಶತಮಾನದಲ್ಲಿದ್ದ ಪಾಂಡ್ಯರಾಜ್ಯದಲ್ಲಿದ್ದ ಕವಿ ನಕ್ಕೀರಾರ್ ತಮಿಳಿನಲ್ಲಿ ಕಾಳಹಸ್ತೀಶ್ವರನನ್ನು ಕುರಿತು ನೂರು ಹಾಡುಗಳನ್ನು ಬರೆದಿದ್ದಾನೆ.

ಕಾಳಹಸ್ತೀಶ್ವರ ದೇವಾಲಯದಲ್ಲಿ ಆಗಮೋಕ್ತ ಅರ್ಚನೆ [illegible] ಬೆಳಗಿನಿಂದ ಸಂಜೆಯವರೆಗೆ ನಡೆಯುತ್ತವೆ. ಪ್ರತಿದಿನವೂ ಪಂಚಕಾಲ ಅಭಿಷೇಕವನ್ನು ಆಗಮೋಕ್ತವಾಗಿ ಮಾಡುವರು.

ನಾಗಲಿಂಗಕ್ಕೆ ಮಹಾಶಿವರಾತ್ರಿಯ ಸಮಯದಲ್ಲಿ ಬ್ರಹ್ಮೋತ್ಸವ ನಡೆಯುತ್ತದೆ. ನವರಾತ್ರಿಯ ಸಮಯದಲ್ಲಿ ಜ್ಞಾನ ಪ್ರಸೂನಾಂಬಿಕೆಯ ಉತ್ಸವಗಳು ನಡೆಯುವುವು.

ಸಂಕ್ರಾಂತಿ ಹಾಗೂ ಮಹಾಶಿವರಾತ್ರಿ ಸಂದರ್ಭಗಳಲ್ಲಿ ಇಲ್ಲಿ ಗಿರಿಪ್ರದಕ್ಷಿಣೆ ಉತ್ಸವವು ನಡೆಯುತ್ತವೆ.

ಸ್ವರ್ಣಮುಖಿ ನದಿಯಲ್ಲಿ ಸ್ನಾನಮಾಡಿ ಶ್ರೀಕಾಳಹಸ್ತೀಶ್ವರ ಮತ್ತು ಜ್ಞಾನ ಪ್ರಸೂನಾಂಬಿಕಾ ಅಮ್ಮನವರ ದರ್ಶನ ಪೂಜೆ ಮಾಡಿದವರಿಗೆ ಸುಖ, ಶಾಂತಿ, ಸಂಪತ್ತು, ಸಂತೋಷ ಸಮೃದ್ಧಿ ಪ್ರಾಪ್ತವಾಗುವುವೆಂದು ಪುರಾಣ ಇತಿಹಾಸಗಳು ಹೇಳುತ್ತವೆ. ಲಕ್ಷೋಪಲಕ್ಷ ಭಕ್ತರು ಶ್ರೀಕಾಳಹಸ್ತೀಶ್ವರನ ದರ್ಶನವನ್ನು ಪ್ರತಿದಿನ ವಾರ ಮಾಸ ವರ್ಷಗಳಲ್ಲಿ ಪಡೆಯುತ್ತಿದ್ದಾರೆ.

★★★★★

# ಭಕ್ತಿಮಾರ್ಗ ಪ್ರಸಾರದ - ಶ್ರೀ ವ್ಯಾಸರಾಜರು

- ಹಣಮಂತ ತಾಸಗಾಂವಕರ.

ಸ್ಮರಿಸೈ ಸತತವು ಸಂಸ್ಮರಿಸೈ ಸತತವು
ಯತಿಗಣ ಭೂಷಣ ವ್ಯಾಸಯತೀಂದ್ರರ

ವಿಜಯನಗರ ಸಾಮ್ರಾಟರುಗಳ ಮುಕುಟಗಳಲ್ಲಿಯ ನವರತ್ನ ಕಾಂತಿಯಿಂದ ಪ್ರಕಾಶಗೊಂಡ ಪಾದತಲವುಳ್ಳವರಾದ ವ್ಯಾಸರಾಜರು ಸರ್ವಶಾಸ್ತ್ರ ಪಾರಂಗತರು. ವಿಷ್ಣು ಸಂಹಿತೆ ಎಂದೇ ಗಣಿಸಲ್ಪಟ್ಟ ಶ್ರೇಷ್ಠ ಗ್ರಂಥ ರಚನಾಕಾರರು. ತಾರ್ಕಿಕಾಗ್ರೇಸರುಗಳನ್ನೆಲ್ಲ ವಾಕ್ಯಾರ್ಥದಲ್ಲಿ ಸೋಲಿಸಿ ಮಧ್ವಮುನಿತ್ರಯರಲ್ಲಿಯ ಚಿಂತಾಮಣಿ ಸ್ವರೂಪರು.

ದಾಸಸಾಹಿತ್ಯ ಪರಂಪರೆಯನ್ನು ಬೆಳೆಸಿದವರು. ಮುನ್ನಡೆಸಿದವರು. ಸಂಘಟಕರು. ನಿರ್ಮಾತರು. ಪುರಂದರ ಕನಕ ದಾಸರಂಥವರ ಮಾರ್ಗದರ್ಶಿಗಳು. ''ಸಾಸಿರ ಜಿಹ್ವೆಗಳುಳ್ಳ ಶೇಷನೇ ಕೊಂಡಾಡಬೇಕು ವ್ಯಾಸ ಮುನಿರಾಯರ ಸನ್ಯಾಸದಿರವ'' ಎಂದು ಹೃದಯಂಗಮವಾಗಿ ಸ್ತುತಿಸಿರುವರು.

**ವಾಕ್‌ಸಿದ್ಧಿಯ ಬ್ರಹ್ಮಣ್ಯತೀರ್ಥಗುರು**

ವ್ಯಾಸರಾಜರ ಜನನವೂ ಕೂಡ ಕೌತುಕದ್ದೇ. ಮೈಸೂರು ಸೀಮೆಯ ಕಾವೇರಿ ತೀರದ ಒಂದು ಗ್ರಾಮ ಬನ್ನೂರು. ಈ ಗ್ರಾಮದ ಕಾಶ್ಯಪ ಗೋತ್ರದ ಸದಾಚಾರಿ ಬ್ರಾಹ್ಮಣ ರಾಮಾಚಾರ್ಯರು. ಅನುಕೂಲೆ, ಸುಶೀಲೆಯಾದ ಮಡದಿ ಲಕ್ಷ್ಮಿಬಾಯಿ. ಪಾಠಪ್ರವಚನ ಹೋಮಹವನಾದಿಗಳಿಂದ, ದಾನಧರ್ಮಗಳಿಂದ ಪುಣ್ಯಕಾರ್ಯ ಕೈಕೊಳ್ಳುತ್ತ ವಿಪ್ರಜೀವನವನ್ನು ಸಾರ್ಥಕಮಾಡಿಕೊಳ್ಳುತ್ತಿದ್ದರು. ಆದರೆ ಇವರಿಗೆ ಮಕ್ಕಳಿಲ್ಲದ ಕೊರಗು, ವಯಸ್ಸು ಕಳೆಯುತ್ತಿತ್ತು. ಅನ್ಯೋನ್ಯವಾಗಿದ್ದ ದಂಪತಿಗಳು ಪ್ರತಿ ನಿತ್ಯ ಅಲ್ಲಿಯ ದೇವಾಲಯ ಪ್ರಾಂಗಣದಲ್ಲಿಯ, ಮಹರ್ಷಿ ಬ್ರಹ್ಮಣ್ಯತೀರ್ಥರ ಪ್ರವಚನಕ್ಕೆ ಹೋಗುತ್ತಿದ್ದರು.

ಹೀಗಿರುತ್ತಿರಲಾಗಿ ಒಂದು ದಿನ ಪತಿ ರಾಮಾಚಾರ್ಯರು ಮರಣ ಹೊಂದಿದರು. ಸಾಧ್ವಿ ಲಕ್ಷ್ಮೀಬಾಯಿ ಅತ್ತೂ ಕರೆದು ಹೈರಾಣಾಗಿ ಪತಿಯೊಡನೆ ತಾನೂ ಸಹಗಮನ ಕೈಕೊಳ್ಳುವುದಾಗಿ ನಿಶ್ಚಯಿಸಿ ನೆರೆದ ಹಿರಿಯರನ್ನು ಕೇಳಿದಳು. ಅವರು ಮಹರ್ಷಿಗಳತ್ತ ದಾರಿ ತೋರಿದರು. ಏನೂ ಅರಿಯದ ಸಾತ್ವಿಕಳಾದ ಹೆಂಡತಿ ಲಕ್ಷ್ಮಿಬಾಯಿ - ಮಹರ್ಷಿ





ಬ್ರಹ್ಮಣ್ಯತೀರ್ಥರಿಗೆ ಸಾಷ್ಟಾಂಗವೆರಗಿದಳು. ಪಾಪಲೋಕದಲ್ಲೇ ಮೈಮರೆತಿದ್ದ ಮಹರ್ಷಿಗಳು, ಸಹಜವಾಗಿ ''ದೀರ್ಘಸುಮಂಗಲೀಭವ'' ಎಂದು ಬಿಟ್ಟರು. ಅವರ ಆಶೀರ್ವಾದದಿಂದ ಚಕಿತಳಾದ ಮಹಿಳೆ, ಸ್ವಾಮೀ ನಾನು ಸಹಗಮನಕ್ಕೆ ಹೊರಟಿರುವೆ ಎಂದಳು - ಅತಿ ದುಃಖಿತಳಾಗಿ. ಅಂತಃಕರುಣೆ, ವಾತ್ಸಲ್ಯಭರಿತದಿಂದ ಶ್ರೀಗಳು - ನನ್ನ ಬಾಯಿಂದ ಆ ನಮ್ಮ ಸ್ವಾಮಿಯು ಹೀಗೆ ನುಡಿಸಿದ್ದಾನೆ. ನಡೆ ನೋಡೋಣವೆಂದು ಬಿರ ಬಿರನೆ ನಡೆದರು. ನೆರೆದ ಜನತೆಗೆಲ್ಲಾ ಕೌತುಕ, ಶವದರ್ಶನ ಸನ್ಯಾಸಿಗಳಿಗೆ ನಿಷಿದ್ಧ. ಆದರೂ ಸ್ವಾಮಿಯಾಜ್ಞೆ, ಶವ ವಾಹಕರನ್ನು ಕೂಗಿ ನಿಲ್ಲಿಸಿದರು.

ಸಂಜೀವಿನಿಯ ಸ್ತುತಿ ಮಾಡುತ್ತ ಕಮಂಡಲೊಳಗಿನ ತೀರ್ಥೋದಕ ಸಿಂಪಡಿಸಿದರು. ಜನರೆಲ್ಲ ಉಸಿರು ಬಿಗಿ ಹಿಡಿದು ನೋಡುತ್ತಿದ್ದಂತೆಯೇ ಆಶ್ಚರ್ಯಕರ ಘಟನೆ ಜರುಗಿತು. ಶವವಾಗಿದ್ದ ರಾಮಾಚಾರ್ಯರು ನಿದ್ರೆಯಿಂದ ಎದ್ದಂತೆ ಎಚ್ಚರಗೊಂಡವರಾಗಿ ಸುತ್ತೆಲ್ಲ ಕಣ್ಣಾಡಿಸಿದರು. ಪರಿಸ್ಥಿತಿಯ ಅರ್ಥವಾಗಿ ಎದುರಿಗಿದ್ದ ಬ್ರಹ್ಮಣ್ಯತೀರ್ಥರಿಗೆ ವಂದಿಸಿದರು. ಅತಿ ಸಂತೋಷಗೊಂಡ ಪತ್ನಿ ಲಕ್ಷ್ಮೀ ಬಾಯಿಯೂ ಶ್ರೀಗಳ ಕಾಲುಗಳನ್ನು ಗಟ್ಟಿಯಾಗಿ ಹಿಡಿದು, ಆನಂದ ಭಾಷ್ಪ ಸುರಿಸಿದಳು. ಪತಿ - ಪತ್ನಿಯರು ಶ್ರೀಗಳನ್ನು ಪ್ರತ್ಯಕ್ಷದೇವರಂತೆ ಕಂಡು ಅವರ ಪಾದಗಳಲ್ಲಿ ಹೊರಳಾಡಿದರು. ವಾತ್ಸಲ್ಯದಿಂದ ಶ್ರೀಗಳು ಅವರನ್ನು ಆಶೀರ್ವದಿಸುತ್ತ, ದಿಗ್ಗಜರಾದ ಸುಪುತ್ರರನ್ನು ಪಡೆಯುವಿರಿ, ಎಂದು ಮೈದಡವಿ ಎಬ್ಬಿಸಿದರು. ಶ್ರೀ ಶ್ರೀಗಳ ಹರಕೆ ಹುಸಿಯಾಗುವುದೇ. ಕಾಲಾನಂತರ ಜನಿಸಿದವರೇ, ಬ್ರಹ್ಮಣ್ಯತೀರ್ಥರ ಅನುಗ್ರಹ ಹೊಂದಿದ ವ್ಯಾಸರಾಜರು. ಇವರು 22 ರ ಏಪ್ರಿಲ್ 1447 ರಂದು ಜನಿಸಿದರು. ಅತ್ಯಂತ ಸುಂದರ, ಏಕಪಾಠಿ. ಸೂಕ್ಷ್ಮಗ್ರಾಹಿಯಾಗಿದ್ದ ಬಾಲ ವ್ಯಾಸರು ಉಪವೀತರಾಗಿ ಬ್ರಹ್ಮವರ್ಚಸ್ಸಿನಿಂದ ಕಂಗೊಳಿಸ ಹತ್ತಿದರು. ಅಂದಿನ ಪದ್ಧತಿಯಂತೆ ಶಿಕ್ಷಣಕ್ಕಾಗಿ ಗುರುಕುಲವಾಸಗೈದರು.

ಸರ್ವ ಶಾಸ್ತ್ರಗಳನ್ನೂ ಕರತಲಾಮಕ ಮಾಡಿಕೊಂಡು ವಿದ್ಯಾಸಂಪನ್ನರಾದರು. ಇವರ ಏಳ್ಗೆಯನ್ನು ಗಮನಿಸುತ್ತಿದ್ದ ಬ್ರಹ್ಮಣ್ಯತೀರ್ಥರು ವ್ಯಾಸರಾಜರನ್ನು ಮಾತಿನಂತೆ ತಮಗೊಪ್ಪಿಸಲು, ಬನ್ನೂರಲ್ಲಿಯ ಅವರ ಮಾತಾಪಿತೃಗಳನ್ನು ಆಮಂತ್ರಿಸಿದರು. ವಿದ್ಯಾವಿನಯ, ಗಾಂಭೀರ್ಯ, ವಟು ವಾಮನ ಮೂರ್ತಿಯನ್ನು ಪ್ರೇಮ ಪೂರ್ವಕ ಆಶೀರ್ವದಿಸಿದರು. ಪರಮಹಂಸ ಲಕ್ಷಣವಾದ ಚತುರ್ಥಾಶ್ರಮವನ್ನು ವಿಧಿಪೂರ್ವಕ ನೆರವೇರಿಸಿದರು. ವ್ಯಾಸತೀರ್ಥರೆಂದು ನಾಮಕರಣ ಮಾಡಿದರು. ಮಹಾಮಂತ್ರಗಳನ್ನು ಉಪದೇಶಿಸಿದರು. ವೇದಾಂತ ಸಾಮ್ರಾಜ್ಯ ಪಟ್ಟಾಭಿಷಿಕ್ತರನ್ನಾಗಿಸಿದರು. ಶಾಸ್ತ್ರ ವ್ಯಾಸಂಗ, ದೇಶಪರ್ಯಟನೆ, ಪ್ರಾರಂಭಿಸಿದರು. ಗುರ್ವಾಜ್ಞೆಯಂತೆ ವ್ಯಾಸರಾಜರು ಮುಳಬಾಗಿಲಿನ ಶ್ರೀಪಾದರಾಜರಲ್ಲಿ ಅಧ್ಯಯನ ಆರಂಭಿಸಿದರು. ಕಠಿಣತರ ಷಡ್ದರ್ಶನಗಳನ್ನು ಲೀಲಾಜಾಲವಾಗಿ ಅಭ್ಯಸಿಸಿದರು.

ಧರ್ಮಪ್ರಚಾರಾರ್ಥ ಶಿವಕಂಚಿ ವಿಷ್ಣುಕಂಚಿ ಸಂಚರಿಸಿದರು. ಮಧ್ವಸಿದ್ಧಾಂತವನ್ನು ಪ್ರತಿಪಾದಿಸಿದರು. ವಿಖ್ಯಾತರಾದ ವ್ಯಾಸತೀರ್ಥರನ್ನು ಹಲವು ರಾಜರು ವೇದಘೋಷ ಪೂರ್ಣಕುಂಭಗಳೊಂದಿಗೆ ಮರ್ಯಾದೆ ಮಾಡಿದರು. ಶ್ರೀಪಾದರಾಜರಲ್ಲಿ ವ್ಯಾಸಂಗ ಗೈಯ್ಯುತ್ತಿದ್ದಾಗ ವ್ಯಾಸತೀರ್ಥರು ಗುರುಗಳಲ್ಲಿಟ್ಟ ಅಪೂರ್ವ ಗುರುಭಕ್ತಿ, ಅಂತೇ ಗುರುಗಳಾದ ಶ್ರೀಪಾದರಾಜರ ಶಿಷ್ಯ ವಾತ್ಸಲ್ಯಗಳು ಅನ್ಯೋನ್ಯವಾಗಿದ್ದವು. ಅದನ್ನೇ ವ್ಯಾಸತೀರ್ಥರು ಹೀಗೆ ಬಣ್ಣಿಸಿದ್ದಾರೆ -

ವಾದಿಗಜ ಮಸ್ತಕಾಂಕುಶ
ಸುಜನ ಬುಧಗೇಯ
ಮೇದಿನೀ ಸುರವಂದ್ಯ
ಶ್ರೀಪಾದರಾಯ
ಸಕಲ ಶಾಸ್ತ್ರಕಲಾಪ ಸನ್ಯಾಸಕುಲದೀಪ
ಸಕಲ ಸತ್ಯಸ್ಥಾಪ ಸುಜ್ಞಾನ ದೀಪ

ಜಗತ್ಕಲ್ಯಾಣಾರ್ಥವೇ ಜನಿಸಿ, ಶ್ರೀಪಾದ ರಾಜರಿಂದ ತ್ರಿಲೋಕವಂದಿತರೆಂದು ಅನುಗ್ರಹಗೊಂಡ ವ್ಯಾಸತೀರ್ಥರಿಗೆ ಆಶ್ರಮಗುರುಗಳಾದ ಬ್ರಹ್ಮಣ್ಯತೀರ್ಥರು ಮಂಗಳ ಮುಹೂರ್ತದಲ್ಲಿ ಸಮಸ್ತ ಸನ್ಮಾನದಿಂದ ಪಟ್ಟಾಭಿಷೇಕ ಮಹೋತ್ಸವ ವೈಭವದಿಂದ ನೆರವೇರಿಸಿ, ವ್ಯಾಸರಾಜರೆಂದು ಅಭಿಧಾನದಿಂದ ಆಶೀರ್ವದಿಸಿ ಸಂಸ್ಥಾನದ ಮಹಾಧಿಪತಿಗಳೆಂದು ನಿಯಮಿಸಿ ಗೌರವಿಸಿದರು.

**ಸಂಚಾರ :**

ವ್ಯಾಸರಾಜರು ಕನ್ಯಾಕುಮಾರಿಯಿಂದ ಹಿಮಾಲಯ ಪರ್ವತದವರೆಗೂ ಸಂಚಾರಗೈದರು. ವಿದ್ಯೆ ಹಾಗೂ ಧರ್ಮವನ್ನು ವ್ಯಾಪಕವಾಗಿ ಪ್ರಚಾರ ಕೈಗೊಳ್ಳಲು ವಿದ್ಯಾಮಂದಿರಗಳನ್ನು ನಿರ್ಮಿಸಿದರು. ಪ್ರತಿವಾದಿಗಳನ್ನು ಜಯಿಸಿ, ಅವರ ವಿದ್ವತ್ತಿಗೆ ಮನ್ನಣೆ ಮರ್ಯಾದೆ ಗೈಯ್ಯುತ್ತಿದ್ದರು. ವೇದಾಂತವಿದ್ಯಾಪ್ರಸಾರಣಕ್ಕೆಂದೇ ದೇಶಾದ್ಯಂತ ಎಂಟು ವಿದ್ಯಾಪೀಠಗಳನ್ನು ಸ್ಥಾಪಿಸಿದರು. ಇವುಗಳಿಗೆ ಉಪಕುಲಪತಿಗಳನ್ನಾಗಿ - ಹರಿದ್ವಾರದಲ್ಲಿ ಸತ್ಯನಾಥರನ್ನು, ಗಯಾದಲ್ಲಿ ಹರಿ ಮಿಶ್ರರನ್ನು, ಕಾಶಿಯಲ್ಲಿ ಜಯದೇವರನ್ನು, ಬಂಗಾಲದಲ್ಲಿ ಈಶ್ವರ ಸೂರಿಯನ್ನು ಕುಂಭಕೋಣದಲ್ಲಿ ವಿಜಯೀಂದ್ರರನ್ನು, ಉಡುಪಿಯಲ್ಲಿ ವಾದಿರಾಜರನ್ನು, ಮುಳಬಾಗಿಲಲ್ಲಿ ಪ್ರಜ್ಞಾನಿಧಿಗಳನ್ನು, ಕಂಚಿಯಲ್ಲಿ ಶ್ರೀನಿವಾಸತೀರ್ಥರನ್ನು, ನಿಯಮಿಸಿದ್ದರೂ ಇವೆಲ್ಲ ವುಗಳಿಗೆ ವಿಜಯನಗರದ ಕೇಂದ್ರ ವಿಶ್ವವಿದ್ಯಾಲಯ ಮಾರ್ಗದರ್ಶಿಯಾಗಿದ್ದು, ವ್ಯಾಸರಾಜರೇ ಇದಕ್ಕೆ ಕುಲಪತಿಗಳಾಗಿದ್ದರು.

ದೇಶದಾದ್ಯಂತ - ಏಳುನೂರಾ ಮೂವತ್ತೆರಡು ಸ್ಥಳಗಳಲ್ಲಿ ಪ್ರಾಣದೇವರ ಪ್ರತಿಷ್ಠೆಮಾಡಿದರು. ತಿರುಪತಿಯಲ್ಲಿ ಹನ್ನೆರಡು ವರ್ಷಗಳಕಾಲ ಶ್ರೀನಿವಾಸನ ಉಪಾಸನೆ ಕೈಕೊಂಡು ದೇವಸ್ಥಾನದ ಆಡಳಿತದಲ್ಲಿ ಅದ್ಭುತ ಸುಧಾರಣೆ ಮಾಡಿದರು.

**ವಿಜಯನಗರ ಸಾಮ್ರಾಜ್ಯದ ರಾಜಗುರು :**

ವ್ಯಾಸರಾಜರು ವಿಜಯನಗರ ಸಾಮ್ರಾಜ್ಯದ ಧರ್ಮಗುರುಗಳಾಗಿದ್ದರು. ಹಿಂದೂ

ಸಾಮ್ರಾಜ್ಯದ ಧಾರ್ಮಿಕ ಸಂರಕ್ಷಣೆ, ಪುನರುತ್ಥಾನದಂಥ ಮಹಾಕಾರ್ಯಗಳ ಹೊಣೆ ಇವರ ಮೇಲಿತ್ತು. ಪಂಡಿತ ಪ್ರಪಂಚದ ಪ್ರಚಂಡ ಶಕ್ತಿ, ಕರ್ನಾಟಕ ರತ್ನ ಸಿಂಹಾಸನಾಧೀಶ್ವರ ವಿಜಯನಗರದವರ ರಾಜದರ್ಬಾರಿನಲ್ಲಿ, ಅಪರೋಕ್ಷಜ್ಞಾನಿಗಳಾದ ವ್ಯಾಸರಾಜರಿಗೆ - ''ವಿಜಯನಗರಾಖ್ಯ ಕರ್ನಾಟಕ ಸಾಮ್ರಾಜ್ಯ ಷಟ್ ಚಕ್ರವರ್ತಿ ಘೋಷಕ''ವೆಂಬ ಪರಾಕಿತ್ತು. ಕ್ರಿ.ಶ. 1527 ರ ನವಂಬರ ಐದರ ಶಾಸನದಲ್ಲಿ ಶ್ರೀಕೃಷ್ಣದೇವರಾಯ ವ್ಯಾಸರಾಜರ ಕುರಿತಾಗಿ ಹೀಗೆ ಬರೆಸಿದ್ದಾನೆ-

ನಿಗಮಾಗಮ ನಿರ್ಣೀತ
ನಿರ್ಜರಾಧೀಶ ಮಂತ್ರಿಣೇ
ನೃಪೇಂದ್ರ ಮಕುಟೀರತ್ನ
ನೀರಾಜಿತ - ನಿಜಾಂಘ್ರಯೇ
ನಿರಹಂಕಾರ ಚಿತ್ತಾಯ
ನೀತಿ ಮಾರ್ಗೋಪದೇಶಿನೇ
ಶೇಷಾಯ ನರಸಿಂಹಾಯ
ಶಿಕ್ಷಿತಾಂತಕ ವೈರಿಣೇ
ಪುರಾಣಪುರುಷ ಧ್ಯಾನ
ಪುಷ್ಟತ್ಪುಲಕ ಮೂರ್ತಯೇ
ಬ್ರಹ್ಮಣ್ಯತೀರ್ಥ ಶಿಷ್ಯಾಯ
ಬ್ರಹ್ಮ ನಿರ್ಮಲ ಮೂರ್ತಯೇ
ವ್ಯಾಸ ತೀರ್ಥ ಯತೀಂದ್ರಾಯ
ವಿದ್ವದಿಂದೀವರೇಂಗವೇ

ಇದರಿಂದ ಇವರ ಸಮಗ್ರ ವ್ಯಕ್ತಿತ್ವದ ಅರಿವಾಗುತ್ತದೆ.

ಕೃಷ್ಣದೇವರಾಯನ ತಂದೆ ಸಾಮ್ರಾಟ ನರಸಾನಾಯಕನು ಪ್ರತಿನಿತ್ಯವೂ ವ್ಯಾಸರಾಜ ರಿಂದ ರಾಜ್ಯಾಡಳಿತದ ಬಗ್ಗೆ ಸಲಹೆ - ಆಜ್ಞೆಗಳನ್ನು ಪಡೆಯುತ್ತಿದ್ದ. ಅಂತೇ ಪ್ರಜೆಗಳೂ ಕೂಡ ಇವರಲ್ಲಿ ಅಪಾರ ವಿಶ್ವಾಸ ಹೊಂದಿದ್ದರು.

ಕ್ರಿ.ಶ. 1520 ರಲ್ಲಿ ವಿಜಯನಗರದ ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ಕನಕ ರತ್ನಾಭಿಷೇಕ ಮಾಡಿ ಗೌರವಿಸಿದ್ದರು. ಕೃಷ್ಣದೇವರಾಯನಿಗೆ ಬಂದಿದ್ದ ಕುಹುಯೋಗ ಸಂಕಟವನ್ನು ನಿವಾರಿಸಿದ ವ್ಯಾಸರಾಜರನ್ನು ರತ್ನಾಭರಣಗಳಿಂದ ತೂಗಿ, ಅನೇಕ ಭೂಮಿ - ಗ್ರಾಮಗಳನ್ನು ದಾನವಿತ್ತನು.

ವ್ಯಾಸರಾಜರು ವಿದ್ವಾಂಸರು, ಪಂಡಿತರು, ಕಲಾಕಾರರಿಗೆ ನೀಡಿದ ದತ್ತಿದಾನ ಪ್ರಶಸ್ತಿಗಳ ವರ್ಣನೆಯನ್ನು ಅದ್ಭುತವಾಗಿ ಸೋಮನಾಥ ಕವಿಯು ಬಣ್ಣಿಸಿದ್ದಾನೆ.

**ದಾಸಕೂಟ :**

ವ್ಯಾಸಕೂಟ - ದಾಸಕೂಟ ಎರಡನ್ನೂ ಉನ್ನತಕ್ಕೆ ಒಯ್ದ ಅಗಾಧ ಪಾಂಡಿತ್ಯ, ಅಪಾರಭಕ್ತಿ, ಯತಿವರ್ಯರಿಗೆ ವಿದ್ಯಾಗುರುವಾಗಿದ್ದ ವ್ಯಾಸರಾಜರು, ಕನ್ನಡದ ಕೀರ್ತನೆಗಳಿಗೂ ದಾಸಸಾಹಿತ್ಯವೆಂದು ಮನ್ನಿಸಿ, ಗೌರವಿಸಿ ಭಕ್ತಿ ಪಂಥ ನಿರ್ಮಾಣಮಾಡಿದರು.

ಸಾರಸ್ವತ ಪ್ರಪಂಚಕ್ಕೆ ರತ್ನತ್ರಯವೆನ್ನಿಸಿದ, ''ನ್ಯಾಯಾಮೃತ, ತರ್ಕತಾಂಡವ, ಚಂದ್ರಿಕಾ'' ರಚಿಸಿದ ವಿದ್ಯಾವಿಶಾರದರು, ಕನ್ನಡದಲ್ಲೂ ಪದಪದ್ಯರಚಿಸಿದವರು. ವೃತ್ತ ನಾಮದ ಹೊಸ ಸಂಪ್ರದಾಯವನ್ನು ದಾಸಸಾಹಿತ್ಯದಲ್ಲಿ ಅಳವಡಿಸಿದರು.

ಶಾಸನವೊಂದರಲ್ಲಿ ಇವರನ್ನು ಕುರಿತಾಗಿ ಹೀಗಿದೆ -

''ಶ್ರೀಮತ್ ಪರಮಹಂಸ ಪರಿವ್ರಾಜಕಾ ಚಾರ್ಯ ಪದವಾಕ್ಯ ಪ್ರಮಾಣ, ದುರ್ವಾದಿ ಗರ್ವ ಸರ್ವಸ್ವಾಪಹಾರ, ವೈಷ್ಣವ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ, ಸಕಲ ವಿದ್ವಜ್ಜನ ಮನಃ ಪದ್ಮವನ ಸೌಪಸ್ತಿಕ ಶ್ರೀಮದ್ ವ್ಯಾಸತೀರ್ಥ ಶ್ರೀಪಾದ ಒಡೆಯರು'' ಎಂದು ಗೌರವದಿಂದ ಕೊಂಡಾಡಿದ್ದಾರೆ.

ವಾದಿರಾಜರು, ಪುರಂದರದಾಸರು, ಕನಕದಾಸರು ಮೊದಲಾದ ದಾಸವರೇಣ್ಯರಿಗೆ ಪ್ರೇರಕಶಕ್ತಿಯಾಗಿ ನಿಂತು ದಾಸಕೂಟವನ್ನೂ ಬೆಳಗಿದಂಥವರು. ಹರಿಸರ್ವೋತ್ತಮತ್ವವನ್ನು ಪ್ರತಿಪಾದಿಸುವ ಭಕ್ತಿರಸಭರಿತ ಕೀರ್ತನೆಗಳನ್ನು ರಚಿಸಿದರು. ಇವರ ಕೃತಿಗಳಲ್ಲಿ ಭಕ್ತನ ಆರ್ತತೆ, ನಿವೇದನೆ. ಆತ್ಮಶೋಧನೆ, ಪಶ್ಚಾತ್ತಾಪ ತಳಮಳಗಳು ಮೇಳೈಸಿವೆ. 'ನರನಾದ ಮೇಲೆ ಹರಿನಾಮ ಜಿಹ್ವೆಯೊಳಿರಬೇಕು' ಎಂದು ಹೇಳುತ್ತ -

ಶಾಂತಿ ಶಮೆದಮೆ ಹಿಡಿಯಲುಬೇಕು
ಭ್ರಾಂತಿ ಕ್ರೋಧವ ಕಳೆಯಲು ಬೇಕು
ಸಂತತ ಸನ್ಮಾರ್ಗದಲಿರಬೇಕು

ಎಂದಿರುವರು. ದಾಸ್ಯಭಾವ ಹರಿದಾಸ ಸಾಹಿತ್ಯದ ಜೀವಸೆಲೆ. ಶ್ರೀಹರಿಯೇ ಒಡೆಯ. ತಾನವನ ದಾಸ, ಹಾಡಿ ನಲಿದ ಭಕ್ತರೇ ಹರಿದಾಸರು. ಹೀಗೆ ದಾಸ ಪರಂಪರೆಯು ಸಂಘಟಿತ, ನಿರ್ಮಾತೃವಾದವರು.

ಶ್ರೀಕೃಷ್ಣ, ಸಿರಿಕೃಷ್ಣ ಅಂಕಿತದಿಂದ ಕೀರ್ತನೆ ರಚಿಸಿದ್ದಾರೆ.

ಎನ್ನ ಬಿಂಬ ಮೂರುತಿಯ ಪೂಜಿಪೆನಾನು
ಮನಮುಟ್ಟಿ ಅನುದಿನ ಮರೆಯದೆ ಮರೆಯದೆ

ಶ್ರೀನಿವಾಸನ ಕುರಿತಾಗಿ ಸಂಸ್ಕೃತದಲ್ಲಿ-

ಪ್ರಾತಃಸ್ಮರಾಮಿ ರಮಯಾಸಹ
ವೆಂಕಟೇಶಮ್
ಮಂದಸ್ಮಿತಂ ಮುಖಸರೋರುಹ
ಕಾಂತಿರಮ್ಯಂ

ಹಂಪಿಯಲ್ಲೇ ಪ್ರತಿಷ್ಠಾಪಿತ - ಯಂತ್ರೋದ್ಧಾರಕಹನುಮಂತನ ಕುರಿತಾಗಿ-

ನಮಾಮಿ ದೂತಂ ರಾಮಸ್ಯ
ಸುಖದಂ ಚ ಸುರದ್ರುಮಂ
ಪೀನ ವೃತ್ತಮಹಾಬಾಹುಂ
ಸರ್ವಶತ್ರು ನಿವಾರಣಂ

ಎಂದು ಕೊಂಡಾಡಿದ್ದಾರೆ. ಹಂಪೆಯ ಅಧಿದೈವ ಶ್ರೀ ವಿರೂಪಾಕ್ಷನ ಕುರಿತಾಗಿ - ನಮೋ ಪಾರ್ವತಿಪತೆ ನುತ ಜನಪರ ನಮೋ ವಿರೂಪಾಕ್ಷ ರಮಾರಮಣ ನಲ್ಲಮನ ಭಕುತಿಕೊಡು ನಮೋ ವಿರೂಪಾಕ್ಷ - ಎಂದು ಸ್ತುತಿಸಿದ್ದಾರೆ.

ಇನ್ನೊಂದು ಕೀರ್ತನೆಯಲ್ಲಿ -

ಜಿಜ್ಞಾಸುವಿಗೆ ಜ್ಞಾನ ಕಾರಣ
ಜ್ಞಾನಿಗೆ ಅಪರೋಕ್ಷ ಕಾರಣ
ಅಪರೋಕ್ಷಗೆ ಅಧಿಕಾನಂದ ಕಾರಣ
ಮುಕ್ತಗೆ ತಾನೆ ಫಲರೂಪ

ತಿರುಮಲೆ - ತಿರುಪತಿ ದೇವಸ್ಥಾನಗಳು, ತಿರುಪತಿ.



## ಸ್ವಾಮಿಯ ಪುಷ್ಪಕೈಂಕರ್ಯ

ವೆಂಕಟಾದ್ರಿ ಸಮಂ ಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ ।
ವೆಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ ॥

ಭೂತ ಭವಿಷ್ಯಗಳಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯಂತಹ ದೇವರು ಇತರವಿಲ್ಲ ಎಂಬ ಅರ್ಥದ ಈ ಶ್ಲೋಕದ ಮೂಲ ಶ್ರೀ ವೆಂಕಟೇಶ್ವರಸ್ವಾಮಿ. ಸಾವಿರ ವರ್ಷದ ಹಿಂದೆಯೇ ಯಾಮುನಾಚಾರ್ಯರಿಂದ ಪ್ರೋತ್ಸಾಹಿತರಾದ ತಿರುಮಲನಂಬಿ ಈ ದೇವರಿಗೆ ಪುಷ್ಪಕೈಂಕರ್ಯ ಮಾಡಿ ಧನ್ಯರಾದರು. ನಂತರ ಅನಂತಸೂರಿ ರಾಮಾನುಜರಿಂದ ಆಜ್ಞಪ್ತರಾಗಿ ತಿರುಮಲೆಯಲ್ಲಿ ಒಂದು ತುಲಸೀ ತೋಟವನ್ನೇರ್ಪಡಿಸಿ ಹೂಗಳನ್ನು ಬೆಳೆಸಿ ಸ್ವಾಮಿಗೆ ಅರ್ಪಿಸಿ ತೃಪ್ತಿ ಹೊಂದಿದ್ದುಂಟು. ಆ ನಂತರ ತಿರುಮಲೆಯ ತುಂಬ ತುಲಸೀತೋಟಗಳಾಗಿ, ಹಲವು ಭಕ್ತರು ತೋಟದ ಮಾಲಿಗಳಾಗಿ, ಮಾಲೆಕಾರರಾಗಿ ಸ್ವಾಮಿಯ ಸೇವೆಯಲ್ಲಿ ಸಂದುಬಂದರು. ತರಿಗೊಂಡವೆಂಗಮಾಂಬ ಮುಂತಾದ ಪ್ರಾತಃಸ್ಮರಣೀಯರು ಈ ಸೇವೆಯಲ್ಲಿ ಸವೆದವರೇ. ಇಂತಹ ಸ್ವಾಮಿಯ ಸಾರ್ಥಕ ಸುಮ ಸೇವೆಯನ್ನು ಪುಷ್ಪಕೈಂಕರ್ಯವನ್ನು ಸರ್ವರೂ ಮಾಡಬೇಕೆಂದು ಆಶಿಸಿ ಈ ಹಲವು ಅವಕಾಶಗಳನ್ನು ಕಲ್ಪಿಸಲಾಗಿದೆ.

**1. ಪುಷ್ಪಾಂಜಲಿ ಯೋಜನೆ :** ಒಂದು ಸಾವಿರದ ಗುಣಕಗಳಲ್ಲಿ ಲಕ್ಷ ರೂಪಾಯಿಗಳ ವರೆಗೆ ಸಲ್ಲಿಸಬಹುದು. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ.ಯ ಹಣ ವನ್ನು ಬ್ಯಾಂಕಿನಲ್ಲಿ ಠೇವಣಿಯಿಟ್ಟು ಬರುವ ಹಣದಲ್ಲಿ ಸುಗಂಧ ಸುಮಗಳನ್ನು ಬೆಳೆದು ಭಕ್ತರು ಕೋರಿದ ದಿನ ಸ್ವಾಮಿಗೆ ಸಮರ್ಪಿಸಲಾಗುತ್ತದೆ.

**2. ಪುಷ್ಪ ಕೈಂಕರ್ಯ :** ಭಕ್ತರು ಐದು ಕಿಲೋಗ್ರಾಂಗಳಿಗೆ ಕಡಿಮೆಯಾಗದಂತೆ ಬಿಡಿ ಹೂವುಗಳನ್ನು ಪ್ರತ್ಯಕ್ಷವಾಗಿ ತಂದು ತಿರುಮಲೆಯ ಉದ್ಯಾನ ವನ ವಿಭಾಗದಲ್ಲಿ ನೀಡಬಹುದು. ಅವಸರಕ್ಕೆ ತಕ್ಕಂತೆ ಈ ಹೂವುಗಳನ್ನು ಕಟ್ಟಿ ಸ್ವಾಮಿಗೆ ಸಮರ್ಪಿಸ ಲಾಗುವುದು.

**3. ಪುಷ್ಪವರ್ಧಿನಿ ಯೋಜನೆ :** ಭಕ್ತರು ತಾವೇ ಬೆಳೆಸಿದ ಹೂವುಗಳನ್ನು ಸ್ವಾಮಿಗೆಂದು ತಿರುಮಲೆಗೆ ಕಳುಹಿಸಬಹುದು. ಎ.ಪಿ.ಎಸ್.ಆರ್.ಟಿ.ಸಿ. ಬಸ್‌ಗಳಲ್ಲಿ ಈ ಹೂವುಗಳನ್ನು ಉಚಿತವಾಗಿ ತಿರುಮಲೆಗೆ ಕಳುಹಿಸಬಹುದು. ಹೀಗೆ ಬಂದ ಹೂವುಗಳನ್ನು ಉದ್ಯಾನವನ ಶಾಖೆಯವರು ಸ್ವಾಮಿ ಸೇವೆಗೆ ಕಳುಹಿಸುವರು.

ಸ್ವಾಮಿಯ ತೋಮಾಲೆಸೇವೆ, ಊಂಜಲ್‌ಸೇವೆ, ಪೂಲಂಗಿಸೇವೆ (ಗುರುವಾರ) ಪದ್ಮಾವತೀ ಪರಿಣಯ, ಪವಿತ್ರೋತ್ಸವ, ಪುಷ್ಪಪಲ್ಲಕ್ಕಿ, ಬ್ರಹ್ಮೋತ್ಸವ, ಪುಷ್ಪಯಾಗ ಮೊದಲಾದವುಗಳಿಗಾಗಿ ಹೆಚ್ಚಿನ ಹೂವು ಅಗತ್ಯ. ತಮ್ಮ ಅನುಕೂಲವಿದ್ದಂತೆ ಹೂವುಗಳನ್ನು ಕಳುಹಿಸಬಹುದು.

ವಿವರಗಳಿಗೆ,
**ಉದ್ಯಾನವನಾಧಿಕಾರಿ,**
ತಿ.ತಿ.ದೇ. ಉದ್ಯಾನ ವಿಭಾಗ, ತಿರುಮಲೆ.

ಸಿರಿಕೃಷ್ಣನ ಪಾದಸೇವೆ
ಇದರ ತೂಕಕ್ಕೆ ಸಾಕೆ ಕೈವಲ್ಯ

ತಮ್ಮ ಪ್ರಿಯ ಶಿಷ್ಯರಾದ ಪುರಂದರದಾಸರ ಕೀರ್ತನೆಗಳನ್ನು ''ಪುರಂದರೋಪನಿಷತ್ತು'' ಎಂದೇ ಗೌರವಿಸಿದ್ದಾರೆ. ಅಲ್ಲದೆ ಅವರ ಕುರಿತು ಕೀರ್ತನೆ ರಚಿಸಿ ಶಿಷ್ಯನ ಹೆಚ್ಚಳಿಕೆಯನ್ನು ಕೊಂಡಾಡಿದ್ದಾರೆ.

ಕಂಗಳಿಗೆ ಹಬ್ಬವಾಯಿತಯ್ಯ
ಮಂಗಳಾತ್ಮಕ ಪುರಂದರದಾಸರನು ಕಂಡು

ಹಂಸನಾಮಕ ಪರಮಾತ್ಮ ಚತುರ್ಮುಖ ಬ್ರಹ್ಮದೇವರು ಹೀಗೆ ಬಂದ ಪರಂಪರೆಯಲ್ಲೇ ಶ್ರೀ ವ್ಯಾಸರಾಜಮಠ ಸಂಸ್ಥಾನವಿದೆ. ಈ ಸಂಸ್ಥಾನದಲ್ಲಿ ಇವರು ಕ್ರಿ.ಶ. 1466 ರಿಂದ 1539 ರ ವರೆಗೆ ವಿರಾಜಿಸಿದರು. ವ್ಯಾಸರಾಜರು ವೃದ್ಧಾಪ್ಯದಿಂದ ಬಳಲಿ ಲೋಕಕೆಲಸಗಳಲ್ಲಿ ನಿರಾಸಕ್ತರಾದರು. ಉಪಾಸ್ಯಮೂರ್ತಿಯ ಆರಾಧನೆಯಲ್ಲಿ ಆಸಕ್ತರಾಗಿದ್ದರು. ನಿಶ್ಶಕ್ತಿ ನಿತ್ರಾಣಗಳಿಂದಾಗಿ ತೊಂಭತ್ತೂರು ವರ್ಷಗಳ ವ್ಯಾಸರಾಜರು ಸಂಸ್ಥಾನದ ಸರ್ವಸ್ವವನ್ನೂ ಉತ್ತರಾಧಿಕಾರಿಗೆ ವಹಿಸಿದರು.

ತುಂಗಭದ್ರೆಯ ತೀರ ನವ ವೃಂದಾವನದಲ್ಲಿ 1539 ಮಾರ್ಚ 8 ರಂದು ಪರಂಧಾಮಗೈದರು. ಶಿಷ್ಯರೆಲ್ಲ, ರಾಜ ಪ್ರಮುಖರು, ಪುರವಾಸಿಗಳು ಆಗಮಿಸಿ ಗುರು ಮಹಿಮೆ ಕೊಂಡಾಡತೊಡಗಿದರು.

ನವವೃಂದಾವನದಿ ವಿರಾಜಿಪಯತಿ
ಯಾರೆಲೆ ಪೇಳಮ್ಮ
ಕವಿಜನ ನಾಯಕ ಪವನಮತ
ಸಮುದ್ಭವ ಅಭಿನವ
ವ್ಯಾಸಾರ್ಯ ಕಾಣಮ್ಮ

ಇಂಥ ಅಪರೋಕ್ಷ ಜ್ಞಾನಿ, ವಿದ್ಯಾ ಸಿಂಹಾಸನಾಧೀಶ ವ್ಯಾಸರಾಜರಿಗೆ ನಮೋ ನಮಃ

★★★★★



ತಿರುಪತಿ ಶ್ರೀ ಕೋದಂಡರಾಮಸ್ವಾಮಿ
ಆಲಯದಲ್ಲಿ ಈಚೆಗೆ ನಡೆದ
ಸೀತಾರಾಮಕಲ್ಯಾಣ



ಶ್ರೀರಾಮ ಪಟ್ಟಾಭಿಷೇಕ



ಹನುಮಂತವಾಹನ



ತಿರುಮಲೆಯಲ್ಲಿ ಈಚೆಗೆ ನಡೆದ
ಶ್ರೀ ಪದ್ಮಾವತೀ ಪರಿಣಯ ದೃಶ್ಯ.



ಸ್ವಾಮಿಯನ್ನು ಸಂದರ್ಶಿಸಿ
ಇನ್‌ಚಾರ್ಜ್ ಇ.ಓ.
ಶ್ರೀ ಬಾಲಸುಬ್ರಹ್ಮಣ್ಯಂ ಅವರಿಂದ
ಪ್ರಸಾದ ಸ್ವೀಕರಿಸುತ್ತಿರುವ
ಭಾರತದ ಉಪರಾಷ್ಟ್ರಪತಿ
ಶ್ರೀ ಕೃಷ್ಣಕಾಂತ್.

# ಭಾರತೀಯ ಸಂಸ್ಕೃತಿ - ನೆಲೆ ಹಾಗೂ ನಿಲುವು

- ಡಾ|| ಎಚ್. ವಿ. ನರಸಿಂಹಮೂರ್ತಿ.

ಭಾರತೀಯ ಸಂಸ್ಕೃತಿಯು ಜಗತ್ತಿನ ಪ್ರಾಚೀನ ಸಂಸ್ಕೃತಿಗಳಲ್ಲಿ ಒಂದು. ಅದಕ್ಕೆ ಪ್ರಮುಖ ಆಧಾರವಾದ ಋಗ್ವೇದವು ಈ ಜಗತ್ತಿನ ಅತ್ಯಂತ ಪ್ರಾಚೀನ ಗ್ರಂಥ ಎನ್ನುವುದರಲ್ಲಿ ಸಂಶಯವಿಲ್ಲ. ಸಂಶೋಧನೆಗಳು ಮುಂದುವರಿದಷ್ಟೂ ಋಗ್ವೇದದ ಕಾಲವು ಹಿಂದಕ್ಕೆ ಹೋಗುತ್ತದೆ. ಅದನ್ನು ಕಂಡು ವಿಸ್ಮಿತರಾಗದವರಿಲ್ಲ. ಭಾರತೀಯ ಸಂಸ್ಕೃತಿಯು ಎಷ್ಟು ಹಿಂದೆ ಹುಟ್ಟಿತೆಂಬುದರ ಬಗ್ಗೆ ಇದಮಿತ್ಥಂ ಎಂದು ನಿಷ್ಕೃಷ್ಟವಾಗಿ ನುಡಿಯುವ ಪ್ರಯತ್ನ ಮಾಡುತ್ತಿದ್ದ ಸಾಹಸಬುದ್ಧಿಯುಳ್ಳವರು ಕೂಡ ಅದು ತಮ್ಮ ನಿರ್ಧಾರಕ್ಕೆ ಸಿಕ್ಕದಷ್ಟು ಪ್ರಾಚೀನವೆಂಬುದನ್ನು ಮನಗಂಡಿದ್ದಾರೆ. ಭಾರತೀಯ ಸಂಸ್ಕೃತಿಯು ತೀರ ಈಚಿನದೆಂದು ಸಿದ್ಧಾಂತ ಮಾಡಿ ತೃಪ್ತಿಪಟ್ಟುಕೊಳ್ಳಲು ಮೊದಲಿನಿಂದಲೂ ಪ್ರಯತ್ನಿಸುತ್ತ ಬಂದಿರುವವರು ಪಾಶ್ಚಾತ್ಯವಿದ್ವಾಂಸರು. ಅವರಲ್ಲಿ ಕೆಲವರು ನಿಜವಾಗಿಯೂ ತ್ರಿಕರಣಶುದ್ಧವಾಗಿ ಪ್ರಯತ್ನಿಸಿ ಸತ್ಯಾನ್ವೇಷಣಕ್ಕೆ ಹೊರಟವರು. ಉಳಿದ ಬಹುಮಂದಿ ವಿದ್ವಾಂಸರು ಭಾರತೀಯ ಸಂಸ್ಕೃತಿಯು ಅತ್ಯಂತ ಪ್ರಾಚೀನವೆಂದು ಒಪ್ಪಿಕೊಳ್ಳಲು ಇಷ್ಟವಿಲ್ಲದೆ ಅದು ಕೇವಲ ಇತ್ತೀಚಿನದೆಂದು ತೋರಿಸಿಕೊಡಲು ಪ್ರಯತ್ನಿಸಿದವರು. ಆದರೆ ಹರಪ್ಪ ಮುಂತಾದ ಕಡೆಗಳಲ್ಲಿ ದೊರೆತ ಅವಶೇಷಗಳೇ ಮೊದಲಾದ ಸಾಧನಗಳಿಂದ ಭಾರತೀಯ ಸಂಸ್ಕೃತಿಯು ಅತ್ಯಂತ ಪ್ರಾಚೀನವಾದುದು ಎಂಬುದನ್ನು ನಿರೂಪಿಸಲು ಬಹಳ ಅನುಕೂಲವಾಯಿತು.

ಭಾರತೀಯ ಸಂಸ್ಕೃತಿಯು ಅತ್ಯಂತ ಪ್ರಾಚೀನವಾಗಿರುವಂತೆ ಅತ್ಯಂತ ಭವ್ಯವಾಗಿಯೂ ಅತ್ಯಂತ ರಮ್ಯವಾಗಿಯೂ ಇದೆ. ಇತರ ಹಲವಾರು ಪ್ರಾಚೀನ ಸಂಸ್ಕೃತಿಗಳು ನಿರ್ನಾಮವಾಗಿ ಅಳಿಸಿ ಹೋಗಿದ್ದರೂ ಭಾರತೀಯ ಸಂಸ್ಕೃತಿಯು ಸಚೇತನವಾಗಿ ಇನ್ನೂ ಉಳಿದೇ ಇದೆ. ಕೇವಲ ಐಹಿಕ ಸಾಧನೆಗಳ ವಿಷಯವನ್ನೇ ತೆಗೆದುಕೊಂಡು ಪರಿಗಣಿಸಿದರೂ ಕೂಡ ಇದು ಋಗ್ವೇದದ ಕಾಲಕ್ಕೇ ರಾಜಕೀಯ, ಸಾಮಾಜಿಕ, ಔದ್ಯೋಗಿಕ ಕ್ಷೇತ್ರಗಳಲ್ಲಿ ಎಷ್ಟು ಪರಿಣಾಮ ಪರವಾದ ಪ್ರಗತಿ ಸಾಧನೆಯಾಗಿದ್ದಿತೆಂಬುದನ್ನು ಯೋಚಿಸಿದರೆ ನಿಜವಾಗಿಯೂ ಆಶ್ಚರ್ಯವಾಗುತ್ತದೆ. ಇತರ ದೇಶಗಳಲ್ಲಿ ಲೋಹಗಳನ್ನು ಅದಿರಿನಿಂದ ಬೇರೆ ಮಾಡುವುದೂ ಹಾಗೆ ಮಾಡಿದ ಶುದ್ಧ ಲೋಹವನ್ನು ಬಳಸುವುದೂ, ಕಬ್ಬಿಣದಿಂದ ಉಕ್ಕು ಮಾಡುವುದೂ ಎಷ್ಟು ಈಚೆಗೆ ಪ್ರಾರಂಭವಾಯಿತು ಎಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ನೋಡಿದರೆ ಋಗ್ವೇದದಲ್ಲಿ ವಾಣಿ ಎಂಬ ನೂರು ತಂತಿ ವಾದ್ಯವೂ ವೀಣೆಯೆಂಬ ವಾದ್ಯವೂ ವರ್ಣಿತವಾಗಿರುವುದನ್ನೂ, ಹಲವು ಲೋಹಗಳು ಬಳಕೆಯಲ್ಲಿದ್ದುದಾಗಿ ಹೇಳಿರುವುದನ್ನೂ ಕಂಡು ವಿಸ್ಮಯ ಹೊಂದದಿರುವುದು ಹೇಗೆ! ವಾಣವೆಂಬ ವಾದ್ಯದ ತಂತಿಗಳಿಗೂ ವೀಣೆಯ ತಂತಿಗಳಿಗೂ ಉಪ್ಪನ್ನುಪಯೋಗಿಸುವುದು ಅಷ್ಟು ಪ್ರಾಚೀನ ಕಾಲದಲ್ಲಿಯೇ ನಮ್ಮ ಪೂರ್ವಿಕರಿಗೆ ತಿಳಿದಿದ್ದಿತು ಎಂಬ ಸಂಗತಿಯು ಆಶ್ಚರ್ಯಕರವಾದುದು.

ಏಕಂ ಸತ್ ವಿಪ್ರಾ ಬಹುಧಾ ವದಂತಿ ಎಂಬ ಉದಾತ್ತ ತತ್ವವು ನಮ್ಮ ನಾಡಿನಲ್ಲಿ ಎಷ್ಟು ಪ್ರಾಚೀನಕಾಲದಲ್ಲಿನಿರೂಪಿತವಾಯಿತೆಂಬುದು ಮತ್ತೂ ಆಶ್ಚರ್ಯಕರವಾದುದು. ಎಲ್ಲಕ್ಕೂ ಮಿಗಿಲಾಗಿ ಧಾರ್ಮಿಕ ವಿಚಾರಗಳಲ್ಲಿ ಆಲೋಚನಾ ಸ್ವಾತಂತ್ರ್ಯವು ಎಲ್ಲರಿಗೂ ಇದ್ದುದು ಬಹಳ ಪ್ರಮುಖವಾದ ಒಂದು ಸಂಗತಿ. ಇತರ ದೇಶಗಳಲ್ಲಿನಡೆದ ಘಟನೆಗಳನ್ನು ಗಮನಿಸಿದರೆ ಇದರಲ್ಲಿ ಲೇಶಮಾತ್ರವು ಅತಿಶಯೋಕ್ತಿ ಇಲ್ಲವೆಂಬುದು ವ್ಯಕ್ತವಾಗುತ್ತದೆ. ಆಲೋಚನಾ ಸ್ವಾತಂತ್ರ್ಯವೆಂಬುದು ಹಾಗಿರಲಿ, ಧಾರ್ಮಿಕ ವಿಚಾರಗಳಲ್ಲಿ ಅಲ್ಪಸ್ವಲ್ಪ ಭಿನ್ನಾಭಿಪ್ರಾಯ ಪಟ್ಟವರಿಗೂ ಸಾವು ತಪ್ಪುತ್ತಿರಲಿಲ್ಲ. ಒಟ್ಟು ಪಾಶ್ಚಾತ್ಯ ಸಂಸ್ಕೃತಿಯ ಮೂಲಾಧಾರವಾದ ಭವ್ಯ ಸಂಸ್ಕೃತಿಯೆಂದು ಹೆಮ್ಮೆಯಿಂದ ಉದ್ಘೋಷಿತವಾದ ಗ್ರೀಸ್ ದೇಶದ ಸಂಸ್ಕೃತಿಯಲ್ಲಿ ಕೂಡ ಆ ದೋಷವಿದ್ದು ಮಹಾಪುರುಷ ಸಾಕ್ರಟೀಸನು ಅನ್ಯಾಯವಾದ ಮರಣದಂಡನೆಗೆ ಗುರಿಯಾಗಿ ಪ್ರಾಣವನ್ನರ್ಪಿಸಬೇಕಾಯಿತು. ಇದಕ್ಕೆ ತದ್ವಿರುದ್ಧ ಔದಾರ್ಯ ಭಾರತದಲ್ಲಿ. ಸೇಶ್ವರ ಸಾಂಖ್ಯ - ನಿರೀಶ್ವರ ಸಾಂಖ್ಯ - ಎರಡಕ್ಕೂ ಇಂಬು ದೊರೆತ ಭರತಖಂಡದಲ್ಲಿ, ಪೂರ್ವಮಿಮಾಂಸಾ ಉತ್ತರ ಮೀಮಾಂಸಾ ಸಿದ್ಧಾಂತಗಳೆರಡಕ್ಕೂ ಪ್ರೋತ್ಸಾಹ ದೊರೆತ ಭರತಖಂಡದಲ್ಲಿ ವೇದ ಪ್ರಾಮಾಣ್ಯವನ್ನೇ ಆಗಲೀ, ವೇದವು ಅಪೌರುಷೇಯವೆಂಬುದನ್ನೇ ಆಗಲೀ ಒಪ್ಪದೇ ಹೋದ ಗೌತಮ ಬುದ್ಧನನ್ನು ಕೂಡ ಮಹಾವಿಷ್ಣುವಿನ ಅವತಾರವೆಂದು ಉದ್ಘೋಷಿಸಿ, ಆಲೋಚನಾ ಸ್ವಾತಂತ್ರ್ಯದ ಪರಾಕಾಷ್ಠೆಯ ವಿಜಯ ಧ್ವಜವನ್ನೆತ್ತಿ ಮೆರೆಸಿದ ಭರತಖಂಡದಲ್ಲಿ ಅನ್ಯಥಾ ನಡೆಯುವುದು ಶಕ್ಯವೇ ಇಲ್ಲ. ಇರುತ್ತಿರಲಿಲ್ಲ.

ಸಮಸ್ತವಿಧವಾದ ಅಭ್ಯುದಯ ಸಾಧನೆಗೂ, ಜನಜೀವನದ ಆಗುಹೋಗುಗಳಿಗೂ ಮನುಷ್ಯ ಪ್ರಯತ್ನದ ಜೊತೆಗೆ ಭಗವತ್ಪ್ರಸಾದದ ಅಗತ್ಯವೂ ಇದೆ. ಈ ಭಾವನೆಯು ಭಾರತೀಯ ಸಂಸ್ಕೃತಿಯ ನಿಲುವುಗಳಲ್ಲಿ ಒಂದಾಗಿದೆ. ಪೌರುಷದಿಂದಲೇ ಸಮಸ್ತವೂ ಸಾಧ್ಯವೆಂಬುದು ಪಾಶ್ಚಾತ್ಯ ಸಂಸ್ಕೃತಿಯ ಕಾರ್ಯಸೂತ್ರ. ಭಗವಂತ ಒಬ್ಬ ಇದ್ದಾನೆ ಎಂಬುದನ್ನು ನಂಬದಿರುವವರೂ, ಮನುಷ್ಯನು ಕೋರಿದುದನ್ನೆಲ್ಲ ಸಾಧಿಸುವುದು ಶಕ್ಯವಿಲ್ಲವೆಂದೂ, ಅಜ್ಞಾತವಾದ ಯಾವುದೋ ಒಂದು ಶಕ್ತಿಯು ಮನುಷ್ಯ ಜೀವನದ ಆಗುಹೋಗುಗಳನ್ನು ನಿಯಂತ್ರಿಸು



ದೆಂಬುದನ್ನೂ ನಂಬದೆ ಯತ್ನವಿಲ್ಲ. ಮನುಷ್ಯ ಪ್ರಯತ್ನದಿಂದಲೇ ಎಲ್ಲವೂ ಸಾಧ್ಯವಾಗುತ್ತದೆ ಎಂಬ ಪಕ್ಷದಲ್ಲಿ ಸಂಸ್ಕೃತವನ್ನು ಅಭ್ಯಾಸ ಮಾಡಿದವರೆಲ್ಲರೂ ಕಾಳಿದಾಸ ವಾಲ್ಮೀಕಿಗಳೇ ಆಗಬಹುದಾಗಿದ್ದಿತು. ಷೇಕ್ಸ್‌ಪಿಯರ್ ಮಹಾ ಕವಿಯು ಅಮರನಾಗಬೇಕಾದ ಅಗತ್ಯವೇ ಇಲ್ಲದೆ ಆಂಗ್ಲಭಾಷೆ ಕಲಿತವರೆಲ್ಲರೂ ಅವನಂತೆಯೇ ನಾಟಕಗಳನ್ನು ಬರೆಯಬಹುದಾಗಿದ್ದಿತು. ವಿದ್ವಾಂಸರ ಮಕ್ಕಳಲ್ಲಿ ದಡ್ಡರೇ ಇಲ್ಲದೆ ಅವರೆಲ್ಲರೂ ತಂದೆಯನ್ನು ಮೀರಿಸ ಬಹುದಾಗಿದ್ದಿತು. ಅನುಕೂಲದೈವ ಆಗಿರುವವರ ಪ್ರಯತ್ನಗಳು ಫಲಿಸುವುವು. ಪ್ರತಿಕೂಲ ದೈವರಾದವರ ಪ್ರಯತ್ನಗಳು ವಿಫಲವಾಗುವುವು. 'ತೇನ ವಿನಾ ತೃಣಮಪಿ ನ ಚಲತಿ' ಎಂಬ ಉದಾತ್ತ ತತ್ವವನ್ನು ಮನಗಂಡು, ದೈವ ನಿರ್ಭರಚಿತ್ತರಾಗಿ, ಪ್ರಯತ್ನ ಮಾಡುವುದು ಮೇಲು - ಎಂಬ ಭಾವನೆಯಿಂದಿರುವುದು ವಿವೇಕ.

ಹೀಗೆಂದ ಮಾತ್ರಕ್ಕೆ ಮನುಷ್ಯ ಪ್ರಯತ್ನವನ್ನು ಕಡೆಗಂಡಂತೆ ಅರ್ಥವಲ್ಲ. ಮನುಷ್ಯ ಪ್ರಯತ್ನಗಳು ಎಷ್ಟೇ ಪ್ರಬಲವಾಗಿರಲಿ ಅವುಗಳಿಂದಲೇ ಉದ್ದಿಷ್ಟಾರ್ಥವು ಎಲ್ಲ ಸಂದರ್ಭಗಳಲ್ಲಿಯೂ ನೆರವೇರುವುದಿಲ್ಲ. ನಮ್ಮ ಪ್ರಯತ್ನಕ್ಕೆ ಮೀರಿದ ಮತ್ತಾವುದೋ ಶಕ್ತಿಯು ನಮ್ಮ ಭಾಗ್ಯ ಪಂಕ್ತಿಯನ್ನು ರೂಪಿಸುತ್ತದೆಂಬುದನ್ನು ಪ್ರಪಂಚದ ವಿವೇಕಿಗಳೆಲ್ಲರೂ ಮನಗಂಡಿದ್ದಾರೆ. ಆ ಶಕ್ತಿಯನ್ನೇ ಭಗವಂತನ ಕೈವಾಡ ಎನ್ನಬಹುದು. ದೇವರಿದ್ದಾನೆ ಎಂದು ಸಮರ್ಥಿಸುವುದು ಶಕ್ಯವಿಲ್ಲವೆಂದು ವಾದ ಹೂಡುವವರಿಗೂ ಪ್ರಾಚೀನಕಾಲದ ನಮ್ಮ ಹಿರಿಯರು ಉತ್ತರ ಹೇಳಿದ್ದಾರೆ. ''ನಾಸ್ತಿ ಚೇನ್ನಾಸ್ತಿನೋ ಹಾನಿಃ ಅಸ್ತಿ ಚೇ ನ್ನಾಸ್ತಿಕೋ ಹತಃ'' (ಭಗವಂತ ಇಲ್ಲವೆಂದಾದರೆ ಆತ ಇರುವನೆಂದು ನಂಬಿ ನ್ಯಾಯವಾಗಿ ನಡೆದ ನಮಗೆ ಯಾವ ಬಗೆಯ ಹಾನಿಯೂ ಆಗಲಾರದು. ಆತ ಇರುವ ನೆಂದಾದರೆ ಅನ್ಯಾಯಾಚರಣೆ ಮಾಡಿದ ನಾಸ್ತಿಕನಿಗೆ ಕೇಡು ತಪ್ಪದು. ಭಗವಂತನ ಅಸ್ತಿತ್ವ ಒಂದೆಡೆಯಿರಲಿ. ಆತ ಇಲ್ಲವೆಂಬ ಭಾವನೆ ಬಲಿತಷ್ಟೂ, ಪೌರುಷದಿಂದಲೇ ಸಮಸ್ತವೂ ಸಾಧ್ಯ ಎಂಬ ಭಾವನೆಯು ರೂಢಮೂಲ ಆದಷ್ಟೂ ಮಾನವನ ದುರಹಂಕಾರ ಪ್ರವೃತ್ತಿಯು ವೃದ್ಧಿಯಾಗಿ, ಸ್ವಾರ್ಥಸಾಧನೆಯೇ ಪರಮಾರ್ಥ ವೆನಿಸುವ ಸಂಭವವುಂಟು. ಭಗವಂತ ನಿರುವನೆಂಬ ಭಾವನೆ ಬಲಿತಷ್ಟೂ ಪೌರುಷದ ಜೊತೆಗೆ ಭಗವಂತನ ಕೃಪೆಯೂ ಸೇರಿದಲ್ಲದೆ ಯಾವುದೂ ಸಾಧ್ಯವಾಗದು ಎಂಬ ಭಾವನೆ ರೂಢ ಮೂಲವಾದಷ್ಟೂ, ಮಾನವನ ಹೃದಯದಲ್ಲಿ ವಿನೀತವೃತ್ತಿಯು ವೃದ್ಧಿ ಯಾಗುವುದು. ಪರೋಪಕಾರವೇ ಪುಣ್ಯ ಸಾಧಕವಾದ ಪರಮಾರ್ಥವೆಂಬುದು ಖಚಿತವಾಗುವುದು.

ಅದರ ಪರಾಕಾಷ್ಠೆಯೆಂದರೆ ಈ ಜಗತ್ತಿನಲ್ಲಿ ಸುಖವಾಗಿ ಬಾಳಲು ಮನುಷ್ಯರಂತೆಯೇ ಪಶು - ಪಕ್ಷಿಗಳೇ ಮೊದಲಾದ ಸಮಸ್ತ ಪ್ರಾಣಿಗಳಿಗೂ ಹಕ್ಕಿದೆಯೆಂಬ ಮನೋಧರ್ಮ. ''ಅಹಿಂಸಾ ಪರಮೋಧರ್ಮಃ'' ಎಂಬ ಉದಾತ್ತ ಭಾವನೆ. ಶ್ರೀರಾಮಚಂದ್ರನೇ ಮುಂತಾದ ಅವತಾರ ಪುರುಷರೂ ಕೂಡ ಮೃಗಗಳೂ ತರುಲತೆಗಳೂ ತಮ್ಮ ಬಂಧುಗಳೆಂಬ ಭಾವನೆಯಿಂದ ವರ್ತಿಸಿದ ಅನುಕಂಪದ ಬುದ್ಧಿ. ಈ ಬಗೆಯ ಅನುಕಂಪಭಾವವೂ, ಬಂಧುಸರಣಿಯೂ ಮಿಲ್ಟನ್ನನ ಪ್ಯಾರಡೈಸ್ ಲಾಸ್ಟ್‌ನ ಆಡಮ್‌ನಿಗಿಲ್ಲ. ಆ ಮಹಾವ್ಯಕ್ತಿಯನ್ನು ಕಂಡರೆ ಪ್ರಾಣಿಗಳಿಗೆಲ್ಲ ಭಯ. ಈ ಪ್ರಪಂಚದಲ್ಲಿ ಸುಖವಾಗಿ ಬಾಳಲು ಮಾನವರಂತೆಯೇ ಸಮಸ್ತ ಪ್ರಾಣಿಗಳಿಗೂ ಹಕ್ಕಿದೆಯೆಂಬ ಮತ್ತು ಈ ಪ್ರಪಂಚ ಸೃಷ್ಟಿಯಾಗಿರುವುದು ಮಾನವ ವರ್ಗದ ಉಪಭೋಗಕ್ಕೆ ಮಾತ್ರವೇ ಅಲ್ಲವೆಂಬ ಉದಾತ್ತ ಭಾವನೆಯು ಅಲ್ಪಸ್ವಲ್ಪವಾದರೂ ಪಾಶ್ಚಿಮಾತ್ಯರಿಗೆ ಸ್ಫುರಿಸಿದ್ದೇ ಹತ್ತೊಂಭತ್ತನೆಯ ಶತಮಾನದಲ್ಲಿ. ಕ್ರಿಸ್ತ ಪೂರ್ವದ ಅನೇಕ ಶತಮಾನಗಳ ಹಿಂದೆಯೇ ಭಾರತೀಯರು ಇದನ್ನು ಮನಗಂಡು ಕಾರ್ಯಕ್ಷೇತ್ರಕ್ಕೆ ತಂದಿದ್ದರು. ಇದು ಭಾರತೀಯ ಸಂಸ್ಕೃತಿಯ ಅಮೋಘವಾದ ವೈಶಿಷ್ಟ್ಯ. ಇದಕ್ಕಾಗಿ ಭಾರತೀಯರು ಈ ವೈಶಿಷ್ಟ್ಯವನ್ನು ಮತ್ತೆ ಮತ್ತೆ ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡರು. ಪಾಶ್ಚಾತ್ಯರು ಇನ್ನಾದರೂ ಇದನ್ನು ಕಾರ್ಯರೂಪಕ್ಕೆ ತಂದರೆ ಮನುಕುಲಕ್ಕೆ ಮಂಗಳವಾಗಲು ಸಾಧ್ಯ.

ಸ್ವದೇಶ ಪ್ರೇಮದೊಡನೆ ವಿಶ್ವಪ್ರೇಮವನ್ನು ಮನದಲ್ಲಿಟ್ಟುಕೊಂಡು ವರ್ತಿಸಬೇಕೆಂಬುದು ಭಾರತೀಯ ಸಂಸ್ಕೃತಿಯ ನಿಲುವು. ಈ ವಿಚಾರದಲ್ಲಿ ಭರತಖಂಡದಂತೆ ಮತ್ತಾವ ದೇಶವೂ ವರ್ತಿಸಿಲ್ಲ. ಹಿಂದಿನ ಶತಮಾನ ಗಳಲ್ಲಿಯಾಗಲೀ, ಈಚಿನ ಶತಮಾನಗಳಲ್ಲಿ ಯಾಗಲೀ ಪಾಶ್ಚಾತ್ಯ ಜನಾಂಗಗಳ ದೃಷ್ಟಿ ಕೇವಲ ಸಂಕುಚಿತವಾದ ದೃಷ್ಟಿ. ಅವುಗಳ ದೃಷ್ಟಿಯಲ್ಲಿ ಸ್ವದೇಶ ಅಭಿವೃದ್ಧಿಯಾದರೆ ಸಾಕು, ಇತರ ದೇಶಗಳು ಹಾಳಾದರೂ ಚಿಂತೆಯಿಲ್ಲ. ಯೂರೋಪಿನ ಯಾವ ದೇಶವನ್ನು ನೋಡಿದರೂ ಇದೇ ಬಗೆಯ ಸಂಕುಚಿತ ದೃಷ್ಟಿ ಕಂಡುಬರುತ್ತದೆ. ಅಂತರರಾಷ್ಟ್ರೀಯ ಮನೋಭಾವದಿಂದ ವರ್ತಿಸಬೇಕೆಂಬುದು ಈಚಿನ ಪ್ರಯತ್ನವಷ್ಟೆ. ಈ ಬಗೆಯ ವಿಶ್ವಪ್ರೇಮದಿಂದ ವರ್ತಿಸುವು ದಾಗಲೀ, ದುರ್ಬಲವರ್ಗಗಳಿಗೆ ನ್ಯಾಯವು ದೊರೆಯುವ ಭರವಸೆಯಾಗಲೀ ಇನ್ನೂ ಬಹುಕಾಲದ ಮೇಲೆ ಸಾಧ್ಯವಾಗುವುದಾದರೆ ಅದು ನಿಜವಾಗಿಯೂ ಆಶ್ಚರ್ಯದ ಸಂಗತಿಯೇ! ಪ್ರಾಚೀನ ಭರತಖಂಡವು ''ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ'' ಎಂದೂ, (ಜನನಿಯೂ ಜನ್ಮಭೂಮಿಯೂ ಸ್ವರ್ಗಕ್ಕಿಂತ ಶ್ರೇಷ್ಠ)

ತ್ವತ್ ವೃಕ್ಷಾಃ ಕಲ್ಪವೃಕ್ಷಾಶ್ಚ
ಚಿಂತಾಮಣಿ ಶಿಲಾಶ್ಶಿಲಾಃ
ತ್ವತ್ ವನಂ ನಂದನಂ ಸಾಕ್ಷಾತ್
ಸಾಕ್ಷಾತ್ ತ್ವಂ ಸ್ವರ್ಗದೇವತಾ

-ನಿನ್ನ ಮರಗಳೆಲ್ಲವೂ ಕಲ್ಪವೃಕ್ಷಗಳೇ. ನಿನ್ನ ಶಿಲೆಗಳೆಲ್ಲ ಚಿಂತಾಮಣಿಗಳು. ನಿನ್ನ ಉದ್ಯಾನ ವನಗಳೆಲ್ಲ ನಂದನ ವನಗಳು. ನೀನೋ ಸ್ವರ್ಗದೇವತೆ ಎಂದು ತಾಯಿನಾಡ - ಬಗ್ಗೆ ಉದ್ಘೋಷ ಮಾಡಲಾಗಿದೆ. ಇಂದಿನ

ಭಾರತೇತರ ಬಹುತೀಕ ಮಂದಿಯ ಊಹೆಗೂ ಸಾಧ್ಯವಲ್ಲದ ರೀತಿಯಲ್ಲಿ ದೇಶಪ್ರೇಮದಿಂದ ವರ್ತಿಸಿ ಅಭ್ಯುದಯ ಸಾಧನೆಯಲ್ಲಿ ತೊಡಗಿಸಿಕೊಳ್ಳಲಾಗಿದೆ.

ಹೀಗೆ ಸ್ವದೇಶ ಪ್ರೇಮದ ಉದ್ದೀಪ್ತಿಯಿದ್ದರೂ ಪ್ರಾಚೀನ ಭಾರತದ ದೃಷ್ಟಿಯು ಮಾತ್ರ ಉದಾರವಾದ ವಿಶ್ವಪ್ರೇಮದ ದೃಷ್ಟಿ. ಒಟ್ಟು ಮನುಷ್ಯ ವರ್ಗದ ಕಲ್ಯಾಣ ಸಾಧನೆಯೇ ಅದರ ಆಕಾಂಕ್ಷೆ. ''ಲೋಕಾಃ ಸಮಸ್ತಾ ಸುಖಿನೋ ಭವಂತು'', ''ಸರ್ವೇ ಜನಾಃ ಸುಖಿನೋ ಭವಂತು'', ''ಸರ್ವಸ್ಸರ್ವತ್ರ ನಂದತು'' ಎಂಬ ಮಾತುಗಳು ಇಲ್ಲಿ ಕಾರ್ಯಸೂತ್ರಗಳಾದವು. ಇದು ದೌರ್ಬಲ್ಯದ ದೈನ್ಯಾಲಾಪಗಳೆಂದು ಹಿಂದಿನ ತಲೆ ಮಾರುಗಳಲ್ಲಿ ಪಾಶ್ಚಿಮಾತ್ಯರನೇಕರು ಭಾವಿಸಿದ್ದರು. ಕೆಲವೇ ವರ್ಷಗಳ ಹಿಂದೆ ಫ್ರಾನ್ಸ್ ದೇಶದಲ್ಲಿ ನಡೆದ ದಾರ್ಶನಿಕರ ಸಮ್ಮೇಳನದಲ್ಲಿ ನೆರೆದಿದ್ದ ಇಡೀ ಪ್ರಪಂಚದ ನಾನಾ ದೇಶಗಳ ಪ್ರತಿನಿಧಿಗಳಾದ ಪ್ರಚಂಡ ಮೇಧಾವಿಗಳು ಇಂತಹ ಮಾತುಗಳನ್ನು ಕೇಳಿ ಆಶ್ಚರ್ಯಚಕಿತರಾದರಂತೆ. ಪ್ರಾಣಿ ಮಾತ್ರದಲ್ಲಿ ದಯೆ ತೋರುತ್ತಿದ್ದುದೂ, ಸಾಮ್ರಾಟ ಅಶೋಕನು ನಿರ್ಮಿಸಿದ ಪಶು ವೈದ್ಯಶಾಲೆಯು ಜಗತ್ತಿನ ಪಶುವೈದ್ಯಶಾಲೆಯ ಪ್ರಥಮ ಉಲ್ಲೇಖ ಆಗಿದ್ದುದೂ, ಅಶೋಕನೇ ಮೊದಲಾದ ಹಿರಿಯ ಸಾಮ್ರಾಟರೂ ವಿದೇಶೀ ಆಕ್ರಮಣ ಮಾಡುವ ಬಲ ಹೊಂದಿದ್ದರೂ ಅತ್ತ ಗಮನಕೊಡದೆ, ಧರ್ಮಬೋಧಕರನ್ನು ಕಳುಹಿಸಿದುದೂ, ಹರ್ಷವರ್ಧನ ಮುಂತಾದ ಭಾರತದ ರಾಜರ ಆಸ್ಥಾನಗಳಲ್ಲಿಯೂ, ನಾಲಂದ ಮೊದಲಾದ ವಿಶ್ವವಿದ್ಯಾನಿಲಯಗಳಲ್ಲಿಯೂ ವಿದೇಶೀ ರಾಯಭಾರಿಗಳಿಗೆ, ಧರ್ಮ ಚಿಂತಕರಿಗೆ, ವಿದ್ವಾಂಸರಿಗೆ ದೊರೆಯುತ್ತಿದ್ದ ರಾಜಗೌರವ, ರಾಜೋಪಚಾರ ನಡೆಯುತ್ತಿದ್ದುದಕ್ಕೆ ಕಾರಣ ಈ ವಿಶ್ವಪ್ರೇಮ ದೃಷ್ಟಿ ಮಾತ್ರವೇ, ಇಂದಿಗೂ ಭಾರತವೂ, ಇತರ ದೇಶಗಳೂ ಈ ವಿಶ್ವಪ್ರೇಮದೃಷ್ಟಿಯಿಂದ ಒಟ್ಟು ಮನುಕುಲದ ಏಳಿಗೆಗೆ, ಅಭಿವೃದ್ಧಿಗೆ ಪ್ರಯತ್ನಿಸಿದಲ್ಲಿ ಜಗತ್ತಿನ ಜನಜೀವನ ಸುಖಮಯವಾಗಲೆಂಬ ಪ್ರಪಂಚದ ಎಲ್ಲೆಡೆ ಯುದ್ಧಭೀತಿ ನಾಶವಾಗಿ ಶಾಶ್ವತಶಾಂತಿ ನೆಲೆಸೀತು.

ಭಾರತೀಯ ಸಂಸ್ಕೃತಿಯ ಮತ್ತೊಂದು ವೈಶಿಷ್ಟ್ಯವೆಂದರೆ ಪ್ರಗತಿಸಾಧನೆಯಲ್ಲಿ ಮುಂದುವರಿದ ಈ ಇಪ್ಪತ್ತೊಂದನೆಯ ಶತಮಾನಕ್ಕೆ ಕೂಡ ಹಲವು ವಿಚಾರಗಳಲ್ಲಿ ಮಾದರಿಯಾಗಿ ಮಾರ್ಗದರ್ಶಿಯಾಗಿರುವಂತಹ ಅದ್ಭುತ ವಿದ್ಯಾಭ್ಯಾಸದ ಕ್ರಮವನ್ನು ಏರ್ಪಡಿಸಿದ್ದು ಎಂದು ಹೇಳಬೇಕು. ಗುರುವಿಗೆ ಶಿಷ್ಯರ ಯೋಗ್ಯತೆಯನ್ನು ಪರೀಕ್ಷಿಸುವ ಅಧಿಕಾರವಿರಬೇಕು ಎಂಬ ಅಮೋಘ ತತ್ವವನ್ನು ಉದ್ಘೋಷಿಸಿದ ದೇಶ ನಮ್ಮದು, ಅದೂ ಕಠೋಪನಿಷತ್ತಿನ ಆ ಕಾಲದಲ್ಲಿ ಯೋಗ್ಯತಾ ಸಿದ್ಧಿಯಿಲ್ಲದೆ ಗೌರವವು ಸಲ್ಲಬೇಕಾದುದಿಲ್ಲವೆಂಬುದು ಇದರ ಹಿನ್ನೆಲೆ. ಕಾರ್ಯಾಕಾರ್ಯ ಪರಿಜ್ಞಾನವಿಲ್ಲದ ಅವಲಿಪ್ತನಾದ ಗುರುವನ್ನು ಶಿಕ್ಷಿಸುವುದು ಶಿಷ್ಯನ ಕರ್ತವ್ಯವೆಂದು ಮಹಾಭಾರತದಲ್ಲಿ ಭೀಷ್ಮನು ತನ್ನ ಗುರು ಪರಶುರಾಮನಿಗೆ ತಿಳಿಸುತ್ತಾನೆ. ಭಾರತೀಯ ಸಂಸ್ಕೃತಿಯ ಹಿರಿಮೆಗೆ ಇದೂ ಒಂದು ಸಾಕ್ಷಿ. ಭರತಖಂಡದ ಗುರುಕುಲ ಪದ್ಧತಿಯಂತೂ ಇಡೀ ಪ್ರಪಂಚಕ್ಕೇ ಭಾರತೀಯ ಸಂಸ್ಕೃತಿಯು ದಾನ ಮಾಡಿದ ಪರಮ ಧ್ಯೇಯವೆಂಬುದು ತಜ್ಞರಾದ ಮೇಧಾವಿ ಶ್ರೇಷ್ಠರಲ್ಲಿ ಕೆಲವರ ಅಭಿಪ್ರಾಯ. ಶೀಲ ಭಂಡಾರಿಯಾದ ಸದ್ಗುರುವಿನ ಸಂಸರ್ಗದಲ್ಲಿ ಅಂತೇವಾಸಿಯಾಗಿ ಆತನ ಅನುಭವ ರಾಸಾಯನವನ್ನು ವಿದ್ಯಾನಿಧಿಯನ್ನು - ಪಡೆಯುವ ವಿದ್ಯಾಭ್ಯಾಸ ಕ್ರಮದಲ್ಲಿ ಲಭಿಸುವ ಜ್ಞಾನಸಂಪತ್ತು, ಶೀಲ ಸಂಪತ್ತುಗಳು ಕೇವಲ ಪುಸ್ತಕ ವ್ಯಾಸಂಗದಿಂದಾಗಲೀ ಗುರುವಿನ ಒಡನಾಟವೇ ಇಲ್ಲದೆ ನಡೆಯುವ ಶಿಕ್ಷಣ ಪ್ರಕ್ರಿಯೆಂದಾಗಲೀ ಸರ್ವಥಾ ಲಭಿಸಲಾರದೆಂಬುದು ನಿಷ್ಪಕ್ಷಪಾತದಿಂದ ನುಡಿಯುವ ತಜ್ಞರ ಮತ.

ತ್ಯಾಗ ಭೋಗಗಳ ಸಾಮರಸ್ಯಮಯವಾದ ತುಂಬುಜೀವನದ ಪ್ರತಿಪಾದನೆ ಭಾರತೀಯ ಸಂಸ್ಕೃತಿಯ ಖಚಿತ ನಿಲುವು. ಭಾರತದ ಜ್ಞಾನಿಗಳು ಶ್ರೇಯಸ್ಸಿನ ಕಡೆ ಹೆಚ್ಚು ಗಮನ ಕೊಡಬೇಕೆಂದು ಬೋಧಿಸಿದರಾದರೂ ಪ್ರೇಯಸ್ಸನ್ನು ಅಲಕ್ಷ್ಯ ಮಾಡಬೇಕೆಂದು ಅವರೆಂದೂ ತಿಳಿಸಲಿಲ್ಲ. ಅನೇಕ ಋಷಿಗಳು ಕೂಡ ಸಂಸಾರಿಗಳಾಗಿದ್ದರು. ಮಾನವನು ಧರ್ಮ ಪರಾಯಣನಾಗಿ ಬಾಳಬೇಕೆಂಬುದು ಭಾರತೀಯ ಸಂಸ್ಕೃತಿಯ ಜೀವಸ್ವರವೆಂಬುದೂ, ಆದಿಕವಿ ವಾಲ್ಮೀಕಿ ಮಹರ್ಷಿಯು ಮಹಾ ಮಾಂಗಲ್ಯ ಮಾನಿನಿಯಾದ ಜಗಜ್ಜನನಿ ಸೀತಾದೇವಿಯಿಂದ ಧರ್ಮಸಾರಮಿದಂ ಜಗತ್ ಎಂದು ಹೇಳಿಸಿರುವುದೂ ನಿಜವೇ. ಧರ್ಮಗ್ಲಾನಿಯಾಗಿ ಅಧರ್ಮದ ಅಭ್ಯುತ್ಥಾನವಾದಾಗಲೆಲ್ಲ, ಯುಗ ಯುಗದಲ್ಲಿಯೂ ಧರ್ಮಸಂಸ್ಥಾಪನೆಗಾಗಿ ತಾನು ಅವತರಿಸುವೆನೆಂದು ಭಗವಂತ ಹೇಳಿರುವುದೂ ನಿಜವೇ. ಧರ್ಮವೆಂದರೇನು? ಅಭ್ಯುದಯ ನಿಃಶ್ರೇಯಸಿದ್ಧಿಗಳೆರಡಕ್ಕೂ ಸಾಧಕವಾದುದಾವುದೋ ಅದೇ ಧರ್ಮ. ಇದೆಷ್ಟು ಉದಾರವಾದ ಭಾವನೆ ಎಂಬುದನ್ನು ವರ್ಣಿಸಲು ಸಾಧ್ಯವಿಲ್ಲ. ಧರ್ಮ ಅರ್ಥ ಕಾಮ ಮೋಕ್ಷ - ಎಂಬ ನಾಲ್ಕು ಪುರುಷಾರ್ಥಗಳಿಗೂ ಮಾನವ ಜೀವನದಲ್ಲಿ ಸಮಾನವಾದ ಯಥಾ ಉಚಿತವಾದ ಸ್ಥಾನಗಳಿರಬೇಕು ಎಂಬುದು ಪ್ರಪಂಚದ ಮತ್ತಾವ ದೇಶದ ಸಂಸ್ಕೃತಿಯಲ್ಲಿಯೂ ಕಂಡು ಬರದಿದ್ದ ಅದ್ಭುತಕಲ್ಪನೆ. ಐಹಿಕ ಜೀವನದಲ್ಲಿ ಅಭ್ಯುದಯ ಸಾಧನೆ ಮಾಡಿ ಶ್ರೇಯಸ್ಸನ್ನು ಸಾಧಿಸಬೇಕು ಎಂಬುದು ಜೀವನದ ಪರಮೋಚ್ಚ ಧ್ಯೇಯ. ವಿದ್ಯಾಭ್ಯಾಸವನ್ನು ಪೂರೈಸಿದ ಸ್ನಾತಕರಿಗೆ ಗುರುವು -

ಸತ್ಯಾನ್ನ ಪ್ರಮದಿತವ್ಯಮ್
ಧರ್ಮಾನ್ನ ಪ್ರಮದಿತವ್ಯಮ್
ಕುಶಲಾನ್ನ ಪ್ರಮದಿತವ್ಯಮ್
ಭೂತ್ಯೈ ನ ಪ್ರಮದಿತವ್ಯಂ
ಸ್ವಾಧ್ಯಾಯ ಪ್ರವಚನಾಭ್ಯಾಮ್
ನ ಪ್ರಮದಿತವ್ಯಮ್

- ಸತ್ಯಕ್ಕೆ ತಪ್ಪಿ ನಡೆಯಕೂಡದು. ಧರ್ಮಕ್ಕೆ ತಪ್ಪಿ ನಡೆಯಬಾರದು, ಕಲೆಗಳಿಗೆ ಕೌಶಲಗಳಿಗೆ



ತಪ್ಪಿ ನಡೆಯಬಾರದು, ಪ್ರಕೃತಿಗೆ ತಪ್ಪಿನಡೆಯಬಾರದು, ಅಧ್ಯಯನ ಪ್ರವಚನ ಗಳಿಗೆ ತಪ್ಪಿ ನಡೆಯಬಾರದು - ಎಂದು ಉಪದೇಶಿಸಿ ಬೀಳ್ಕೊಡುತ್ತಿದ್ದನು. ಹಾಗೆ ವರ್ತಿಸುವುದರಿಂದ ಉಂಟಾಗತಕ್ಕ ಪ್ರಯೋಜನವನ್ನೂ ಗುರುವು ಫಲಶ್ರುತಿಯಲ್ಲಿ ಹೇಳುವನು - ''ನಿನ್ನ ದೇಹವು ಎಲ್ಲ ಕಠಿಣ ಕೆಲಸಗಳಿಗೂ ಸಜ್ಜಾಗಿ ದಾರ್ಢ್ಯದಿಂದ ಇರುವುದು. ನಿನ್ನನಾಲಿಗೆಯು ಸರ್ವದಾ ಅತ್ಯಂತ ಮಧುರವಾದ ಮಾತುಗಳನ್ನೇ ನುಡಿಯುವುದು. ನೀನು ಯಾವಾಗಲೂ ಕಿವಿಯಿಂದ ಶುಭವಾರ್ತೆಗಳನ್ನೇ ಕೇಳುವೆ''. ಇದಕ್ಕಿಂತ ಸರಳ ಸುಂದರವಾದ ಉಚ್ಚಧ್ಯೇಯಗಳನ್ನು ಗೃಹಸ್ಥಾಶ್ರಮ ಸ್ವೀಕಾರ ಮಾಡುವ ಯುವಕರಿಗೆ ಹೇಳುವುದಾದರೂ ಸಾಧ್ಯವೇ?

ಪ್ರಾಚೀನ ಕಾಲದ ಭಾರತೀಯರಿಗೆ ಜೀವನದಲ್ಲಿ ಆಸಕ್ತಿಯೇ ಇರಲಿಲ್ಲವೆಂದೂ, ಎಂದಿಗೆ ಸಾವು ಬಂದೀತೋ ಎಂದು ಬಯಸುವ ನಿರಾಶಾವಾದವು ಅವರದೆಂದೂ ಭಾವಿಸುವ ಮಾತು ಅರ್ಥವಿಲ್ಲದ ಪೊಳ್ಳುಕೂಗು.

ಪಶ್ಯೇಮ ಶರದಶ್ಶತಮ್
ಜೀವೇಮ ಶರದ ಶ್ಶತಮ್
ಶ್ರುಣುಯಾಮ ಶರದಶ್ಶತಮ್
...............................
ಪ್ರಬವಾಮ ಶರದಶ್ಶತಮ್
ಅದೀನಾ ಶರದಶ್ಶತಮ್
ಭೂಯಶ್ಚ ಶರದಶ್ಶತಮ್

**ವೃಕ್ಷೋ ರಕ್ಷತಿ ರಕ್ಷಿತಃ**

**ಹಸಿರಿನಿಂದಲೆ ನೀರು**
**ಹಸಿರಿನಿಂದಲೆ ಬೆಳೆಯು**
**ಹಸಿರಿನಿಂದಲೆ ಉಸಿರು**
**ಹಸಿರಿನಿಂದಲೆಜಗವು**
**ಹಸಿರಿನಿಂದಲೆ ಜೀವ**

- ನೂರು ವರ್ಷ ನೋಡುವುದಾಗಲಿ, ನೂರು ವರ್ಷ ಜೀವಿಸುವ. ನೂರು ವರ್ಷ ಕರ್ಣಪಾಟವ ವಿರಲಿ, ನೂರು ವರ್ಷ ಬೋಧಿಸೋಣ, ನೂರು ವರ್ಷ ದೈನ್ಯ ರಹಿತರಾಗಿರುವ. ನೂರು ವರ್ಷ ಸುಖದಿಂದ ಇರುವಂತಾಗಲಿ, ಈ ಮಾತುಗಳಿಗಿಂತಲೂ ಹೆಚ್ಚಿನ ಹಾರೈಕೆ ಆಶಾವಾದ ಮತ್ತಾವುದು? ಪ್ರೇಯಸ್ಸು ಶ್ರೇಯಸ್ಸುಗಳ ಸಾಮರಸ್ಯವನ್ನು ಕಲ್ಪಿಸುವುದರಲ್ಲಿ, ಅವೆರಡರ ಪರಾಕಾಷ್ಠೆಗಳನ್ನೇ ನಮ್ಮ ಹಿಂದಿನ ಋಷಿಮುನಿಗಳು ಸಾಧಿಸಿದ್ದರು. ಉಪನಿಷತ್ತು ಗಳಲ್ಲಿರುವಂತಹ ಶಾಂತಿ - ಸಂಸ್ಕೃತಿದಾಯಕಗಳಾದ ಅಮೃತವಾಣಿಗಳು ಜಗತ್ತಿನ ಮತ್ತೆ ಯಾವ ಗ್ರಂಥದಲ್ಲಿಯೂ ಇಲ್ಲವೆಂದು ಸ್ವದೇಶ ವಿದೇಶಗಳ ಪ್ರಾಜ್ಞರನೇಕರು ಮುಕ್ತಕಂಠದಿಂದ ಹೇಳಿದ್ದಾರೆ.

ಭಗವದ್ಗೀತೆ ಬೋಧಿಸಿದ -

ಯೇ ಯೇ ಯಾಂ ಯಾಂ ತನುಂ ಭಕ್ತಃ
ಶ್ರದ್ಧಯಾರ್ಚಿತುಮಿಚ್ಛತಿ
ತಸ್ಯ ತಸ್ಯಾಚಲಾಂ ಶ್ರದ್ಧಾಂ
ತಾಮೇವ ವಿದಧಾಮ್ಯಹಮ್

- ಎಂಬ ಶ್ಲೋಕವು ಒಟ್ಟು ವಿಶ್ವಕ್ಕೇ ನೀಡಿದಂತಹ ಮಂಗಳಾಶಾಸನ. ಇತರ ದೇಶಗಳ ಮತ್ತಾವ ಧರ್ಮದಲ್ಲಿಯೂ ಇಷ್ಟು ಮಟ್ಟಿನ ಉದಾರಭಾವನೆಯಿಲ್ಲ. ಅಭ್ಯುದಯ ಸಾಧಕ ವಿಚಾರಗಳಲ್ಲಿ ಕೂಡ ಜನಜೀವನದ ಹಲವು ಕ್ಷೇತ್ರಗಳಲ್ಲಿ ಭಾರತೀಯ ಸಂಸ್ಕೃತಿಯು ಪರಿಪೂರ್ಣತೆಯನ್ನೇ ಸಾಧಿಸಿತೆಂದು ಧಾರಾಳವಾಗಿ ಹೇಳಬಹುದು. ಇತ್ತೀಚೆಗೆ ಇತರ ದೇಶಗಳಲ್ಲಿ, ಸಂಶೋಧನೆಗಳಿಂದ ಹೊರಟಿರುವ ಹಲವು ವೈಜ್ಞಾನಿಕ ವಿಚಾರಗಳು [illegible]ರಭಾಷ್ಯಾದಿ ಗ್ರಂಥಗಳಲ್ಲಿವೆ.

ಪ್ರಗತಿ ಪರವಾದ ಪಾಶ್ಚಾತ್ಯ ದೇಶಗಳಲ್ಲಿ ಅಪಾರವಾದ ಯಂತ್ರ ಸಂಪತ್ತು ಸಂಶೋಧನ ಸಾಮರ್ಥ್ಯಗಳು ವೃದ್ಧಿಯಾಗಿದ್ದರೂ ಕೂಡ ಪ್ರಾಚೀನ ಭಾರತದಲ್ಲಿ ನೇಯುತ್ತಿದ್ದಷ್ಟು ಸೂಕ್ಷ್ಮವಾದ, ನವುರಾದ, ತೆಳುವಾದ ಬಟ್ಟೆಯನ್ನು ನೇಯಲು ಅಲ್ಲಿಯವರಿಗೆ ಇಂದಿಗೂ ಸಾಧ್ಯವಾಗಿಲ್ಲ. ವೀಣಾವಾದ್ಯವನ್ನು ಹೋಲುವ ತಂತ್ರೀ ವಾದ್ಯವೂ ಕೊಳಲನ್ನು ಹೋಲುವ ರಂಧ್ರೀ ವಾದ್ಯವೂ ಮೃದಂಗವನ್ನು ಹೋಲುವ ಚರ್ಮವಾದ್ಯವೂ ಇಡೀ ಪ್ರಪಂಚದಲ್ಲಿಯೇ ಮತ್ತಾವ ದೇಶದಲ್ಲಿಯೂ ಇಲ್ಲ. ತುಕ್ಕು ಹಿಡಿಯದಂತಹ ಉಕ್ಕನ್ನು ಕ್ರಿಸ್ತಪೂರ್ವ ಮೂರನೆಯ ಶತಮಾನದಲ್ಲಿಯೇ ನಮ್ಮ ಪೂರ್ವಿಕರು ಕಂಡು ಹಿಡಿದಿದ್ದರು. ಅದನ್ನು ಪಾಶ್ಚಾತ್ಯರು ಕಂಡು ಕೊಂಡದ್ದು ತೀರ ಈಚೆಗಷ್ಟೆ. ಭಾರತದಲ್ಲಿ ವಾಣಿಜ್ಯ ಕೈಗಾರಿಕೆಗಳು ಯಥೇಷ್ಟವಾಗಿ ವೃದ್ಧಿಹೊಂದಿ ಪರದೇಶಗಳೊಂದಿಗೆ ನಡೆಯುತ್ತಿದ್ದ ವ್ಯಾಪಾರ ವಹಿವಾಟಿನಿಂದ ಭಾರತಕ್ಕೆ ಹೊನ್ನಿನ ಹೊಳೆ ಹರಿದು ಬರುತ್ತಿದ್ದಿತು.

ಅನೇಕ ವಿಚಾರಗಳಲ್ಲಿ ತೀರ ಪ್ರಾಚೀನಕಾಲದಲ್ಲಿಯೇ ಇಂದು ಇತರ ದೇಶಗಳಲ್ಲಿ ಕಂಡು ಬರುವುದಕ್ಕಿಂತಲೂ ಹೆಚ್ಚಿನ ಪ್ರಗತಿ ಸಾಧನೆ ಮಾಡಿದ್ದುದು ಭಾರತೀಯ ಸಂಸ್ಕೃತಿಯ ಹಿರಿಮೆ ಗರಿಮೆಗಳಿಗೆ ಜ್ವಲಂತ ನಿದರ್ಶನ. ಪರದೇಶೀಯರ ಮುತ್ತಿಗೆಗಳು, ಧಾಳಿಗಳೂ, ಆಘಾತಗಳೂ ಸಂಭವಿಸದೆ ಭಾರತೀಯ ಸಂಸ್ಕೃತಿಯು ಏಕಪ್ರಕಾರವಾಗಿ ವೃದ್ಧಿಹೊಂದಿದ್ದರೆ, ಭಾರತೀಯ ಸಂಸ್ಕೃತಿಯ ಅಮೃತ ವಾಹಿನಿಗೆ ಈಚಿನ ಶತಮಾನಗಳ ಹಲವಾರು ದೋಷಪೂರಿತವಾದ ವಿಪರೀತ ವರ್ತನೆಗಳ ರೂಪದ ಕಲ್ಮಷವು ಸೇರದೆ ಹೋಗಿದ್ದರೆ, ಭಾರತವು ಈಗಿನ ಸ್ಥಿತಿಯಲ್ಲಿ ಅಭಿವೃದ್ಧಿಗಾಗಿ ಪರದಾಡಬೇಕಾದ ಹೊತ್ತು ಬರುತ್ತಿರಲಿಲ್ಲ ಎಂದು ಧಾರಾಳವಾಗಿ ಹೇಳಬಹುದು. ಈಗಲೂ ಭಾರತೀಯರಾದ ನಾವೆಲ್ಲ ಎಚ್ಚೆತ್ತು ನಮ್ಮ ಸಂಸ್ಕೃತಿಯಲ್ಲಿ ಸೇರಿರುವ ಕೊಳೆಕಸಗಳನ್ನು ಹೋಗಲಾಡಿಸಿ, ಪ್ರಪಂಚದ ಇತರ ದೇಶಗಳ ಅನುಭವಗಳ ಪ್ರಯೋಜನ ಪಡೆದು, ತ್ರಿಕರಣ ಶುದ್ಧರಾಗಿ ಆತ್ಮೋನ್ನತಿಯನ್ನೂ ದೇಶೋನ್ನತಿಯನ್ನೂ ಸಾಧಿಸುವ ಪ್ರಯತ್ನಕ್ಕೆಗೊಂಡರೆ ಜಗತ್ತೇ ವಿಸ್ಮಯ ಪಡುವಂತೆ ಅಭ್ಯುದಯಸಾಧನೆ ಮಾಡುವುದು ಸರ್ವಥಾ ಅಸಾಧ್ಯವೇನಲ್ಲ.

★★★★★



# ತಿರುಮಲೆ - ತಿರುಪತಿ - ತಿರುಚಾನೂರು


ಮೂಲ : **ಡಾ॥ ಎಂ. ರಾಮರಾವ್** ಎಂ.ಎ.ಪಿಹೆಚ್.ಡಿ.

ಅನುವಾದ : **ಎಸ್. ವಿ. ಹೇಮಾವತಿ** ಎಂ.ಎ., ಬಿ.ಎಡ್.


## ತಿರುಮಲೆಯ ಐತಿಹ್ಯಗಳು

ತಿರುಮಲೆಯ ದೇವರು ಶ್ರೀ ವೆಂಕಟೇಶ್ವರಸ್ವಾಮಿಯ ಬಗ್ಗೆ, ಆತ ಇಲ್ಲಿ ಬಂದು ನೆಲೆಸಿದ ಬಗ್ಗೆ, ಹಲವಾರು ಕತೆಗಳು ಐತಿಹ್ಯಗಳು ಪ್ರಚಲಿತವಾಗಿವೆ. ಇವುಗಳನ್ನು ಹಲವು ಪುರಾಣಗಳಲ್ಲಿ ಕಾಣಬಹುದು. ಈ ಎಲ್ಲ ಕತೆ ಐತಿಹ್ಯಗಳನ್ನು ಸಂಗ್ರಹಿಸಿ ವೆಂಕಟಾಚಲ ಮಹಾತ್ಮ್ಯಂ ಎಂಬ ಪುಸ್ತಕದಲ್ಲಿ ನೀಡಲಾಗಿದೆ. ತಿರುಮಲೆಯ ಒಂದು ಶಾಸನದಲ್ಲಿ ಈ ವೆಂಕಟಾಚಲ ಮಹಾತ್ಮ್ಯವನ್ನು ದೇವರ ಮುಂದೆ ಓದಲಾಗುತ್ತಿತ್ತು ಎಂಬ ಉಲ್ಲೇಖವಿದೆ. [illegible] ಮುದ್ರಿತವಾಗಿ [illegible]. ಅಭಿಪ್ರಾಯ [illegible] ಪುಸ್ತಕವು [illegible] ಹೇಳುವುದಿಲ್ಲ. ಈ ಪುಸ್ತಕದಲ್ಲಿ [illegible], ಪದ್ಮ, ಗರುಡ, ಬ್ರಹ್ಮಾಂಡ, ಮಾರ್ಕಂಡೇಯ, ಹರಿವಂಶ, ವಾಮನ, ಬ್ರಹ್ಮ, ಬ್ರಹ್ಮೋತ್ತರ, ಆದಿತ್ಯ, ಸ್ಕಂಧ ಭವಿಷ್ಯೋತ್ತರ ಪುರಾಣಗಳಲ್ಲಿನ ಭಾಗಗಳು ಇವೆ. [illegible] ತಿರುಮಲೆಯ ಪಾವಿತ್ರ್ಯ, [illegible], [illegible]ಯನ್ನೂ ಇಲ್ಲಿನ ತೀರ್ಥಗಳ ಮಹಾತ್ಮ್ಯವನ್ನೂ ಬಣ್ಣಿಸುತ್ತವೆ. ಕೆಲವಂತು ಐತಿಹ್ಯಗಳನ್ನು ಹರಿವಂಶ, ಬ್ರಹ್ಮ, ಬ್ರಹ್ಮಾಂಡ, ಭವಿಷ್ಯೋತ್ತರ ಪುರಾಣಗಳಿಂದ ತೆಗೆದು [illegible] ವಿಶೇಷ ಆಸಕ್ತಿದಾಯಕವಾಗಿವೆ.

**ಸ್ವಾಮಿ ಶೇಷಾಚಲಕ್ಕೆ ಬಂದ ಬಗೆ :**

ಬೆಟ್ಟದ ಮೇಲೆ ವೆಂಕಟೇಶ್ವರಸ್ವಾಮಿಯು ನೆಲೆಸಲು ಕಾರಣಗಳನ್ನು ವಿವಿಧ ರೀತಿಯಲ್ಲಿ ನಿರೂಪಿಸಲಾಗಿದೆ.

ವಿಷ್ಣುವು ವೈಕುಂಠವನ್ನು ಬಿಟ್ಟು ಬೇರೆ ಕಡೆ ಸ್ವಲ್ಪಕಾಲ ಇರಬೇಕೆಂದು ಯೋಚಿಸಿ ನಾರದನನ್ನು ಒಂದು ಸೂಕ್ತ ಸ್ಥಳವನ್ನು ತೋರಿಸಬೇಕೆಂದು ಕೇಳಿದನು. ನಾರದನು ಭವಿಷ್ಯ ಕಾಲದಲ್ಲಿ ಶೇಷಾಚಲ ಉಂಟಾಗುವ ಸ್ಥಳವನ್ನು ತೋರಿಸಿದನು. ವಾಯುಶೇಷರು ಪರಸ್ಪರ ಬಲಾಬಲ ಸ್ಪರ್ಧೆಯಲ್ಲಿ ತೊಡಗಿ ಶೇಷನು ಮೇರು ಪರ್ವತವನ್ನು ಸುತ್ತಿಕೊಂಡು ಇದ್ದಾಗ ವಾಯುವು ಪರ್ವತವನ್ನು ಕದಲಿಸಲು ಪ್ರಯತ್ನಿಸಿದನು. ಇದು ಸಾಧ್ಯವಾಗದೆ ಕೊನೆಗೆ ಶೇಷನು ಉಸಿರಾಡಲೆಂದು ಬಾಯಿ ತೆಗೆದಾಗ ವಾಯುವು ತೆರೆದ ಬಾಯಿ ಮೂಲಕ ಶೇಷನ ದೇಹವನ್ನು ಸೇರಿ ಶೇಷ ಸಮೇತವಾದ ಮೇರುಪರ್ವತವನ್ನು ಆಕಾಶದಲ್ಲಿ ಹಾರಿಸಿಕೊಂಡು ಹೋದನು. ಮೇರುಪರ್ವತವು ಶೇಷನನ್ನು ಬಿಟ್ಟುಬಿಡುವಂತೆ ಕೇಳಿದಾಗ ವಾಯುವು ಶೇಷನನ್ನು ಬಿಟ್ಟು ಹೊರಬಂದನು. ಸೋತ ಶೇಷನು ವಿಷ್ಣುವನ್ನು ಕುರಿತು ತಪಸ್ಸು ಮಾಡಿದ. ಪ್ರತ್ಯಕ್ಷನಾದ ವಿಷ್ಣುವು ವರವನ್ನು ಕೊಡಲು ಮುಂದಾದನು. ಶೇಷನು ತಾನು ಪರ್ವತವಾಗುವುದಾಗಿಯೂ ವಿಷ್ಣುವು ತನ್ನ ತಲೆಯ ಮೇಲೆ ನಿಂತು ಅನುಗ್ರಹಿಸಬೇಕೆಂದು ಕೇಳಿಕೊಂಡನು. ನಾರದನು ಹಿಂದೆ ನೀಡಿದ್ದ ಸಲಹೆಯನ್ನು ಮನಸ್ಸಿಗೆ ತಂದುಕೊಂಡ ವಿಷ್ಣುವು ಶೇಷನ ಬೇಡಿಕೆಗೆ ಒಪ್ಪಿ ಶೇಷಾಚಲದ ಮೇಲೆ ನೆಲೆನಿಂತನು. ಈ ಕತೆಯು ಬ್ರಹ್ಮಪುರಾಣದಲ್ಲಿ ಕಂಡುಬರುತ್ತದೆ. ಭವಿಷ್ಯೋತ್ತರ ಪುರಾಣದಲ್ಲಿ ಬೇರೊಂದು ಕಾರಣವನ್ನು ವಿವರಿಸಿ ಶ್ರೀನಿವಾಸನ ನೆಲೆಗೆ ಕಾರಣ ಹೇಳಲಾಗಿದೆ. ಅದರಂತೆ ಕತೆ ಹೀಗೆ ನಡೆಯುತ್ತದೆ.

ಗಂಗಾನದಿ ದಡದಲ್ಲಿ ಒಂದು ಬಾರಿ ಋಷಿಗಳೆಲ್ಲರೂ ಸೇರಿ ಒಂದು ಯಾಗವನ್ನು ಆರಂಭಿಸಿದರು. ಅವರಲ್ಲಿಗೆ ಬಂದ ನಾರದನು ಅವರ ಯಾಗಕ್ಕೆ ಪ್ರೀತನಾಗುವ ದೇವರು ಯಾರೆಂದು ವಿಚಾರಿಸಿದನು. ಋಷಿಗಳು ಈ ಬಗ್ಗೆ ಮೊದಲು ಯೋಚಿಸಿರಲಿಲ್ಲ. ಅವರೆಲ್ಲ ಸೇರಿ ಭೃಗು ಮಹರ್ಷಿಯನ್ನು ಈ ಸಮಸ್ಯೆಗೆ ಉತ್ತರ ಹುಡುಕಲು ಹೇಳಿದರು. ದೈವತ್ರಯರಾದ ಬ್ರಹ್ಮ ವಿಷ್ಣು ಶಿವರಲ್ಲಿ ಯಾರು ಹಿರಿಯರೋ ಅವರೇ ಯಜ್ಞಕ್ಕೆ ಗಮ್ಯರೆಂದು ನಿಶ್ಚಯಿಸಿದ ಭೃಗುವು ಅವರಲ್ಲಿ ಒಬ್ಬರನ್ನು ಸರ್ವೋತ್ತಮನೆಂದು ನಿರ್ಣಯಿಸಲು ತ್ರಿಲೋಕ ಯಾತ್ರೆ ಕೈಗೊಂಡನು. ಬ್ರಹ್ಮಲೋಕಕ್ಕೆ ಹೋದಾಗ ಬ್ರಹ್ಮನು ಒಂದು ಮುಖದಿಂದ ವೇದಗಳನ್ನು ಹೇಳುತ್ತಲೂ, ಇನ್ನೊಂದು ಮುಖದಿಂದ ನಾರಾಯಣ ನಾಮವನ್ನು ಜಪಮಾಡುತ್ತಲೂ, ಮತ್ತೊಂದು ಮುಖದಿಂದ ವಾಣಿಯ ಕಡೆ ನೋಡುತ್ತಲೂ ಇದ್ದು ಭೃಗುವನ್ನು ಗಮನಿಸಲಿಲ್ಲ. ಭೃಗುವು ನಂತರ ಕೈಲಾಸಕ್ಕೆ ಹೋದಾಗ ಶಿವನು ಪಾರ್ವತಿಯೊಂದಿಗೆ ಲೀಲಾನೃತ್ಯದಲ್ಲಿ ತೊಡಗಿದ್ದುದರಿಂದ ಭೃಗುವನ್ನು ಗಮನಿಸಲಿಲ್ಲ. ಬೇಸರಗೊಂಡ ಭೃಗುವು ಅಸಮಾಧಾನದಿಂದ ವೈಕುಂಠಕ್ಕೆ ಬಂದನು. ಲಕ್ಷ್ಮಿಯೊಡನೆ ಸಲ್ಲಾಪದಲ್ಲಿದ್ದ ಹರಿಯೂ ಭೃಗುವನ್ನು ಗಮನಿಸಲಿಲ್ಲ. ಋಷಿಗೆ ಕೋಪ ಅಂಗಾಲಿನಿಂದ ಮೇಲೇರಿ ವಿಷ್ಣುವಿನ ಎದೆಗೆ ಒದ್ದನು. ಕೂಡಲೇ ಎದ್ದವನಂತೆ ನಟಿಸಿದ ಹಿರಿಯು ಭೃಗುವಿನ ಪಾದವನ್ನು ಒತ್ತುತ್ತ ನೋವಾಯಿತೇ ಎಂದು ವಿಚಾರಿಸಿದ. ಶಾಂತನೂ, ಗರ್ವರಹಿತನೂ ಆದ ವಿಷ್ಣುವೇ ಸರ್ವೋತ್ತಮನೆಂದು ಭೃಗುವು ನಿರ್ಣಯಿಸಿ ತನ್ನ ತೀರ್ಪನ್ನು ಋಷಿಗಳಿಗೆ ಹೇಳಿ ಯಜ್ಞವನ್ನು ಹರಿಗೆ ಅರ್ಪಿಸಲು ಸೂಚಿಸಿದನು. ಆದರೆ ಭೃಗುವಿನಿಂದ ತಾಡಿತನಾದ ವಿಷ್ಣುವಿನ ಬಗ್ಗೆ ಲಕ್ಷ್ಮಿಯು ಅಸಮಾಧಾನ ಹೊಂದಿ ತನ್ನ ನಿತ್ಯನಿವಾಸವಾದ ವಿಷ್ಣು ವಕ್ಷಸ್ಥಳವನ್ನು ಬಿಟ್ಟು ವೈಕುಂಠವನ್ನು ತ್ಯಜಿಸಿ ಕರವೀರಪುರ ಅಥವಾ ಕೊಲ್ಲಾಪುರವನ್ನು ಸೇರಿದಳು. ಲಕ್ಷ್ಮಿಯಿಂದ ಪರಿತ್ಯಕ್ತನಾದ ಹರಿಯು ಅಲ್ಲಲ್ಲಿ ತಿರುಗಾಡುತ್ತ ಶೇಷಾಚಲಕ್ಕೆ ಆಗಮಿಸಿ ಇಲ್ಲಿನ ಪ್ರಕೃತಿಯನ್ನು ಚೆನ್ನಾಗಿದೆಯೆಂದು ಭಾವಿಸಿದ ಮೇಲೆ ಸ್ವಾಮಿಯು ಪುಷ್ಕರಿಣೀತಟದ ಹುತ್ತವೊಂದರಲ್ಲಿ ಯೋಗಧ್ಯಾನ ನಿರತನಾದನು.



**ಸ್ವಾಮಿಗೆ ಆಲಯ ನಿರ್ಮಾಣವಾದರೀತಿ :**

ಶೇಷಾಚಲದ ಮೇಲಿನ ಸ್ವಾಮಿಯನ್ನು ಆರಾಧಿಸಿದ ಹಲವು ರಾಜರ ಬಗ್ಗೆ ಪುರಾಣಗಳು ಹೇಳಿಕೆ ನೀಡುತ್ತ ಬೇರೆ ಬೇರೆಯವರು ಕಟ್ಟಿದ ಆಲಯಗಳ ಬಗ್ಗೆ ಹೇಳುತ್ತವೆ.

**ಶಂಖನ ಐತಿಹ್ಯ :** ಕೃತಯುಗದಲ್ಲಿ ಶಂಖನೆಂಬ ಸೂರ್ಯವಂಶದ ರಾಜನು ಆಳುತ್ತಿದ್ದನು. ಅವನ ಗುರು ವಸಿಷ್ಠ. ಶಾಶ್ವತವಾದ ಹೆಸರು ಕೀರ್ತಿ ದೊರೆಯುವಂತಹ ಯಾವುದಾದರೂ ಒಂದು ಕೆಲಸ ಮಾಡಬೇಕೆಂದು ಗುರುವನ್ನು ಕೇಳಿದಾಗ ವೆಂಕಟಾದ್ರಿಗೆ ಹೋಗಿ ಸ್ವಾಮಿಯನ್ನು ಪ್ರಾರ್ಥಿಸುವಂತೆ ಅವರು ಸಲಹೆ ನೀಡಿದರು. ಅದರಂತೆಯೇ ರಾಜನು ವೆಂಕಟಾದ್ರಿಗೆ ಬಂದು ತಪಸ್ಸು ಮಾಡಿದನು. ಸ್ವಾಮಿಯು ಒಂದು ವಿಮಾನದಲ್ಲಿ ಬಂದು ಅವನ ಮುಂದೆ ಇಳಿದು ತಾನು ಬಂದಂತಹ ವಿಮಾನದಂತೆಯೇ ಒಂದು ಗೋಪುರವನ್ನು ನಿರ್ಮಿಸಿ ಅದರಲ್ಲಿ ತನ್ನಂತೆಯೇ ಇರುವ ಒಂದು ಮೂರ್ತಿಯನ್ನಿಟ್ಟು ಪೂಜಿಸಲು ಹೇಳಿದನು. ಶಂಖನು ಅದರಂತೆ ಗುಡಿಯನ್ನು ನಿರ್ಮಿಸಿ ಸ್ವಾಮಿಯ ಮೂರ್ತಿಯನ್ನು ಪ್ರತಿಷ್ಠಾಪಿಸಿದನು. ಕಲ್ಪಾಂತ್ಯದಲ್ಲಿ ದೇವಾಲಯವು ನಾಶವಾಗಿ ವಿಗ್ರಹವು ಮೊಣಕಾಲಿನವರೆಗೆ ಭೂಮಿಯಲ್ಲಿ ಮುಚ್ಚಿ ಹೋಯಿತು. ಮೇಲೆ ಒಂದು ಹುತ್ತ ಬೆಳೆದು ಒಂದು ಹುಣಿಸೆ ಮರವು ನೆರಳು ನೀಡುವಂತೆ ಅದರ ಪಕ್ಕದಲ್ಲೇ ಬೆಳೆಯಿತು.

**ಚೋಳ ರಾಜನ ಕಥೆ :** ಈ ಕಥೆಯು ಬ್ರಹ್ಮಾಂಡ ಪುರಾಣದಲ್ಲಿದೆ. ಅದು ಹೀಗೆ ನಡೆಯುತ್ತದೆ -

ಕಲಿಯುಗದಲ್ಲಿ ಒಬ್ಬ ಚೋಳರಾಜನು ಇದ್ದನು. ಒಮ್ಮೆ ಅವನು ಬೇಟೆಗೆ ಹೋದಾಗ ಶೇಷಾಚಲದಲ್ಲಿ ಅವನು ಅನೇಕ ಪ್ರಾಣಿಗಳನ್ನು ಕೊಂದನು. ಆಯಾಸ ಪರಿಹಾರಕ್ಕೆಂದು ಒಂದೆಡೆ ವಿಶ್ರಮಿಸಿಕೊಳ್ಳುತ್ತಿರುವಾಗ ಒಬ್ಬ ಸುಂದರ ತರುಣಿ ಹೂಗಳನ್ನು ಆಯುತ್ತ ಅಲ್ಲಿಗೆ ಬಂದಳು. ಆಕರ್ಷಿಕನಾದ ರಾಜನು ಅವಳ ಪೂರ್ವೋತ್ತರಗಳ ಬಗ್ಗೆ ವಿಚಾರಿಸಲಾಗಿ ಅವಳು ತಾನು ಧನಂಜಯನೆಂಬ ನಾಗರಾಜನ ಮಗಳೆಂದೂ ಹೇಳುತ್ತ ತನ್ನ ವಿವಾಹದ ಬಗ್ಗೆ ತಂದೆಯನ್ನು ವಿಚಾರಿಸಬೇಕೆಂದು ಹೇಳಿದಳು - ರಾಜನಿಗೆ ಈ ಎಲ್ಲ ಸಾಂಪ್ರದಾಯಿಕ ಆಚರಣೆಗಳಿಗೆ ಬಿಡುವಿಲ್ಲದುದರಿಂದ ಗಾಂಧರ್ವ ರೀತಿಯಲ್ಲಿ ವಿವಾಹವಾದರು. ತರುಣಿಯು ತವರು ಮನೆಗೆ ಹಿಂತಿರುಗಿದಳು. ಹೆಣ್ಣಿನ ತಂದೆ ಮದುವೆಯ ಬಗ್ಗೆ ಸಮ್ಮತಿಯನ್ನೂ ಸಂತಸವನ್ನೂ ಸೂಚಿಸಿದನು. ಆಕೆಗೆ ಒಂದು ಗಂಡು ಮಗುವಾಗಿ ತಾಯಿಯ ಜೊತೆಯಲ್ಲೇ ಬೆಳೆಯಿತು. ದೊಡ್ಡವನಾದ ಮಗನಿಗೆ ತಂದೆಯ ಗುರುತುಗಳನ್ನು ಹೇಳುತ್ತ ತಾಯಿಯು ಅವನನ್ನು ಚೋಳರಾಜರ ಬಳಿಗೆ ಕಳುಹಿಸಿದಳು. ತಾಯಿಯ ಆದೇಶದಂತೆ ತಂದೆಯನ್ನು ಕಂಡು ಮಗ ತನ್ನ ಪರಿಚಯವನ್ನು ನೀಡಿದನು. ಚೋಳರಾಜನಿಗೆ ಹುಡುಗ ಹೇಳುವ ವಿಷಯದ ಬಗ್ಗೆ ಅನುಮಾನ ಬಂದಾಗ ಅಶರೀರವಾಣಿಯೊಂದು ಹುಡುಗನ ಮಾತುಗಳೆಲ್ಲಾ ನಿಜವೆಂದೂ ಅವನಿಗೇ ಪಟ್ಟಾಭಿಷೇಕ ಮಾಡಬೇಕೆಂದು ತಿಳಿಸಿತು. ಅದರಂತೆಯೇ ರಾಜನು ತರುಣನಿಗೆ ಪಟ್ಟಾಭಿಷೇಕ ಮಾಡಿದನು. ಈ ನೂತನ ರಾಜನನ್ನು ಚೋಳ ಚಕ್ರವರ್ತಿಯೆಂದು ಕರೆದರು.

ಚೋಳ ಚಕ್ರವರ್ತಿಯ ಗೋಶಾಲೆಯ ಆಳುಗಳು ಬಂದು ತಾವು ಪ್ರತಿದಿನವೂ ಒಂದು ಹುತ್ತವನ್ನು ಸುತ್ತಿ - ಬರುವಾಗ ತಮ್ಮೊಂದಿಗಿದ್ದ ಹಾಲಿನ ಮಡಕೆಗಳು ಕೆಳಗೆ ಬಿದ್ದು ಒಡೆಯುವುದಾಗಿಯೂ, ಹಾಲು ಹುತ್ತವನ್ನು ಸೇರುತ್ತಿರುವುದಾಗಿ ತಿಳಿಸಿದರು. ಅಂದು ರಾತ್ರಿ ರಾಜನ ಕನಸಿನಲ್ಲಿ ಕಪ್ಪು ಬಣ್ಣದ ಒಬ್ಬ ಆಕರ್ಷಕ ಪುರುಷನು ಕಾಣಿಸಿಕೊಂಡು ತಾನು ಶ್ರೀನಿವಾಸನ ಜೊತೆಗೆ ಶೇಷಾದ್ರಿಯಲ್ಲಿ ಇರುವುದಾಗಿಯೂ ಶ್ರೀನಿವಾಸನು ಶ್ರೀ ಭೂ ಸಮೇತ ಇರುವುದಾಗಿಯೂ ರಾಜನು ಒಂದು ಸ್ವಾಮಿಯನ್ನು ನೋಡಬೇಕೆಂದು ತಿಳಿಸಿದಾಗ ಕನಸು ಮುಂದುವರೆದು ಶೇಷಾದ್ರಿಗೆ ಹೋದ ರಾಜನು ಪ್ರಕಾಶಮಾನವಾದ ಒಂದು ವಿಮಾನವನ್ನು ಕಂಡನು. ಮರುದಿನ ಒಬ್ಬ ಶಬರನು ಬಂದು ರಾಜನಿಗೆ ಒಂದು ಕತೆಯನ್ನು ತಿಳಿಸಿದನು. 'ಸ್ವಾಮಿ ನಾನು ಶೇಷಾದ್ರಿಯಲ್ಲಿ ಇರುವ ಶಬರ. ಅಲ್ಲಿ ನವಣೆಯನ್ನು ಬೆಳೆಯುತ್ತೇನೆ. ಸ್ವಲ್ಪ ಭಾಗವನ್ನು ದೇವರಿಗೆ ಅರ್ಪಿಸಿ, ಮಿಕ್ಕದ್ದನ್ನು ನಾನೇ ಬಳಸುತ್ತೇನೆ. ಒಮ್ಮೆ ಬಿಳಿಯ ಹಂದಿಯೊಂದು ನನ್ನ ಬೆಳೆಯನ್ನು ಹಾಳುಮಾಡುತ್ತಿದ್ದುದನ್ನು ಕಂಡೆನು. ಹಾಗಾಗಿ ಕಾವಲಿಗೆ ನನ್ನ ಮಗನನ್ನು ಇಟ್ಟು ಜೇನು ಹಿಡಿಯಲು ಹೋದೆನು. ಹಿಂತಿರುಗಿ ಬಂದಾಗ ನನ್ನ ಮಗನು ದೇವರಿಗೆ ನಿವೇದನೆ ಮಾಡದೆ ಊಟಮಾಡಿ ಬಿಟ್ಟಿದ್ದನು. ಅವನನ್ನು ಕೊಂದುಬಿಡುವಷ್ಟು ಕೋಪ ಬಂದಿತು. ಆದರೆ ಹುಡುಗನು ಊಟಮಾಡುವ ಮೊದಲೇ ದೇವರು ಊಟಮಾಡಿದ್ದನೆಂದೂ, ಹುಡುಗನ ತಪ್ಪೇನೂ ಇಲ್ಲವೆಂಬ ಆಕಾಶವಾಣಿಯು ಹೇಳಿತು' - ಎಂದನು. ಚೋಳ ಚಕ್ರವರ್ತಿಯು ತನ್ನೊಡನೆ ಸ್ವಾಮಿಗೆ ಒಂದು ಸಾವಿರ ಕೊಡಗಳ ಹಾಲನ್ನು ಕಳುಹಿಸಬೇಕೆಂದು ಮಂತ್ರಿಗಳಿಗೆ ಆಜ್ಞಾಪಿಸಿ ತಾನು ಶಬರನ ಹಿಂದೆ ಶೇಷಾಚಲಕ್ಕೆ ಬಂದನು. ಹುತ್ತವನ್ನು ತೋರಿಸಿದ ಶಬರನು ಅದನ್ನು ಅಗೆಯಬೇಕೆಂದು ಸೂಚಿಸಿದನು. ಆದರೆ ರಾಜನಿಗೆ ಭಯ - ತನ್ನ ಮಂತ್ರಿಗಳು ಕಳಿಸಿದ್ದ ಹಾಲನ್ನು ಹುತ್ತಕ್ಕೆ ನಿವೇದಿಸಲು ಹೇಳಿದನು. ಹಾಲಿನಲ್ಲಿ ಹುತ್ತವು ಕರಗಿತು. ಶಂಖ ಚಕ್ರಗಳನ್ನು ಮೇಲಿನ ಎರಡೂ ಕೈಗಳಲ್ಲಿ ಹೊಂದಿ ಕೆಳಗಿನೆರಡು ಕೈಗಳು ವರದ ಹಸ್ತವೂ ಸೊಂಟದ ಮೇಲಿದ್ದ ಹಸ್ತವೂ ಆಗಿರುವಂತೆ ಸ್ವಾಮಿಯು ಮನೋಹರವಾಗಿ ಕಾಣಿಸಿಕೊಂಡನು. ನಾನಾ ಪ್ರಕಾರವಾಗಿ ಸ್ವಾಮಿಯನ್ನು ಸ್ತುತಿಸಿದ ರಾಜನು, ಸ್ವಾಮಿಯನ್ನು ಹಾಗೆಯೇ ನಿಲ್ಲಲು ಬೇಡಿಕೊಂಡನು. ತಥಾಸ್ತು ಎಂದ ಸ್ವಾಮಿಯು ದಿನವೂ ತನ್ನನ್ನು ಪೂಜಿಸಲು ಚೋಳರಾಜನಿಗೆ ತಿಳಿಸಿದನು. ದಿನವೂ ಚಕ್ರವರ್ತಿ ಪೂಜಿಸುತ್ತಿರುವಾಗ ಸ್ವಾಮಿಯು ಸ್ನೇಹಿತನಂತೆ ಅವನೊಡನೆ ಮಾತುಕತೆಯಾಡುತ್ತಿದ್ದನು.

ಒಮ್ಮೆ ಕೃಷ್ಣಶರ್ಮನೆಂಬ ಬ್ರಾಹ್ಮಣನು ತನ್ನ ಪತ್ನಿ ಹಾಗೂ ಮಗುವಿನೊಡನೆ ರಾಜನ ಬಳಿಗೆ

ಬಂದನು. ತಾನು ಕಾಶೀಯಾತ್ರ ಮಾಡುತ್ತಿರುವುದಾಗಿಯೂ, ತಾನು ಬರುವವರೆಗೆ ತನ್ನ ಹೆಂಡತಿ ಹಾಗೂ ಮಗುವನ್ನು ರಾಜನು ತನ್ನ ಆಶ್ರಯದಲ್ಲಿ ಇಟ್ಟುಕೊಂಡು ಪೋಷಿಸಬೇಕೆಂದು ಪ್ರಾರ್ಥಿಸಿದನು. ಇದಕ್ಕೆ ಒಪ್ಪಿಕೊಂಡ ರಾಜನು ಒಂದು ಪ್ರತ್ಯೇಕವಾದ ಮನೆಯನ್ನು ಆ ಹೆಂಗಸಿಗೆ ನೀಡಿ ಆರು ತಿಂಗಳಿಗೆ ಬೇಕಾಗುವ ಸಾಮುಗ್ರಿಗಳನ್ನು ಕೊಟ್ಟನು. ನಂತರ ಕಾಲಕ್ರಮದಲ್ಲಿ ಈ ಹೆಂಗಸು ಮತ್ತು ಮಗುವಿನ ಬಗ್ಗೆ ಮರೆತು ಹೋದನು. ಕಾಶೀಯಾತ್ರೆಯಿಂದ ಹಿಂತಿರುಗಿದ ಕೃಷ್ಣಶರ್ಮನು ರಾಜನಲ್ಲಿಗೆ ಬಂದು ತನ್ನ ಹೆಂಡತಿ ಮಗುವಿನ ಬಗ್ಗೆ ವಿಚಾರಿಸಿದಾಗಲೇ ರಾಜನಿಗೆ ಅವರ ನೆನಪು ಬಂದದ್ದು. ಆ ಹೆಂಗಸಿನ ಮನೆಗೆ ಆಳನ್ನು ಕಳಿಸಿ ವಿಚಾರಿಸಲು ಆ ಮನೆಯಲ್ಲಿ ತಾಯಿ ಮಗು ಮರಣ ಹೊಂದಿದ್ದು ಅವರ ಅಸ್ಥಿಗಳು ಮಾತ್ರವೇ ಇರುವುದಾಗಿ ಸೇವಕರು ಬಂದು ತಿಳಿಸಿದರು. ತನ್ನ ತಪ್ಪನ್ನು ಅರಿತ ರಾಜನು ಕೃಷ್ಣಶರ್ಮನಿಗೆ ಈ ವಿವರಗಳನ್ನು ತಿಳಿಸದೆ ಅವರು ಸ್ವಾಮಿಯನ್ನು ನೋಡಲು ಶೇಷಾಚಲಕ್ಕೆ ಹೋಗಿರುವುದಾಗಿಯೂ ಮಾರನೆಯ ದಿನ ಅವರನ್ನು ಭೇಟಿಯಾಗಬಹುದೆಂದು ತಿಳಿಸಿ ಅವನನ್ನು ವಿಶ್ರಾಂತಿಗೆ ಕಳಿಸಿದನು. ತಾನು ಕೂಡಲೇ ಓಡಿ ಬಂದು ಶರಣಾಗಿ ಸ್ವಾಮಿಯನ್ನು ಕಾಪಾಡಬೇಕೆಂದು ಬೇಡಿಕೊಂಡನು. ಸ್ವಾಮಿಯು ತನ್ನ ಸೈನ್ಯಾಧಿಪತಿ ವಿಷ್ವಕ್ಸೇನನನ್ನು ಕರೆದು ಅಸ್ಥಿಕೂಟ ತೀರ್ಥದಿಂದ ನೀರನ್ನು ತಂದು ಪ್ರೋಕ್ಷಿಸಿ ಅವರನ್ನು ಬದುಕಿಸಬೇಕೆಂದು ಆಜ್ಞಾಪಿಸಿದನು. ತಾಯಿ ಮಗು ನಿದ್ದೆಯಿಂದ ಎದ್ದವರಂತೆ ಎಚ್ಚೆತ್ತರು. ಕೃಷ್ಣಶರ್ಮನಿಗೆ ರಾಜನು ಅವರಿಬ್ಬರನ್ನು ಒಪ್ಪಿಸಿದನು.

ಕೆಲಕಾಲಾನಂತರ ಸಿಂಹಾದನೆಂಬ ದೈತ್ಯನು ಬೆಟ್ಟದ ಮೇಲೆ ನೆಲೆಸಿದನು. ಅವನು ತಪಸ್ಸು ಮಾಡಿ ಭೂಮಿಯ ಸ್ವರ್ಗದ ಅಥವಾ ಮರ್ತ್ಯದ ಯಾರೂ ತನ್ನನ್ನು ಕೊಲ್ಲಲಾಗದು ಎಂಬ ವರವನ್ನು ಪಡೆದು ದೇವತೆಗಳನ್ನು ಹಿಂಸಿಸಲು ಪ್ರಾರಂಭಿಸಿದನು. ಆಗ ದೇವತೆಗಳು ಸ್ವಾಮಿಯ ಮೊರೆ ಹೊಕ್ಕರು. ಸ್ವಾಮಿಯು ತನ್ನ ಭಕ್ತನಾದ ಚಕ್ರವರ್ತಿಯ ಬಳಿಗೆ ಹೋಗಿ ತಂತಮ್ಮ ಅಂಶಗಳಿಂದ ಅವನನ್ನು ಸೇರಿ ತಮಗೆ ನೆರವು ನೀಡುವಂತೆ ಅವನನ್ನು ಕೇಳಲು ಹೇಳಿದನು. ಅವರ ಮೊರೆಯನ್ನು ಕೇಳಿದ ರಾಜನು ಶೇಷಾದ್ರಿಗೆ ಬಂದು ಸ್ವಾಮಿಯ ಮಾರ್ಗದರ್ಶನ ಬೇಡಿದನು. ಸ್ವಾಮಿಯು ಆತನಿಗೆ ತನ್ನ ಶಂಖ ಚಕ್ರಗಳನ್ನು ನೀಡಿ ಅಸುರರನ್ನು ಕೊಲ್ಲಲು ಹೇಳಿದನು. ಪಾಪನಾಶನ ತೀರ್ಥದಲ್ಲಿ ದೈತ್ಯನನ್ನು ಎದುರಿಸಿದ ರಾಜನು ಅವನನ್ನು ಸ್ವಾಮಿಯ ಚಕ್ರದಿಂದ ಕೊಂದು ಹಾಕಿದನು. ಹಿಂತಿರುಗಿ ಬಂದು ಸ್ವಾಮಿಗೆ ವಂದನೆಗಳನ್ನು ಹೇಳಿ ಆಯುಧಗಳನ್ನು ಹಿಂತಿರುಗಿಸಿದನು. ಸ್ವಾಮಿಯು ತನ್ನ ಆಯುಧಗಳಿಗೆ ಅವುಗಳ ಹೆಸರಿನ ತೀರ್ಥಗಳಲ್ಲಿ ನೆಲೆಸುವಂತೆ ಹೇಳಿದನು. ತಾನು ಕೆಲವು ದಿನಗಳು ಆಯುಧಗಳಿಲ್ಲದೆ ನಿಲ್ಲುವುದಾಗಿಯೂ ಕಲಿಯುಗದಲ್ಲಿ ತನಗೆ ಬೇರೊಬ್ಬ ವ್ಯಕ್ತಿಯು ಬಂದು ಶಂಖಚಕ್ರಗಳನ್ನು ತೊಡಿಸುವುದಾಗಿಯೂ ತಿಳಿಸಿದನು.

**ರಂಗದಾಸನ ಕತೆ :**

ಈ ಕತೆಯು ಬ್ರಹ್ಮಾಂಡ ಪುರಾಣದಲ್ಲಿದ್ದು ಕತೆ ಹೀಗೆ ನಡೆಯುತ್ತದೆ - ಒಂದು ಕಾಲದಲ್ಲಿ ಚೋಳರಾಜ್ಯದಲ್ಲಿ ಗೋಪೀನಾಥನೆಂಬ ವೈಖಾನಸ ಬ್ರಾಹ್ಮಣನು ಇದ್ದನು. ಈತನು ಶ್ರೀಕೃಷ್ಣನ ಅನನ್ಯ ಭಕ್ತ. ಶ್ರೀಕೃಷ್ಣನು ತನಗೆ ಮುಕ್ತಿಯನ್ನು ಕೊಡಬೇಕೆಂದು ಪ್ರಾರ್ಥಿಸಿದನು. ಶ್ರೀಕೃಷ್ಣನು ಈತನಿಗೆ ಶೇಷಾದ್ರಿ ಪರ್ವತಕ್ಕೆ ಹೋಗಿ ಅಲ್ಲಿನ ಶ್ರೀನಿವಾಸನನ್ನು ಪೂಜಿಸಬೇಕೆಂದೂ ಅಲ್ಲಿ ರಂಗದಾಸನೆಂಬ ಶೂದ್ರನು ಇವನನ್ನು ಭೇಟಿಯಾಗುವುದಾಗಿಯೂ ಈತನು ರಂಗದಾಸನಿಗೆ ಅನುಕೂಲವಾಗಿ ಇರಬೇಕೆಂದು ನುಡಿದನು - ಗೋಪಿನಾಥನು ಶೇಷಾದ್ರಿಬೆಟ್ಟದ ಬುಡಕ್ಕೆ ಬಂದು ರಂಗದಾಸನನ್ನು ಕಂಡನು. ಇಬ್ಬರೂ ಬೆಟ್ಟದ ಮೇಲೇರಿ ಹುತ್ತದಲ್ಲಿ ಮುಳುಗಿದ್ದ ಸ್ವಾಮಿಯ ವಿಗ್ರಹವನ್ನು ಮೇಲಕ್ಕೆ ತೆಗೆದು ಅದನ್ನು ತೆಂಗುಗರಿಯ ಛಾವಣಿಯ ಮಂಟಪದಲ್ಲಿ ಸ್ಥಾಪನೆ ಮಾಡಿ ಸುತ್ತಲೂ ಕಲ್ಲಿನ ಗೋಡೆಯನ್ನು ಕಟ್ಟಿದರು. ರಂಗದಾಸನು ಸ್ವಾಮಿಯ ಪೂಜೆಗೆ ಹೂಗಳನ್ನು ನೀರನ್ನೂ ತಂದುಕೊಡುತ್ತಿದ್ದರು. ಗೋಪಿನಾಥನು ಸ್ವಾಮಿಯನ್ನು ಅರ್ಚನೆ ಮಾಡುತ್ತಿದ್ದನು. ಒಂದು ದಿನ ರಂಗದಾಸನು ಹೂಗಳನ್ನು ತರುತ್ತಿರುವಾಗ ಆಕಾಶದಲ್ಲಿ ಗಂಧರ್ವರು ವಿಷಯಾಸಕ್ತರಾಗಿರುವುದನ್ನು ಕಂಡು ಚಿತ್ತ ಚಾಂಚಲ್ಯವನ್ನು ಹೊಂದಿದನು. ದೇವರ ಬಗೆಗಿನ ಏಕನಿಷ್ಠೆ ಸಡಿಲವಾದದ್ದನ್ನು ಮನಗಂಡು ಈಗಾಗಲೇ ಮಾಡಿದ್ದ ಹಾರಗಳನ್ನು ಬಿಸುಟು ಮತ್ತೆ ಸ್ನಾನಮಾಡಿ ಹಾರಕಟ್ಟಿ ದೇವಾಲಯಕ್ಕೆ ತಂದನು. ಗೋಪಿನಾಥನು ತಡವಾಗಿ ಬಂದ ರಂಗದಾಸನನ್ನು ಬೈದರೂ ನಾಚಿಕೆಯಿಂದಾಗಿ ರಂಗದಾಸನು ತನ್ನ ನಿಧಾನಕ್ಕೆ ಕಾರಣವನ್ನು ಹೇಳಲಿಲ್ಲ.

ಒಂದು ಅಶರೀರವಾಣಿಯು ಹೀಗೆ ಹೇಳಿತು. "ನಿನ್ನ ಚಿತ್ತ ಚಂಚಲವಾಗಿದೆ, ನಿನ್ನಿಂದ ಯಾವುದೇ ಉತ್ತಮ ಕೆಲಸವೂ ಆಗದು. ಆದ್ದರಿಂದ ಒಬ್ಬ ರಾಜನ ಜನ್ಮವನ್ನು ಪಡೆದು ಎಲ್ಲ ಐಹಿಕ ಸುಖಗಳನ್ನೂ ಅನುಭವಿಸಿ ನನಗಾಗಿ ಒಂದು ಸುಂದರವಾದ ದೇವಾಲಯವನ್ನು ನಿರ್ಮಿಸು. ನಿನಗೆ ಶತ್ರುಗಳು ತೊಂದರೆ ಕೊಡುತ್ತಾರೆ. ಆಗ ನನ್ನ ಶಂಖ ಚಕ್ರಗಳನ್ನು ನಿನಗೆ ನೀಡುತ್ತೇನೆ."

ರಂಗದಾಸನು ಮರಣ ಹೊಂದಿದಮೇಲೆ ರಾಜನಾಗಿ ಪುನರ್ಜನ್ಮ ಪಡೆದನು. ಈಗ ಅವನೊಬ್ಬ ಚಕ್ರವರ್ತಿ. ಅವನ ದ್ರಾವಿಡರಾಜ್ಯದ ಜನ ಅವನನ್ನು ತೊಂಡಮಾನ್ ಎಂದು ಗುರುತಿಸಿದರು. ಈತನು ನಾರಾಯಣವನದಲ್ಲಿದ್ದುಕೊಂಡು ಪ್ರತಿದಿನವೂ ಶೇಷಾಚಲಕ್ಕೆ ಹೋಗಿ ಸ್ವಾಮಿಯನ್ನು ಸೇವಿಸುತ್ತಿದ್ದನು. ಕಾಲಕ್ರಮದಲ್ಲಿ ದೇವರಿಗೆಂದು ಎರಡು ಗೋಪುರಗಳು ಎರಡು ಪ್ರಾಕಾರಗಳನ್ನು ಇರುವಂತಹ ಗರ್ಭಗೃಹವನ್ನು ನಿರ್ಮಿಸಿದನು. ಯಾಗಶಾಲೆಯನ್ನು, ಉಗ್ರಾಣ, ಗೋಶಾಲೆಗಳನ್ನು ನಿರ್ಮಿಸಿದನು. ದೇವರಿ ಗೆಂದು ಅನೇಕ ಆಭರಣಗಳನ್ನು ಮಾಡಿಸಿದನು. ಅನೇಕ ಉತ್ಸವಗಳನ್ನು ಉತ್ಸಾಹದಿಂದ ಏರ್ಪಡಿಸಿದನು.



ಒಮ್ಮೆ ಶತ್ರುಗಳು ತೊಂಡಮಾನನ ರಾಜ್ಯವನ್ನು ಆಕ್ರಮಿಸಿ ಅವನಿಗೆ ಕಿರುಕುಳ ಕೊಡಲು ಆರಂಭಿಸಿದರು. ತೊಂಡಮಾನನು ದೇವರ ಬಳಿಗೆ ಹೋಗಿ ಸಹಾಯವನ್ನು ಯಾಚಿಸಿದನು. ದೇವರು ತನ್ನ ಶಂಖ ಚಕ್ರಗಳನ್ನು ಅವನಿಗೆ ಕೊಟ್ಟು ಯುದ್ಧಮಾಡಲು ಹೇಳಿದನು. ದೇವರ ಶಂಖಚಕ್ರಗಳನ್ನು ಬಳಸಿ ಶತ್ರುನಿವಾರಣೆ ಮಾಡಿಕೊಂಡ ತೊಂಡಮಾನನು ದೇವರಿಗೆ ಶಂಖ ಚಕ್ರಗಳಿಲ್ಲದೆ ಹಾಗೆಯೇ ನಿಲ್ಲಬೇಕೆಂದು ಬೇಡಿಕೊಂಡನು. ದೇವರು ಇದನ್ನು ಒಪ್ಪಿಕೊಂಡರು.

**ದೇವರು ಪೆಟ್ಟುತಿಂದ ರೀತಿ :**

ಭವಿಷ್ಯೋತ್ತರ ಪುರಾಣದಲ್ಲಿ ಕತೆ ಹೀಗಿದೆ-

ಲಕ್ಷ್ಮಿಯು ಬ್ರಹ್ಮ ಶಿವರನ್ನು ಹಸು ಕರುಗಳನ್ನಾಗಿ ಮಾಡಿ ಚೋಳರಾಜನಿಗೆ ವಿಕ್ರಯಿಸಿದಳು. ಬ್ರಹ್ಮ ರೂಪದಲ್ಲಿದ್ದ ಹಸುವು ಶೇಷಾಚಲದಲ್ಲಿ ಸತ್ತಾಡಿ ಹರಿಯು ಧ್ಯಾನಮಗ್ನನಾಗಿದ್ದಂತಹ ಹುತ್ತವನ್ನು ಕಂಡುಕೊಂಡಿತು. ಆ ನಂತರ ಈ ಹಸುವು ತನ್ನ ಹಾಲನ್ನೆಲ್ಲ ಹುತ್ತದಲ್ಲಿ ಸೋರಿಬಿಟ್ಟು ರಾಜನ ಗೌಳಿಗನಿಗೆ ಒಂದು ಹನಿಯನ್ನು ಉಳಿಸಲಿಲ್ಲ. ಗೌಳಿಗನು ಹಾಲನ್ನು ತಾನೇ ಬಳಸುವನೆಂದು ರಾಣಿಯು ದೂರಿದಳು. ಮಾರನೆಯ ದಿನ ಗೌಳಿಯು ಹಸುವನ್ನು ಹಿಂಬಾಲಿಸಿ ಅದು ಹುತ್ತಕ್ಕೆ ಹಾಲು ಎರೆಯುವುದನ್ನು ನೋಡಿ ಕೋಪದಿಂದ ಕೈಯ್ಯಲ್ಲಿದ್ದ ಪರಶುವಿನಿಂದ ಹಸುವಿಗೆ ಹೊಡೆಯಹೋದನು. ಹುತ್ತದಿಂದ ಹೊರಬಂದ ಸ್ವಾಮಿಯು ಹಸುವಿಗೆ ಬೀಳಬೇಕಾದ ಪೆಟ್ಟನ್ನು ತಾನು ಸ್ವೀಕರಿಸಿದನು. ತಲೆಯ ಮೇಲೆ ಉಂಟಾದ ಗಾಯದಿಂದ ರಕ್ತವು ಚಿಮ್ಮಿ ಹರಿಯಿತು. ಈ ದೃಶ್ಯವನ್ನು ಕಂಡ ಗೌಳಿಯು ದಿಗ್ಭ್ರಮೆಯಿಂದ ಸತ್ತನು. ಹಿಂದೆಯೇ ಬಂದ ಚೋಳರಾಜನೂ ದಿಗ್ಭ್ರಾಂತನಾಗಿ ನಿಂತಾಗ ಸ್ವಾಮಿಯು ಪಿಶಾಚ ಜನ್ಮವನ್ನು ಪಡೆಯುವಂತೆ ಶಪಿಸಿದನು. ನಂತರ ಶಾಪವಿಮೋಚನೆಯನ್ನು ಕುರಿತು ಹೇಳುತ್ತ ತಾನು ಪದ್ಮಾವತಿಯನ್ನು ವಿವಾಹವಾದಾಗ ಆಕಾಶರಾಜನು ತನಗೆ ಕಿರೀಟವನ್ನು ತೊಡಿಸುವನೆಂದೂ, ಆ ಕಿರೀಟವನ್ನು ತಾನು ಪ್ರತಿ ಶುಕ್ರವಾರವೂ ಧರಿಸುವುದಾಗಿಯೂ ಆ ಕಿರೀಟ ಇರುವಷ್ಟು ಹೊತ್ತು ತನಗೆ ನೋವು ತಿಳಿಯದೆಂದೂ, ರಾಜನಿಗೆ ಆ ಹೊತ್ತಿನಿಂದ ಪಿಶಾಚದ ಜನ್ಮಹೋಗಿ ಸದ್ಗತಿ ದೊರೆಯುವುದೆಂದು ಹೇಳಿದನು.

**ಶ್ರೀನಿವಾಸಕಲ್ಯಾಣ :**

ಈ ಕಥೆಯು ಭವಿಷ್ಯೋತ್ತರ ಪುರಾಣದಲ್ಲಿದ್ದು ಕತೆ ಹೀಗೆ ಸಾಗುವುದು.

ಒಂದು ಬಾರಿ ಶೇಷಾಚಲದಲ್ಲಿ ಇದ್ದ ಶ್ರೀನಿವಾಸನು ಸಕಲಾಭರಣ ಭೂಷಿತನಾಗಿ ಬೇಟೆಗೆ ಹೊರಟನು. ಆನೆಗಳನ್ನು ಹಿಂಬಾಲಿಸಿ ಬಹುದೂರ ಹೋದಮೇಲೆ ಒಂದು ಉದ್ಯಾನವನವನ್ನು ಹೊಕ್ಕನು. ಅಲ್ಲಿದ್ದ ಆಕಾಶರಾಜನ ಸಾಕುಮಗಳು ಪದ್ಮಾವತಿ ದೇವಿ ಆನೆಗಳನ್ನು ಕಂಡು ಹೆದರಿ ಆಡುತ್ತಿದ್ದ ತನ್ನ ಸಖಿಯರೊಡನೆ ಒಂದು ಮರದ ಹಿಂದೆ ನಿಂತುಕೊಂಡಳು. ಆಕಾಶರಾಜನೂ ಅವನ ತಮ್ಮ ತೊಂಡಮಾನನೂ ಚಂದ್ರವಂಶದ ಸುವೀರ ರಾಜನ ಮಕ್ಕಳು. ಈ ಹಿಂದೆ ಯಾಗಶಾಲೆಗಾಗಿ ನೆಲವನ್ನು ಅಗೆಯುತ್ತಿರಬೇಕಾದರೆ ಆಕಾಶರಾಜನಿಗೆ ಪದ್ಮಕೋಶದಲ್ಲಿ ಒಂದು ಹೆಣ್ಣು ಮಗು ದೊರೆಯಿತು. ಮಕ್ಕಳಿಲ್ಲದ ರಾಜ ಮಗುವಿಗೆ ಪದ್ಮಾವತಿಯೆಂದು ಹೆಸರಿಟ್ಟು ಪ್ರೀತಿಯಿಂದ ಬೆಳೆಸಿದನು. ನಂತರ ವಸುದಾನ ನೆಂಬ ಮಗನು ಆಕಾಶರಾಜನಿಗೆ ಜನಿಸಿದನು. ಪ್ರಸ್ತುತ ಶ್ರೀನಿವಾಸನು ತಾನು ದೇವಕಿ ವಸುದೇವರ ಮಗನೂ, ಬಲಭದ್ರ ಸುಭದ್ರೆಯರ ಸೋದರನೂ ಆದಂತಹ ಕೃಷ್ಣನೆಂದು ಪರಿಚಯಮಾಡಿಕೊಂಡು ಪದ್ಮಾವತಿಯ ಪಾಣಿಗ್ರಹಣಕ್ಕಾಗಿ ಕೇಳಿದನು. ಇವನು ಯಾರೋ ಉದ್ಧಟನಿರಬೇಕೆಂದು ಪದ್ಮಾವತಿಯ ಸಖಿಯರು ಅವನನ್ನು ಕಲ್ಲುಗಳಿಂದ ಹೊಡೆಯತೊಡಗಿದರು. ಅಂತಹ ಒಂದು ಕಲ್ಲು ತಾಕಿ ಶ್ರೀನಿವಾಸನ ಕುದುರೆಯು ಮರಣಿಸಿತು. ಶ್ರೀನಿವಾಸನು ಉತ್ತರದಿಕ್ಕಿಗೆ ನಡೆದು ನಿರ್ಗಮಿಸಿದನು.

ಸ್ವಾಮಿಯು ವಿರಹತಪ್ತನಾಗಿ ಶೇಷಾಚಲವನ್ನು ಸೇರಿದಾಗ ಅವನನ್ನು ವಿಚಾರಿಸಿದ ವಕುಳ ಮಾತೆಯು ಆತನು ಪದ್ಮಾವತಿಯಲ್ಲಿ ಅನುರಕ್ತನಾಗಿರುವುದನ್ನು ತಿಳಿದುಕೊಂಡಳು. ಸ್ವಾಮಿಯು ವಕುಳ ಮಾಲಿಕೆಗೆ ಆಕಾಶರಾಜನಲ್ಲಿ ಅವನ ಮಗಳನ್ನು ವಿವಾಹಕ್ಕೆಂದು ಕೇಳಲು ಕಳುಹಿಸಿದನು. ತಾನು ಕಣಿ ಹೇಳುವ ಸ್ತ್ರೀಯಂತೆ ವೇಷಧರಿಸಿ ಆಕಾಶರಾಜನ ಪತ್ನಿ ಧರಣಿದೇವಿಗೆ ಶ್ರೀನಿವಾಸನ ಗುಣಗಣಗಳನ್ನು ತಿಳಿಸಿ ಪದ್ಮಾವತಿಗೆ ಶ್ರೀನಿವಾಸನೊಂದಿಗೆ ಮದುವೆ ಮಾಡುವುದೇ ಸೂಕ್ತವೆಂದು ಹೇಳಿದನು. ವಕುಳ ಮಾಲಿಕೆಯು ನಾರಾಯಣವನಕ್ಕೆ ಬಂದು ಆಕಾಶರಾಜನನ್ನು ಕೇಳುವುದಕ್ಕೆ ಮೊದಲೇ ಅವರುಗಳು ಮದುವೆ ಮಾಡಲು ಸಿದ್ಧರಾಗಿದ್ದರು. ಶ್ರೀನಿವಾಸನು ತನ್ನ ಸಮಸ್ತ ಬಂಧು ಬಾಂಧವ ದೇವ ದೇವತೆಗಳನ್ನು ಆಹ್ವಾನಿಸಿ ಅವರೆಲ್ಲರ ಸಮಕ್ಷಮದಲ್ಲಿ ಪದ್ಮಾವತಿಯನ್ನು ವಿವಾಹವಾದನು.

**ತೊಂಡಮಾನನು ಆಲಯವನ್ನು ನಿರ್ಮಿಸಿದ ಬಗೆ :**

ಶ್ರೀನಿವಾಸ ಕಲ್ಯಾಣವಾದ ಕೆಲ ಕಾಲದ ನಂತರ ಆಕಾಶರಾಜನು ಮರಣಿಸಲು ತೊಂಡಮಾನನೂ, ವಸುದಾನನೂ ರಾಜ್ಯಕ್ಕಾಗಿ ಜಗಳವಾಡಿದರು. ಪದ್ಮಾವತಿಯ ಪ್ರಭಾವದಿಂದ ಈ ವಿವಾದದಲ್ಲಿ ಶ್ರೀನಿವಾಸನು ನ್ಯಾಯ ಮಾಡಲು ತೊಡಗಿ ರಾಜ್ಯವನ್ನು ಎರಡು ಭಾಗ ಮಾಡಿ ತೊಂಡಮಂಡಲವನ್ನು ತೊಂಡಮಾನನಿಗೂ ನಾರಾಯಣವನವನ್ನು ವಸುಧಾನನಿಗೂ ಸೇರುವಂತೆ ತೀರ್ಪು ನೀಡಿದನು.

ಈ ತೊಂಡಮಾನನೇ ಹಿಂದಿನ ಜನ್ಮದಲ್ಲಿ ರಂಗದಾಸನಾಗಿದ್ದನು. ಹೀಗಾಗಿ ಸ್ವಾಮಿಯು ತನಗಾಗಿ ಒಂದು ನೆಲೆಯನ್ನು ನಿರ್ಮಿಸಬೇಕೆಂದು ತೊಂಡಮಾನನಿಗೆ ಹೇಳಿದನು. ರಂಗದಾಸನು ಅರ್ಥಾತ್ ತೊಂಡಮಾನನು ಸ್ವಾಮಿಯ ಮಾತಿನಂತೆ ಒಂದು ಆಲಯವನ್ನು ನಿರ್ಮಿಸಿದನು.

(ಮುಂದಿನ ತಿಂಗಳು - ಆಲಯ ವಿವರಣೆ)

# ಎಸ್. ವಿ. ನಿತ್ಯಾನ್ನದಾನ ಟ್ರಸ್ಟ್ - ತಿರುಪತಿ

1985 ರ ಏಪ್ರಿಲ್ ಆರರಂದು ತಿರುಮಲೆಯಲ್ಲಿ ಸ್ವಾಮಿಯ ದರ್ಶನ ಮಾಡಿಬಂದ ಯಾತ್ರಿಕರಿಗೆ ಭೋಜನ ನೀಡುವುದರಿಂದ ಎಸ್.ವಿ. ನಿತ್ಯಾನ್ನದಾನ ಯೋಜನೆ ಆರಂಭವಾಯಿತು. ಪರಂಪರೆ ಹಾಗೂ ಸಂಪ್ರದಾಯದಂತೆ ಎಲ್ಲ ಹಿಂದೂ ದೇವಾಲಯಗಳಲ್ಲಿಯೂ ಸ್ವಾಮಿಯ ನಿವೇದಿತ ಆಹಾರವನ್ನು ಪ್ರಸಾದವೆಂದು ಪವಿತ್ರಭಾವದಿಂದ ಸ್ವೀಕರಿಸುವುದು ಆಚಾರವಾಗಿದ್ದು, ಇಂತಹ ಒಂದು ಉನ್ನತ ಉದ್ದೇಶದಿಂದಲೇ ಈ ಯೋಜನೆಯು ಆರಂಭವಾಯಿತು.

1985 ರಲ್ಲಿ ಆರಂಭವಾದಾಗ ಪ್ರತಿನಿತ್ಯ ಎರಡು ಸಾವಿರ ಮಂದಿ ಭಕ್ತರಿಗೆ ಉಚಿತ ಭೋಜನ ಪ್ರಸಾದ ಒದಗಿಸುವ ಈ ಯೋಜನೆಯು ಸ್ಫೂರ್ತಿ, ಸಂಪನ್ಮೂಲ ವ್ಯಾಪ್ತಿಗಳು ದಿನೇ ದಿನೇ ಹಿಗ್ಗಿ ಇಂದು ದಿನವೊಂದಕ್ಕೆ 25000 ಮಂದಿ ಭಕ್ತರಿಗೂ, ಹಬ್ಬ ಹರಿದಿನ ಉತ್ಸವ ದಿನಗಳಲ್ಲಿ 30,000 ಮಂದಿ ಭಕ್ತರಿಗೂ ಉಚಿತ ಭೋಜನಾವಕಾಶ ಕಲ್ಪಿಸಲಾಗುತ್ತಿದೆ.

ಅನ್ನದಾನ ಯೋಜನೆಯಾಗಿದ್ದ ಈ ಕ್ರಮವನ್ನು 1994 ರಲ್ಲಿ ಎಸ್.ವಿ. ಅನ್ನದಾನ ಟ್ರಸ್ಟ್ ಎಂಬ ಹೆಸರಿಗೆ ಬದಲಾಯಿಸಲಾಯಿತು. ತಿ.ತಿ.ದೇ. ಧರ್ಮದರ್ಶಿಗಳ ಮಂಡಳಿಯ ಠರಾವು 959 ದಿನಾಂಕ 7-1-1994 ಪ್ರಕಾರ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳು ಅಧ್ಯಕ್ಷರಾಗಿಯೂ, ತಿ.ತಿ.ದೇ. ಲೆಕ್ಕಾಧಿಕಾರಿಗಳು ಧರ್ಮದರ್ಶಿಗಳಾಗಿಯೂ, ಡ.ಇ.ಓ. ಇದರ ಕಾರ್ಯದರ್ಶಿಯಾಗಿಯೂ ಇದ್ದು ಈ ಟ್ರಸ್ಟ್ ಅನ್ನು ನಡೆಸಬೇಕೆಂದು ತೀರ್ಮಾನವಾಯಿತು. ಇದರ ಕೇಂದ್ರ ಕಚೇರಿಯು ತಿ.ತಿ.ದೇ. ಪರಿಪಾಲನಾಭವನದಲ್ಲಿರುವಂತೆಯೂ 18/1994 ರ ನಂಬರಿನಲ್ಲಿ ಟ್ರಸ್ಟ್ ನೊಂದಾಯಿತವಾಯಿತು. ಆದಾಯಕರ ನಿಯಮದ 80 (ಜಿ) ಕಲಮಿನಂತೆ ಈ ಟ್ರಸ್ಟ್‌ಗೆ ಬರುವ ಎಲ್ಲದಾನಗಳೂ ಕರಮುಕ್ತವಾಗಿರುವುದರಿಂದ ವಿಜಯವಾಡ ವಿಭಾಗದಲ್ಲಿರುವ ಆದಾಯಕರ ಕಮೀಷನರ್ ಅವರಿಗೆ ಈ ಟ್ರಸ್ಟ್‌ನ ಬಗೆಗಿನ ನ್ಯಾಯಿಕ ಪರ್ಯವೇಕ್ಷಣಾಧಿಕಾರವಿದೆ.

**ಟ್ರಸ್ಟ್‌ನ ಉದ್ದೇಶ :**

ಜಾತಿ, ಮತ, ಪಂಥ, ಲಿಂಗ, ವಯೋಭೇದವಿಲ್ಲದೇ ತಿರುಮಲೆಗೆ ಆಗಮಿಸುವ ಎಲ್ಲ ಭಕ್ತಯಾತ್ರಿಕರಿಗೂ ಉಚಿತವಾಗಿ ಭೋಜನ ಸೌಕರ್ಯವನ್ನು ಒದಗಿಸುವುದು.

ಭಾರತಾದ್ಯಂತದಿಂದ ತಿರುಮಲೆಗೆ ಆಗಮಿಸುವ ಭಕ್ತಯಾತ್ರಿಕರಲ್ಲಿ ಅಸಹಾಯಕರಾದವರಿಗೆ ತಿರುಮಲೆಯಲ್ಲಿ ವೈದ್ಯಕೀಯ ಮೊದಲಾದ ಧರ್ಮದ ಅನುಕೂಲಗಳನ್ನು ಮಾಡಿಕೊಡುವುದು.

**ಅನ್ನದಾನ ಕ್ರಮ :**

ಟ್ರಸ್ಟ್‌ನ ನೋಂದಣಿ ಪತ್ರದಲ್ಲಿ ನಮೂದಾಗಿರುವಂತೆ ತಿರುಮಲೆಯ ಅನ್ನದಾನಂ ಕಾಂಪ್ಲೆಕ್ಸ್‌ನಲ್ಲಿ ಅನ್ನದಾನದ ಭೋಜನದ ಏರ್ಪಾಡುಗಳನ್ನು ಮಾಡಲಾಗಿದೆ.

ಈ ಯೋಜನೆಗೆ ದಾನ ನೀಡಿದವರೆಲ್ಲರ ಹೆಸರಿನಲ್ಲಿ ವರುಷದ 365 ದಿನವೂ ಅನ್ನದಾನವನ್ನು ನಡೆಸಲಾಗುತ್ತದೆ.

ಆರಂಭದಲ್ಲಿ ದಿನಕ್ಕೆ ಈ ಮೊದಲೇ ಹೇಳಿದಂತೆ 2000 ಮಂದಿಗೆ ಮಾತ್ರವೇ ಏರ್ಪಾಡಾಗಿದ್ದ ಭೋಜನಾವಕಾಶ ಬೆಳೆದು ಇಂದು ದಿನವಹಿ 25000 ಕ್ಕೆ ಏರಿದೆ. ಬ್ರಹ್ಮೋತ್ಸವ, ವೈಕುಂಠ ಏಕಾದಶಿ, ಜನವರಿ 1 ಮೊದಲಾದ ಉತ್ಸವ ದಿನಗಳಲ್ಲಿ 30,000 ಕ್ಕೂ ಹೆಚ್ಚುವುದು.

**ಸಂಪನ್ಮೂಲ ವಿವರಣೆ :**

ಜಗತ್ತಿನ ಎಲ್ಲ ಭಾಗಗಳಿಂದಲೂ ಅನ್ನದಾನ ಟ್ರಸ್ಟ್‌ಗೆ ದಾನ ನೀಡಬಹುದಾಗಿದೆ. ಅನ್ನದಾನಕ್ಕಾಗಿ ಬರುವ ಎಲ್ಲ ಮೊತ್ತಗಳನ್ನೂ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಠೇವಣಿಯಾಗಿಟ್ಟು





# ಧರ್ಮ ದರ್ಶಿಗಳು :

ಧರ್ಮದರ್ಶಿಗಳ ಮಂಡಳಿಯಲ್ಲಿ ಆರುಮಂದಿ ಧರ್ಮದರ್ಶಿಗಳುಂಟು. ಅವರಲ್ಲಿ ಒಬ್ಬರು ಅಧ್ಯಕ್ಷರು. ಒಬ್ಬರು ಕಾರ್ಯದರ್ಶಿ ಸದಸ್ಯರು.

| | | |
|---|---|---|
| 1. | **ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ** | ಅಧ್ಯಕ್ಷರು |
| 2. | **ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ (ತಿರುಮಲೆ)** | ಸದಸ್ಯರು |
| 3. | **ತಿ.ತಿ.ದೇ. ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ (ತಿರುಪತಿ)** | ಸದಸ್ಯರು |
| 4. | **ತಿ.ತಿ.ದೇ. ಆರ್ಥಿಕ ಸಲಹೆಗಾರು/ಮುಖ್ಯಲೆಖ್ಖ ಪರಿಶೀಲನಾಧಿಕಾರಿ** | ಸದಸ್ಯರು |
| 5. | **ತಿ.ತಿ.ದೇ. ಲೆಕ್ಕಾಧಿಕಾರಿ** | ಸದಸ್ಯರು |
| 6. | **ಡೆ. ಕಾರ್ಯನಿರ್ವಹಣಾಧಿಕಾರಿ** | ಕಾರ್ಯದರ್ಶಿ |

ಧರ್ಮದರ್ಶಿಗಳ ಈ ಮಂಡಳಿಯೊಂದಿಗೇ ಒಂದು ಸಲಹಾ ಮಂಡಳಿಯೂ ಇದೆ. ನಾಲ್ಕು ಮಂದಿಯ ಈ ಸಲಹಾ ಮಂಡಳಿಯು ಟ್ರಸ್ಟ್‌ನ ನಿರ್ವಹಣೆಗೆ ಸೂಕ್ತ ಸಲಹೆಗಳನ್ನು ನೀಡುವುದು.

| | | |
|---|---|---|
| 1. | **ತಿ.ತಿ.ದೇ. ಡೆ.ಇ.ಓ.** | (ಸಾಮಾನ್ಯ ಆಡಳಿತ - ತಿರುಪತಿ) |
| 2. | **ತಿ.ತಿ.ದೇ. ಡೆ.ಇ.ಓ.** | (ತಿರುಮಲೆ ಆಲಯ - ತಿರುಮಲೆ) |
| 3. | **ತಿ.ತಿ.ದೇ. ಡೆ.ಇ.ಓ.** | (ಸ್ವಾಗತ I - ತಿರುಮಲೆ) |
| 4. | **ತಿ.ತಿ.ದೇ. ಡೆ.ಇ.ಓ.** | (ಸ್ವಾಗತ II - ತಿರುಮಲೆ) |

ಅವುಗಳ ಮೇಲೆ ಬರುವ ಬಡ್ಡಿಯನ್ನು ಮಾತ್ರವೇ ಅನ್ನದಾನದ ಏರ್ಪಾಡುಗಳಿಗೆ ಬಳಸಲಾಗುವುದು. ಮೊದಲಿಗೆ ಈ ರೀತಿಯ ದಾನಗಳಿಗೆ ಒಂದು ಕನಿಷ್ಠಮಿತಿ ಇರಬೇಕೆಂದು ಯೋಚಿಸಿ ಒಂದು ಲಕ್ಷ ರೂಪಾಯಿಗಳನ್ನು ಕನಿಷ್ಠವೆನ್ನಲಾಗಿದ್ದಿತಾದರೂ, 1989 ರ ಜನವರಿ 23 ರಂದು ತಿ.ತಿ.ದೇ. ಧರ್ಮದರ್ಶಿ ಮಂಡಳಿಯ ತೀರ್ಮಾನದಂತೆ ಹೆಚ್ಚು ಹೆಚ್ಚಿನ ವಂತಿಗೆಗಳನ್ನು ಆಕರ್ಷಿಸುವ ಉದ್ದೇಶದಿಂದ ಈ ಕನಿಷ್ಠ ಮಿತಿಯನ್ನು ಒಂದು ಸಾವಿರ ರೂಪಾಯಿಗಳು ಎನ್ನಲಾಯಿತು. ಇದರಿಂದಾಗಿ ಅನ್ನದಾನಯೋಜನೆಗೆ ದಾನ ನೀಡುವ ಉದಾರಿಗಳ ಸಂಖ್ಯೆ ಹೆಚ್ಚಿದ್ದೇ ಅಲ್ಲದೆ, ಅನ್ನದಾನ ಯೋಜನೆಯಲ್ಲಿ ಸೇರಿಬರುವ ದಾನಗಳ ಮೊಬಲಗೂ ಸಹ ಹೆಚ್ಚಾಗತೊಡಗಿತು.

**ದಾನಗಳು :**

1985 ರಲ್ಲಿ 60 ಲಕ್ಷ ರೂಪಾಯಿಗಳ ದಾನದ ಇಡುಗಂಟಿನ ನೆರವಿನಿಂದ ಕಿರಿಯ ಪ್ರಮಾಣದಲ್ಲಿ ಆರಂಭವಾದ ಯೋಜನೆ ದಿನೇ ದಿನೇ ಹೆಚ್ಚು ಮಂದಿಯನ್ನು ತಲುಪಿತು. 1999 - 2001 ದಲ್ಲಿ ಅನ್ನದಾನಂ ಟ್ರಸ್ಟ್ ಸ್ವೀಕರಿಸಿದ ಒಟ್ಟು ಮೊತ್ತ - ಎಂಟು ಕೋಟಿ ಮೂವತ್ತು ಲಕ್ಷ ರೂಪಾಯಿಗಳು (ರೂ. 8,30,00,000/-).

**ಠೇವಣಿಗಳು :**

31-1-2001 ರ ಹೊತ್ತಿಗೆ ಅನ್ನದಾನಂ ಟ್ರಸ್ಟ್‌ನಲ್ಲಿ ಠೇವಣಿಯಾಗಿರುವ ಒಟ್ಟು ಮೊತ್ತ ರೂ. 63,55,00,000/- (ಅರವತ್ತಮೂರು ಕೋಟಿ ಐವತ್ತೈದು ಲಕ್ಷ ರೂಪಾಯಿ) ಈ ಹಣವನ್ನು ಬೇರೆ ಬೇರೆ ರಾಷ್ಟ್ರೀಕೃತ ಬ್ಯಾಂಕ್‌ಗಳಲ್ಲಿ ಠೇವಣಿಗಳಾಗಿಡಲಾಗಿದೆ.

**ಐದುಲಕ್ಷ ಮತ್ತು ಹೆಚ್ಚಿನ ದಾನಗಳು :**

ಐದು ಲಕ್ಷ ರೂಪಾಯಿ ಮತ್ತು ಹೆಚ್ಚಿನ ದಾನಗಳನ್ನು ನೀಡುವ ದಾನಿಗಳಿಗೆ ತಿ.ತಿ.ದೇ. ಉಚಿತ ವಸತಿ, ದರ್ಶನ ಮೊದಲಾದ ಸೌಲಭ್ಯಗಳನ್ನು ಒದಗಿಸುತ್ತದೆ.

1. ತಿರುಮಲೆಯ ಅನ್ನದಾನಂ ಕಾಂಪ್ಲೆಕ್ಸ್‌ನಲ್ಲಿ ಎದ್ದು ಕಾಣುವಂತೆ ದಾನಿಯ ಹೆಸರು ಬರೆಯಲ್ಪಡುತ್ತದೆ.

2. ಎ. ಆರ್. ಪಿ. ಕೌಂಟರ್‌ನ ವಿತರಣೆಯಲ್ಲಿ ಬರುವ ವಸತಿಯನ್ನು ವರ್ಷದಲ್ಲಿ ಮೂರು ದಿನ ಉಚಿತವಾಗಿ ದಾನಿಗಳಿಗೆ ನೀಡಲಾಗುವುದು (ಅವಕಾಶವಿದ್ದಲ್ಲಿ ಶುಲ್ಕಸಹಿತವಾಗಿ ವಿ.ಐ.ಪಿ. ವಸತಿಯನ್ನು ನೀಡಲಾಗುವುದು).

3. ವೈಕುಂಠಂ.ಕ್ಯೂಕಾಂಪ್ಲೆಕ್ಸ್‌ನ ಸೆಲ್ಲಾರ್ ಮೂಲಕ ವರ್ಷಕ್ಕೆ ಮೂರುದಿನ ಐದು ಮಂದಿಗೆ ದರ್ಶನಾವಕಾಶ.

4. ದಾನಿಗೆ ವರ್ಷಕ್ಕೆ ಒಮ್ಮೆ ಒಂದು ಉತ್ತರೀಯವನ್ನು ನೀಡಲಾಗುವುದು.

5. ದಾನಿಗೆ ಪ್ರತಿವರ್ಷವೂ ಒಮ್ಮೆ ಹತ್ತು ಚಿಕ್ಕ ಲಾಡುಗಳನ್ನು ಉಚಿತವಾಗಿ ನೀಡಲಾಗುವುದು.

6. ಚಿನ್ನದ ಮುಲಾಮು ಹಚ್ಚಿದ ಬೆಳ್ಳಿಯ ಸ್ವಾಮಿ ಹಾಗೂ ಅಮ್ಮನವರ ಚಿತ್ರಗಳಿರುವ ಪದಕವನ್ನು ಒಮ್ಮೆ ಮಾತ್ರ ದಾನಿಗೆ ಬಹುಮಾನವಾಗಿ ನೀಡಲಾಗುವುದು.

ಮೇಲಿನ ಎಲ್ಲ ಅವಕಾಶ, ಸೌಲಭ್ಯಗಳೂ, ದಾನಿಗೆ ಅವರ ಜೀವನ ಕಾಲದಲ್ಲಿ ಮಾತ್ರವೂ, ಸಂಯುಕ್ತ ದಾನಿಗಳಿಗೆ / ಕಂಪನಿ / ಸಂಘ ಸಂಸ್ಥೆಗಳಿಗೆ ಇಪ್ಪತ್ತು ವರ್ಷಕ್ಕೆ ಮಾತ್ರವೂ ದೊರೆಯುತ್ತವೆ.

ಸಾವಿರ ರೂಪಾಯಿ ಹಾಗೂ ಅದರ ಗುಣಕಗಳಲ್ಲಿ ದಾನಗಳನ್ನು ನೀಡಿದವರಿಗೂ ಆದಾಯಕರ ವಿನಾಯಿತಿ ದೊರೆಯುತ್ತದೆ. ಇದಕ್ಕಾಗಿ ದಾನಿಗಳು ಯಾರಹೆಸರಿನಲ್ಲಿ ಆದಾಯಕರ ವಿನಾಯಿತಿ ಪತ್ರ ಬೇಕು ಎಂಬುದನ್ನು ಬರೆದು ತಿಳಿಸಬೇಕಾಗುತ್ತದೆ. ★



# 2002 ಮೇ ತಿಂಗಳಿನಲ್ಲಿ ಶ್ರೀವಾರಿಸೇವೆ

ತಿರುಮಲೆ ತಿರುಪತಿ ದೇವಸ್ಥಾನಗಳು ತಿರುಮಲೆಯಲ್ಲಿ ಪ್ರವೇಶಗೊಳಿಸಿರುವ ಶ್ರೀವಾರಿಸೇವೆ ದಿನೇ ದಿನೇ ಜನಪ್ರಿಯತೆಯ ಹೊಸಮಜಲುಗಳನ್ನು ಮುಟ್ಟುತ್ತಿರುವುದು, ಪ್ರತಿ ತಿಂಗಳೂ ಗಮನಕ್ಕೆ ಬರುತ್ತಿದೆ. ಮೇ ಜೂನ್ ಜುಲೈ ತಿಂಗಳುಗಳಲ್ಲಿ ಬೇಸಿಗೆಯ ದಿನಗಳು- ಸಾಧಾರಣವಾಗಿ ಯಾತ್ರಿಕರ ಸಂದಣಿ ಹೆಚ್ಚಾಗಿರುತ್ತದೆ. ಇಂತಲ್ಲಿ ಶ್ರೀವಾರಿ ಸೇವೆಯಲ್ಲಿ ಭಾಗವಹಿಸುವವರ - ಸ್ವಚ್ಛಂದ ಸೇವೆಯ ವ್ರತವನ್ನು ನಡೆಸುವ ಭಕ್ತರ ಸಂಖ್ಯೆಯೂ ಅದೇ ಪ್ರಮಾಣದಲ್ಲಿ ಹೆಚ್ಚಿದೆ. ಹಾಗಾಗಿ ಇಡೀ ಶ್ರೀವಾರಿಸೇವಾ ಕಾರ್ಯಕ್ರಮದಲ್ಲಿ ಇದುವರೆಗೆ ಅತಿಹೆಚ್ಚಿನ ಮಂದಿ ಭಾಗವಹಿಸಿದ ತಿಂಗಳು ಮೇ ತಿಂಗಳು ಎಂದಾಯಿತು.

ಮೇ ತಿಂಗಳಿನಲ್ಲಿ ಒಟ್ಟು ಎಂಟುಸಾವಿರ ಮಂದಿ ಶ್ರೀವಾರಿಸೇವೆಯಲ್ಲಿ ಭಾಗವಹಿಸಿದ್ದರು. ಇವರಲ್ಲಿ 3200 ಮಂದಿ ಮಹಿಳೆಯರಾದರೆ 4800 ಮಂದಿ ಪುರುಷರು. ಹಲವು ಕಡೆ ಶ್ರೀವಾರಿಸೇವಕರು ಯಾತ್ರಿಕರ ಸೇವೆಯಲ್ಲಿ ಉತ್ಸಾಹದಿಂದ ತೊಡಗಿ ಸಹಯಾತ್ರಿಕರಿಗೆ ನೆರವಾಗುತ್ತಿದ್ದುದ್ದು ಕಂಡುಬಂದಿತು.

ಚೆನ್ನೈನಿಂದ ಶ್ರೀಕೃಷ್ಣಮೂರ್ತಿ ಅವರ ನಾಯಕತ್ವದಲ್ಲಿ 31 ಮಂದಿ ಬಂದಿದ್ದರು. ಅವರಲ್ಲಿ ಬೆಂಗಳೂರಿನವರು ಮೂವರು. ಇಂದ್ರಮ್ಮನವರಿಗೆ 63 ವರ್ಷ ವಯಸ್ಸು. ಮದನ ಚಂದ್ರ ಎಲೆಕ್ಟ್ರಿಕ್ ಕಂಟ್ರಾಕ್ಟರ್, ವಿಜಯ ಕುಮಾರ್ ವಿದ್ಯಾರ್ಥಿ. ಮುವ್ವರಿಗೂ ಇದೊಂದು ವ್ರತದಂತೆ ಕಂಡುಬಂದಿದೆ. ಇಂದಿರಮ್ಮನವರು ಹೇಳಿದ್ದು ಹೀಗೆ ''ಮದರಾಸಿನಲ್ಲಿ ನಮ್ಮವರೆಲ್ಲ ಈ ಮೊದಲೇ ತಿರುಮಲೆಯಲ್ಲಿ ಬಂದು ಸೇವೆ ಸಲ್ಲಿಸಿದ್ದರು ನಮಗೂ ಹೇಳಿದರು. ಹಲವು ಹನ್ನೊಂದು ವ್ರತ ಮಾಡಿದ್ದೇನೆ ನಾನು - ಸೇವಾವ್ರತವನ್ನು ಮಾಡುವುದು ಇತರ ವ್ರತಗಳಿಗಿಂತ ಬೇರೆಯಾದದ್ದು. ಇಲ್ಲಿ ಪರಿಶ್ರಮವಿದೆ. ಆದರೆ ಶ್ರಮವಿಲ್ಲ. ಕಷ್ಟವೇನಿಲ್ಲ. ನನ್ನಂತಹ ವಯಸ್ಸಾದವರೂ ಮಾಡುವಂತಹ ಕೆಲಸಗಳನ್ನೇ ಹೇಳುತ್ತಾರೆ. ಮುಖ್ಯವಾಗಿ ನನಗೆ ಇಷ್ಟವಾದರೆ ಮಾತ್ರವೇ ಮಾಡುವ ಕೆಲಸ. ದೇವರನ್ನು ನೋಡುವ ಜನರಿಗೆ ನೀರು ಕೊಡುವುದಕ್ಕಿಂತ ದೊಡ್ಡ ಪುಣ್ಯದ ಕೆಲಸ ಯಾವುದಿದೆ ಹೇಳಿ.''

ವಿಕಾಸ ತರಂಗಿಣಿಯ ವತಿಯಿಂದ ಅದ್ದಂಕಿಯ ಬೊಮ್ಮನಂಪಾಡು ಗ್ರಾಮದಿಂದ ಬಂದವರು 19 ಮಂದಿ. ಅಂಜಯ್ಯ ಜಯಲಕ್ಷ್ಮಿ ಮಧ್ಯ ವಯಸ್ಕರಾದರೆ ತಿರುಪತಮ್ಮ, ರಾಮಯ್ಯನವರಿಗೆ ವೃದ್ಧಾಪ್ಯ. ಎಲ್ಲ ಒಟ್ಟಿಗೆ ಕೆಲಸ ಮಾಡುತ್ತಿದ್ದರು. 'ದರ್ಶನಕ್ಕೆ ಕಂಕಣ ಕಟ್ಟಿಸಿಕೊಂಡಿದ್ದೇವೆ. ಮಿಕ್ಕ ಎಲ್ಲ ಸಮಯವೂ ಸೇವೆಯಲ್ಲಿ ಕಳೆಯುವುದೇ ಸರಿ. ಬೇರೆ ಕಡೆ ಹೊತ್ತು ಹೋಗದು ಎಂಬುದಷ್ಟೇ ಅಲ್ಲ. ಬೇರೆ ಏನುಮಾಡಿದರೂ ತೃಪ್ತಿಯಿರದು' - ಎಂದರು ರಾಮಯ್ಯ.

**2002 ಮೇ ತಿಂಗಳಿನಲ್ಲಿ ಶ್ರೀವಾರಿಸೇವೆ ಮಾಡಿದ ತಂಡಗಳು**

| | ತಂಡದ ಹೆಸರು | ಊರು | ಸಂಖ್ಯೆ |
|---|---|---|---|
| 1. | ಶ್ರೀವಾರಿ ಸೇವಾಸಮಿತಿ | ಚೆನ್ನೈ (ನಾಲ್ಕುಬಾರಿ) | 21 ಮಂದಿ |
| 2. | ಮೋಹನ್ ವೃಂದ | ಆದಿಲಾಬಾದ್ | 10 ಮಂದಿ |
| 3. | ಕಾಶೀರಾಜು ವೃಂದ | ಮದುರೈ | 10 ಮಂದಿ |
| 4. | ಚಂದ್ರಹಾಸ ವೃಂದ | ಅನಕಾಪಲ್ಲಿ | 7 ಮಂದಿ |
| 5. | ಬಾಲಾಜೀ ವೃಂದ | ಪಿ.ಟಿ.ಯಂ | 10 ಮಂದಿ |
| 6. | ನಗರ ಉತ್ಸವ ಸಮಿತಿ | ಗುಂತಕಲ್ | 12 ಮಂದಿ |
| 7. | ಸ್ವಾಮಿನಾಥನ್ ವೃಂದ | ಚೆನ್ನೈ | 5 ಮಂದಿ |
| 8. | ಎಂ. ರಮೇಶರಾಜು | ಕರ್ನೂಲು | 6 ಮಂದಿ |
| 9. | ನಾಗೇಶ್ವರನ್ | ಗೋಟಿಶೆಟ್ಟಿಪಾಳಯಂ | 5 ಮಂದಿ |
| 10. | ವೆಂಕಟೇಶ್ವರ್ಲು | ಪಳ್ಳಿಪಟ್ಟು | 25 ಮಂದಿ |
| 11. | ರಮಣಮೂರ್ತಿ | ವಿಶಾಖಪಟ್ನಂ | 13 ಮಂದಿ |
| 12. | ಕುಪ್ಪುಲು ವೃಂದ | ಸೇಲಂ (ಮೂರುಬಾರಿ) | 24 ಮಂದಿ |
| 13. | ಸಂಜೀವಿ ವೃಂದ | ವೇಲೂರು | 11 ಮಂದಿ |
| 14. | ಮೋಹನರಾವು ತಂಡ | ಪ್ರೊದ್ದುಟೂರು | 10 ಮಂದಿ |
| 15. | ಅ.ಭಾ. ಅಯ್ಯಪ್ಪ ಸೇವಾಸಮಿತಿ | ಈರೋಡು | 17 ಮಂದಿ |



ಚೆನ್ನೈಯಿಂದ ಬಂದವರಲ್ಲಿ ಸೇಲಂ ನ ತಂಗವೇಲು ಅವರೂ ಒಬ್ಬರು - ಅವರಿಗೆ ಕೆಲಸ ಮಾಡುವ ಉತ್ಸಾಹ. ''ಇಲ್ಲಿಗೆ ಬರುವ ಜನರೆಲ್ಲ ಸ್ವಾಮಿಯ ಭಕ್ತರೇ - ಇಲ್ಲಿ ಬೇರೆ ಯಾವುದೂ ದೊರೆಯದು ಸ್ವಾಮಿಯ ದರ್ಶನ ವಲ್ಲದೆ - ಹಾಗಾಗಿ ಇವರಿಗೆ ಸೇವೆ ಮಾಡುವುದು ಸಾರ್ಥಕವಾಗುತ್ತದೆ.'' ಯಾಕೆ ಶ್ರೀವಾರಿ ಸೇವೆಯಲ್ಲಿ ಭಾಗವಹಿಸುತ್ತಿದ್ದೀರಿ ಎಂದು ಪ್ರಶ್ನಿಸಿದಾಗ ವಿಜಯವಾಡದ ಪೆದತಿಮ್ಮಯ್ಯ ನವರು ಉತ್ತರಿಸಿದ್ದು ಹೀಗೆ - ''ನೋಡಿ - ನಾನೂ ಹತ್ತೆಂಟು ವ್ಯವಹಾರ ಮಾಡಿ ಅನುಭವಿಸಿದ್ದೇನೆ. ಲಾಭವನ್ನೂ ಗಳಿಸಿದ್ದೇನೆ. ಇಲ್ಲಿಕೆಲಸ ಮಾಡುವುದರಿಂದ ನನಗೆ ತೃಪ್ತಿ ಸಿಕ್ಕಿದೆ. ಇದಕ್ಕಿಂತ ಲಾಭ ನನಗೆ ಬೇಕಿಲ್ಲ. ವರ್ಷಕ್ಕೆ ಎರಡು ಮೂರು ಬಾರಿಯಾದರೂ ಇಲ್ಲಿ ಬಂದು ಈ ಸ್ವಚ್ಛಂದ ಸೇವೆ ಮಾಡಿ ಹೋಗಬೇಕು ಅನ್ನಿಸುತ್ತಿದೆ - ಆ ಸ್ವಾಮಿ ಅನುಗ್ರಹ ಮಾಡಬೇಕಷ್ಟೆ.''

ವೇಲೂರಿನಿಂದ ಹನ್ನೊಂದು ಮಂದಿಯ ಜೊತೆಗೆ ಬಂದವರು ಶ್ರೀಲಕ್ಷ್ಮಿ, ಬೇಸಿಗೆಯ ರಜಗಳಲ್ಲಿ ತಮ್ಮ ಕಾಲೇಜಿನ ಹತ್ತುಮಂದಿ ವಿದ್ಯಾರ್ಥಿ ವಿದ್ಯಾರ್ಥಿನಿಯರೊಡನೆ ಬಂದವರು - ಮಕ್ಕಳಿಗೆ ಸಮಾಜ ಸೇವೆಯ ಪಾಠ ಆಗಬೇಕು. ಜೊತೆಗೆ ಮಾನವೀಯ ಮೌಲ್ಯಗಳ ಬಗ್ಗೆ ಅರಿವು ಮೂಡಬೇಕು. ಅದಕ್ಕಾಗಿ ಕರೆದುಕೊಂಡು ಬಂದಿರುವುದಾಗಿ ಹೇಳಿದರು. ಸುಕುಮಾರನ್ ಎರಡನೇ ಪಿ.ಯು.ಸಿ. ''ಸ್ವಾಮಿಯ ಭಕ್ತರೂ ಸ್ವಾಮಿಯಂತೆಯೇ, ಇವರ ಸೇವೆಯೂ ಆದರ್ಶವೇ'' ಎಂದದ್ದು ಚೆನ್ನಾಗಿತ್ತು. ಬೆಂಗಳೂರಿನ ಶ್ರೀ ಲಕ್ಷ್ಮೀ ವೆಂಕಟೇಶ್ವರಸ್ವಾಮಿ ಆಲಯದ ಭಕ್ತಭಜಕರಲ್ಲಿ ಹದಿಮೂರು ಮಂದಿ ಸ್ವಯಂಸೇವಕರು ಬಂದು, ಒಂದು ವಾರ ಕಾಲ ಶ್ರೀವಾರಿಸೇವೆಯನ್ನು ಮಾಡಿದ್ದು ಈ ಬಾರಿಯ ಒಂದು ವಿಶೇಷವೆನ್ನಬೇಕು. ಯಾವುದೇ ರೀತಿಯ ಹೆಸರುಗಳನ್ನು ಮುಂದುಮಾಡದೆ ಆಲಯದ ಭಕ್ತರೆಂದು ತಮ್ಮನ್ನು ತಾವು ಗುರುತಿಸಿಕೊಂಡು ಸೇವೆಯಲ್ಲಿ ತೊಡಗಿದ್ದದ್ದು ಶ್ಲಾಘ್ಯವಾಗಿದ್ದಿತು.

| | ತಂಡದ ಹೆಸರು | ಊರು | ಸಂಖ್ಯೆ |
|---|---|---|---|
| 16. | ಕೃಷ್ಣನ್ ವೃಂದ | ಜಾಲಾರ್‌ಪೇಟೆ | 11 ಮಂದಿ |
| 17. | ಕೆ. ಶ್ರೀನಿವಾಸುಲು ತಂಡ | ಹಿಂದೂಪುರ | 14 ಮಂದಿ |
| 18. | ಶ್ರೀವಾರಿಯೂತ್ | ಗುಂಟೂರು | 8 ಮಂದಿ |
| 19. | ಸುಕುಮಾರನ್ ವೃಂದ | ಮಧುರೈ | 19 ಮಂದಿ |
| 20. | ಪಿ. ವಿ. ಶ್ರೀನಾಥ್ ವೃಂದ | ಕಾಕಿನಾಡ | 15 ಮಂದಿ |
| 21. | ಜನಕಲ್ಯಾಣ ಸಮಿತಿ | ಕಂಚಿ (ಎರಡು ಬಾರಿ) | 21 ಮಂದಿ |
| 22. | ಪೈಡಿರಾಜು ವೃಂದ | ಪಂಡೂರು | 8 ಮಂದಿ |
| 23. | ವೆಂಕಟೇಶ್ವರಮ್ಮ ವೃಂದ | ಪೀಠಾಪುರಂ | 14 ಮಂದಿ |
| 24. | ವಿಕಾಸತರಂಗಿಣಿ ವೃಂದ | ವಿಜಯವಾಡ | 100 ಮಂದಿ |
| 25. | ತೇಜಸ್ವಿನಿ ಬೃಂದ | ಧರ್ಮವರಂ | 15 ಮಂದಿ |
| 26. | ಕೃಷ್ಣಮೂರ್ತಿ ವೃಂದ | ಕಂಚಿ | 21 ಮಂದಿ |
| 27. | ನಗರ ಉತ್ಸವ ಸಮಿತಿ | ಗುಂತಕಲ್ | 6 ಮಂದಿ |
| 28. | ಶ್ರೀಕೃಷ್ಣ ಚೈತನ್ಯ ಸಂಘ | ಕಾಪವರಂ | 18 ಮಂದಿ |
| 29. | ಜಗನ್ನಾಥಂ ಟೀಂ | ದಿಂಡಿಗಲ್ | 10 ಮಂದಿ |
| 30. | ಕೈಲಾಸಂ ವೃಂದ | ಸೇಲಂ | 8 ಮಂದಿ |
| 31. | ಶಿವಶಕ್ತಿ ವೃಂದ | ಮದುರೈ | 32 ಮಂದಿ |
| 32. | ಆರ್. ವೆಂಕಟೇಶ್ವರನ್ ವೃಂದ | ಮದುರೈ | 15 ಮಂದಿ |
| 33. | ಶ್ರೀ ಲಕ್ಷ್ಮೀ ವೆಂಕಟೇಶ್ವರಸ್ವಾಮಿ ಆಲಯ | ಬೆಂಗಳೂರು | 13 ಮಂದಿ |
| 34. | ಮೋಹನ್ ವೃಂದ | ಹಿಂದೂಪುರ | 13 ಮಂದಿ |
| 35. | ಜಿ. ಶ್ರೀನಿವಾಸುಲು ವೃಂದ | ಡೋನ್ | 13 ಮಂದಿ |
| 36. | ದೊರೈಬಾಲನ್ ವೃಂದ | ಕೊಯಂಬತ್ತೂರು | 12 ಮಂದಿ |
| 37. | ಶಿವರಾಮಕೃಷ್ಣ ಭಜನವೃಂದ | ಕರೀಂನಗರ್ | 20 ಮಂದಿ |
| 38. | ಜಿ. ಸುಧಾಕರ್ | ಕರ್ನೂಲು | 11 ಮಂದಿ |
| 39. | ಜಿ. ಚಂದ್ರಶೇಖರ್ ವೃಂದ | ತಿರುಪತಿ | 12 ಮಂದಿ |
| 40. | ಕೆ. ರಾಮಸುಬ್ಬಯ್ಯ | ನಂದ್ಯಾಲ | 6 ಮಂದಿ |
| 41. | ಷಣ್ಮುಗಂ ಬೃಂದ | ಸೇಲಂ | 6 ಮಂದಿ |
| 42. | ಶ್ರೀನಿವಾಸ ಸೇವಾಸಮಿತಿ | ಒಂಗೋಲು | 9 ಮಂದಿ |
| 43. | ಕೆ. ವೆಂಕಟರಮಣ ವೃಂದ | ಶ್ರೀಕಾಕುಳಂ | 13 ಮಂದಿ |

# ತಿರುಮಲೆಯ ಸೇವಾವಿವರ

ನಿತ್ಯ ಕಲ್ಯಾಣ ಪಚ್ಚತೋರಣದ ತಿರುಮಲೆಯಲ್ಲಿ ನಡೆಯುವ ಉತ್ಸವಗಳ ಬಗ್ಗೆ ಸೇವೆಗಳ ಬಗ್ಗೆ ಹೆಚ್ಚಿಗೆ ತಿಳಿದು ಕೊಳ್ಳಬೇಕೆಂಬ ಯಾತ್ರಿಕರು ಹಲವು ರೀತಿಯ ಪ್ರಶ್ನೆಗಳ ಕಾಗದಗಳನ್ನು ಸಪ್ತಗಿರಿ ಪತ್ರಿಕೆಗೆ ಬರೆಯುವುದುಂಟು. ತಿರುಮಲೆಯ ಸೇವೆಗಳು, ವಸತಿ, ಮುಂತಾದವುಗಳ ಬಗ್ಗೆ ಹಲವು ವಿವರಗಳನ್ನು ಈ ಕೆಳಗೆ ನೀಡಲಾಗಿದೆ. ಯಾತ್ರಿಕ ಭಕ್ತರ ತಿರುಮಲೆಯಾತ್ರೆ ಸುಖಕರವಾಗಿರಬೇಕೆಂಬುದು ತಿ. ತಿ. ದೇ. ಉದ್ದೇಶ.

ಆರ್ಜಿತ ಸೇವೆಗಳು :

1. ತಿರುಮಲೆಯ ಸ್ವಾಮಿ ಸೇವೆಯ ಟಿಕೆಟ್‌ಗಳನ್ನು ಮೊದಲೇ ರಿಸರ್ವ್ ಮಾಡಿಸುವುದು ಹೇಗೆ? ಡಿ.ಡಿ. ಯನ್ನು ಯಾವ ಹೆಸರಿಗೆ ತೆಗೆದುಕೊಳ್ಳಬೇಕು ? ಯಾರಿಗೆ ಕಳುಹಿಸಬೇಕು?

ಸ್ವಾಮಿ ಸೇವೆಯ ಟಿಕೆಟ್‌ಗಳನ್ನು ಸಾಧ್ಯವಾದಷ್ಟೂ ಮುಂಚೆಯೇ ರಿಸರ್ವ್ ಮಾಡಿಕೊಳ್ಳುವುದು ಉತ್ತಮ. ಇದಕ್ಕಾಗಿ ಭಕ್ತರು ಯಾವ ದಿನಾಂಕದಲ್ಲಿ ಎಂತಹ ಸೇವೆ ಮಾಡಿಸಬಯಸುವರೆಂಬುದನ್ನು ವಿವರವಾಗಿ ಬರೆಯಬೇಕು. ಆಯಾ ಸೇವೆಗೆ ತಕ್ಕ ಶುಲ್ಕವನ್ನು ಡಿಮಾಂಡ್ ಡ್ರಾಫ್ಟ್ ಮೂಲಕವೇ ಸಲ್ಲಿಸಬೇಕು.

ಡಿಮಾಂಡ್ ಡ್ರಾಫ್ಟ್ ಅನ್ನು ''ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ'' - ಈ ಹೆಸರಿನಲ್ಲಿ ಪಡೆಯಬೇಕು. ಹೀಗೆ ಪಡೆದ ಡಿ.ಡಿ. ಯನ್ನು ''ಪೇಷ್ಕಾರ್ ತಿರುಮಲೆ ಆಲಯ ತಿರುಮಲೆ'' - ಇವರಿಗೆ ಕಳುಹಿಸಬೇಕು.

ಅಭಿಷೇಕದ ಟಿಕೆಟ್‌ಗಳಿಗೆ 3-4 ವರ್ಷ ಮೊದಲೇ ಬರೆದು ರಿಸರ್ವ್ ಮಾಡಿಸಬೇಕು.

ಮಿಕ್ಕ ಸೇವೆಗಳಿಗೆ ಕನಿಷ್ಠ 90 ದಿನಗಳು ಮುಂಚಿತವಾಗಿ ರಿಸರ್ವ್ ಮಾಡಿಸಿಕೊಳ್ಳಬೇಕು.

ಎರಡು ಮೂರು ಸೇವೆಗಳಿಗೆ ಟಿಕೆಟ್ ಬಯಸುವವರು ಪ್ರತಿಸೇವೆಗೂ ಬಿಡಿ ಬಿಡಿಯಾಗಿ ಡಿ. ಡಿ. ಗಳನ್ನು ತೆಗೆದುಕೊಳ್ಳಬೇಕು. ಎಲ್ಲ ಸೇವೆಗಳಿಗೆ ಒಂದೇ ಡಿ.ಡಿ.ಯನ್ನು ಪಡೆಯಬಾರದು.

2. ಆರ್ಜಿತ ಸೇವೆಯ ರಿಸರ್ವ್ ಮಾಡಿಸಿಕೊಂಡವರು ಸೇವೆಯ ದಿನ ಬರದೆ ಹೋದರೆ ಆ ಹಣವನ್ನು ತಿರುಗಿ ವಾಪಸು ಕೊಡುವರೇ?

ಭಕ್ತರು ಸಾಧ್ಯವಾದಷ್ಟು ಮೊದಲೇ ಈ ವಿಷಯವನ್ನು ಪೇಷ್ಕಾರ್ ತಿರುಮಲೆಯ ಆಲಯ ತಿರುಮಲೆ - ಇವರಿಗೆ ತಿಳಿಸಿದರೆ ಸೇವೆಯನ್ನು

## ಸೇವಾವಿವರ

ಮತ್ತೊಂದು ದಿನಕ್ಕೆ ಮುಂದೂಡಲು ಅವಕಾಶವಿದೆ. ಇದಕ್ಕಾಗಿ ಭಕ್ತರು ತಮ್ಮ ಆರ್ಜಿತ ಸೇವೆಯ ಟಿಕೆಟ್ ಅನ್ನು, ಅದರ ಶುಲ್ಕದ 25% ಅಧಿಕ ಹಣದ ಡಿ. ಡಿ. ಯೊಡನೆ ಸೇರಿಸಿ ಕಳುಹಿಸುತ್ತ ಸೇವೆಯ ಹೊಸ ದಿನಾಂಕದ ಬಗ್ಗೆ ಬರೆದುಕೊಳ್ಳಬಹುದು. ಅವರು ಕೇಳಿದ ದಿನದಂದು ಆಯಾ ಸೇವೆಯು ದೊರೆಯುವಂತಿದ್ದರೆ ಮಾತ್ರವೇ ಖಚಿತ ಗೊಳಿಸಲಾಗುತ್ತದೆ.

ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ ಮಾರನೆಯ ದಿನದ ಸೇವೆಗಳಿಗೆ ಕೊಂಡುಕೊಳ್ಳುವ ಟಿಕೆಟ್‌ಗಳಿಗೆ ಈ ಸೂತ್ರ ಅನ್ವಯವಾಗುವುದಿಲ್ಲ. ಸೇವೆಗೆ ಹಾಜರಾಗದಿದ್ದರೆ ಆ ಸೇವೆಯ ಹಣವನ್ನು ಹಿಂದಿರುಗಿಸುವುದು ಸಾಧ್ಯವಿಲ್ಲ.

(ಆರ್ಜಿತಸೇವೆಯ ಟಿಕೆಟ್‌ನ ಹಿಂಭಾಗದಲ್ಲಿ ಈ ಬಗ್ಗೆ ವಿವರಗಳು ಇರುತ್ತವೆ.)

3. ಆರ್ಜಿತ ಸೇವೆಯ ಟಿಕೆಟ್ ಪಡೆದವರಿಗೆ ವಸತಿಯನ್ನು ರಿಸರ್ವ್ ಮಾಡುವರೇನು? ಅಥವಾ ಪ್ರತ್ಯೇಕವಾಗಿ ವಸತಿಯನ್ನು ರಿಸರ್ವ್ ಮಾಡಿಸಿಕೊಳ್ಳಬೇಕೆ?

ರೂ. 2500/- ಹಾಗೂ ಅದಕ್ಕಿಂತ ಹೆಚ್ಚಿನ ಹಣದ ಸೇವೆಯ ಟಿಕೆಟ್ ಪಡೆದವರಿಗೆ ವಸತಿ ನೀಡುವುದರಲ್ಲಿ ಆದ್ಯತೆಯಿದೆ. ಅವರುಗಳು ತಿರುಮಲೆಯ ಆರ್ಜಿತಂ ರಿಸರ್ವ್ ಕೌಂಟರಿನಲ್ಲಿ (ಸಿ.ಆರ್.ಓ. ಆಫೀಸಿನಲ್ಲಿರುವುದು) ಸೇವೆಯ ಟಿಕೆಟ್ ತೋರಿಸಿದರೆ ಕೋಣೆಯನ್ನು ನೀಡುವರು. ಈ ವಸತಿಗೆ ಬಾಡಿಗೆ ಸಲ್ಲಿಸಬೇಕಾಗುತ್ತದೆ.

4. ಸ್ವಾಮಿಯ ವಸ್ತ್ರಾಲಂಕಾರ ಸೇವೆಯ ರಿಸರ್ವೇಷನ್ ಹೇಗೆ ?

ಈ ಸೇವೆ ತುಸು ದೂರದ್ದು. ಕನಿಷ್ಠ 4-5 ವರ್ಷ ಮೊದಲೇ ರಿಸರ್ವ್ ಮಾಡಿಸಬೇಕು. ಅದಕ್ಕಿಂತ ಮೊದಲಿಗೆ ಟಿಕೆಟ್ ದೊರೆಯದೆ ಹೋಗಬಹುದು.

5. ಸ್ವಾಮಿಯ ಅಭಿಷೇಕದಲ್ಲಿ ಪುನುಗು ಬಟ್ಟಲು, ಕಸ್ತೂರಿ ಬಟ್ಟಲು ಇರುವುವೇ? ಅಥವಾ ಅವುಗಳನ್ನು ಪ್ರತ್ಯೇಕವಾಗಿ ಕೊಂಡುಕೊಳ್ಳಬೇಕೆ?

ಅಭಿಷೇಕ ಸೇವೆಯಲ್ಲಿ ಇವುಗಳನ್ನು ಪ್ರತ್ಯೇಕವಾಗಿ ಪಡೆಯಬೇಕು. ಅವುಗಳ ಸೇವಾಶುಲ್ಕ ಈ ರೀತಿಯಿವೆ.

**ಪೂರಾಭಿಷೇಕ - ಒಬ್ಬರಿಗೆ ರೂ. 750-00**

**ಪುನುಗುಬಟ್ಟಲು - ಒಬ್ಬರಿಗೆ ರೂ. 300-00**

**ಕಸ್ತೂರಿ ಬಟ್ಟಲು - ಒಬ್ಬರಿಗೆ ರೂ. 150-00**

6. ಆರ್ಜಿತ ಸೇವೆಗೆ ನಿರ್ಣಯಿಸಿದ್ದಕ್ಕಿಂತ ಹೆಚ್ಚಿನ ಜನ ಬಂದರೆ ಏನುಮಾಡುವುದು? ಅವರನ್ನು ಒಳಕ್ಕೆ ಬಿಡುವರೇ?

ಎಂತಹ ಪರಿಸ್ಥಿತಿಯಲ್ಲಿಯೂ ಅನುಮತಿಸುವುದಿಲ್ಲ. ಹನ್ನೆರಡು ವರ್ಷದ ಕೆಳಗಿನ ಮಕ್ಕಳನ್ನು ಮಾತ್ರ ಉಚಿತವಾಗಿ ಒಳ ಬಿಡುವರು.

ಅಭಿಷೇಕ ಸೇವೆಯಲ್ಲಿ ಮಕ್ಕಳಿಗೆ ಅನುಮತಿಯಿಲ್ಲ.

7. ವೃದ್ಧರಿಗೆ ಅಂಗವಿಕಲರಿಗೆ ಪ್ರತ್ಯೇಕ ದರ್ಶನ ಸೌಲಭ್ಯವಿದೆಯೇ ?

ಇದೆ. ವೃದ್ಧರಿಗೆ, ವಿಕಲಾಂಗರಿಗೆ ಸ್ವಾಮಿ ಆಲಯದ ಮಹಾದ್ವಾರದ ಬಳಿಯಿಂದ ದರ್ಶನಕ್ಕೆ ಅನುಮತಿ ನೀಡುವರು. ಅವರು ಮಹಾದ್ವಾರದ ಬಳಿಯ ಅಧಿಕಾರಿಯನ್ನು ವಿಚಾರಿಸಬೇಕು. ಅಂಗವೈಕಲ್ಯ ಸ್ಪಷ್ಟವಾಗಿ ತಿಳಿಯುವಂತೆ ಇರಬೇಕು. ಅಥವಾ ಅವರ ಬಳಿ ಸಂಬಂಧ ಪಟ್ಟ ಸರ್ಟಿಫಿಕೆಟ್ ಇರಬೇಕು.

8. ಲಾಡು ಹೆಚ್ಚಿಗೆ ಬೇಕೆಂದರೆ ನೀಡುವರೇ?

ಪ್ರಸ್ತುತ ಇಂತಹ ಅವಕಾಶವಿಲ್ಲ. ಆದರೆ ಸ್ವಾಮಿ ಆಲಯದ ಕ್ಯೂಸಾಲಿನಲ್ಲಿ ಪ್ರತಿ ವ್ಯಕ್ತಿಗೆ ಒಂದು ಲಾಡು ಹೆಚ್ಚಿಗೆ ನೀಡುವ ಅವಕಾಶವುಂಟು.

9. ವಡೆ ಎಲ್ಲಿ ದೊರೆಯುತ್ತದೆ? ಅವುಗಳನ್ನು ಹೇಗೆ ಮಾರುವರು ?

ಆರ್ಜಿತಸೇವೆ ಮಾಡಿಸುವ ಗೃಹಸ್ಥರಿಗೆ ನೀಡುವ ವಡೆಗಳನ್ನು ಮಿಕ್ಕಲ್ಲಿ ಲಾಡು ಕೌಂಟರ್‌ಗಳಲ್ಲಿಯೇ ಮಾರಾಟ ಮಾಡುತ್ತಾರೆ.

10. ಆರ್ಜಿತಸೇವೆಯ ಟಿಕೆಟ್‌ಗಳು ಆಗಿಂದಾಗ್ಗೆ ದೊರೆಯುವುವೇ?

ಈ ಟಿಕೆಟ್‌ಗಳನ್ನು ಮೊದಲೇ ರಿಸರ್ವ್ ಮಾಡಿಸುವುದು ಉತ್ತಮ. ತಿರುಮಲೆಯ ವಿಜಯಾಬ್ಯಾಂಕಿನಲ್ಲಿ ಟಿಕೆಟ್‌ಗಳು ಲಭಿಸುವ ಅವಕಾಶವಿದೆ. ಆರ್ಜಿತಂ ಕಚೇರಿ, ವಿಜಯಾಬ್ಯಾಂಕ್‌ಗಳು, ತಿರುಮಲೆಯ ವೈಕುಂಠಂ ಕ್ಯೂಕಾಂಪ್ಲೆಕ್ಸ್ ಎದುರಿಗಿವೆ. ಇಲ್ಲಿಯೇ ಆರ್ಜಿತಂ ಟಿಕೆಟ್‌ಗಳು ಎಷ್ಟಿವೆ, ಎಂತಹ ಸೇವೆಗಳದ್ದು ಇವೆ -ಎಂಬುದನ್ನು ಕ್ಲೋಸ್ಡ್ ಸರ್ಕ್ಯೂಟ್ ಟಿ.ವಿ. ಯಲ್ಲಿ ನಿರಂತರವಾಗಿ ತೋರಿಸಲಾಗುತ್ತದೆ.

## ತಿರುಮಲೆಯಲ್ಲಿ ಉಚಿತ ಸೌಲಭ್ಯಗಳು

ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ ಬಹುತೇಕ ಎಲ್ಲಸೌಲಭ್ಯಗಳೂ ಉಚಿತವಾಗಿ ದೊರೆಯುತ್ತವೆ. ಭಕ್ತರು ಸ್ವಲ್ಪ ಸಹನೆಯಿಂದ ವರ್ತಿಸಿ ಈ ಕೆಳಗಿನ ಸೌಲಭ್ಯಗಳನ್ನು ಬಳಸಿಕೊಳ್ಳಬಹುದು.

★ ತಿರುಪತಿಯ ಬಸ್‌ನಿಲ್ದಾಣ,ರೈಲ್ವೆ ನಿಲ್ದಾಣಗಳಿಂದ ಅಲಿಪಿರಿಗೆ (ಬೆಟ್ಟದ ಬುಡಕ್ಕೆ) ತಿ.ತಿ.ದೇ. ಬಸ್ ಉಚಿತವಾಗಿ ಕರೆದೊಯ್ಯುತ್ತದೆ.

★ ಅಲಿಪಿರಿಯಿಂದ ಯಾತ್ರಿಕರ ವಸ್ತುಗಳನ್ನು ತಿರುಮಲೆಗೆ ಉಚಿತವಾಗಿ ಕೊಂಡೊಯ್ಯಲಾಗುವುದು.

★ ತಿರುಮಲೆಯಲ್ಲಿರಲು ಉಚಿತ ಸತ್ರಗಳು ಇವೆ.
ಪಿಲಿಗ್ರಿಂ ಅಮಿನಿಟೀಸ್ ಸೆಂಟರ್‌ಗಳಲ್ಲಿ ಇರಬಹುದು.
ಪಿಲಿಗ್ರಿಂ ಅಮಿನಿಟೀಸ್ ಸೆಂಟರ್‌ನಲ್ಲಿ ಲಾಕರ್ ಸೌಕರ್ಯ, ಸ್ನಾನದ ಅವಕಾಶಗಳಿವೆ.
ಇಲ್ಲಿಯೇ ಕೂದಲನ್ನೂ ಕೊಡಬಹುದು.

★ ಕಲ್ಯಾಣಕಟ್ಟೆಯಲ್ಲಿ ಉಚಿತವಾಗಿ ತಲೆಗೂದಲನ್ನು ಸಮರ್ಪಿಸಬಹುದು.

★ ಸ್ವಾಮಿಯ ದರ್ಶನ ಉಚಿತವಾಗಿ ದೊರೆಯುವುದು.

★ ದರ್ಶನದ ನಂತರ ಪ್ರಸಾದ ಉಚಿತವಾಗಿ ನೀಡಲಾಗುವುದು.

★ ದರ್ಶನಾನಂತರ ನಿತ್ಯಾನ್ನದಾನಂ ಕಾಂಪ್ಲೆಕ್ಸ್‌ನಲ್ಲಿ ಉಚಿತ ಭೋಜನ ಸೌಲಭ್ಯವುಂಟು.

★ ತಿರುಮಲೆಯ ಆಲಯ - ಕಾಟೇಜುಗಳ ಮಧ್ಯೆ ಉಚಿತ ಬಸ್ ಸೌಲಭ್ಯವಿದೆ.

★ ಲಾಕರ್‌ಗಳು ಉಚಿತವಾಗಿ ದೊರೆಯುವುವು.

★ ಉಚಿತವಾಗಿ ಪಾದರಕ್ಷೆಗಳನ್ನು ಭದ್ರಪಡಿಸಬಹುದು.

## ವಸತಿ ವಿವರ

11. ತಿರುಮಲೆಯಲ್ಲಿ ವಸತಿಯನ್ನು ಮೊದಲೇ ರಿಸರ್ವ್ ಮಾಡಿಸುವುದು ಹೇಗೆ? ಹಣವನ್ನು ಯಾರಿಗೆ ಎಷ್ಟು ದಿನ ಮೊದಲು ಹೇಗೆ ಕಳುಹಿಸಬೇಕು?

ನೂರು ರೂಪಾಯಿಗಳನ್ನು ಎಂ.ಓ. ಮೂಲಕ ಅಥವಾ ಡಿ.ಡಿ. ಮೂಲಕ ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ಆರ್. ಓ. - 1) ತಿ.ತಿ.ದೇ. ತಿರುಮಲೆ ಇವರಿಗೆ ಕಳುಹಿಸುವುದರ ಮೂಲಕ ತಿರುಮಲೆಯಲ್ಲಿ ವಸತಿಯನ್ನು ಮುಂಗಡ ಕಾಯ್ದಿರಿಸಬಹುದು.

ಈ ಡಿ.ಡಿ. ಅಥವಾ ಎಂ.ಓ. ಅನ್ನು ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ಆರ್.ಓ. - 1) ತಿ. ತಿ. ದೇವಸ್ಥಾನಗಳು ತಿರುಮಲೆ ಇವರಿಗೆ ಕಳುಹಿಸಬೇಕು. ಎಷ್ಟು ಮಂದಿ ಬರುತ್ತಿದ್ದಾರೆ, ಎಂದು ಬರುತ್ತಿದ್ದಾರೆ ಎಂಬುದನ್ನು ವಿವರವಾಗಿ ಸ್ಪಷ್ಟವಾಗಿ ಬರೆಯಬೇಕು.

ಸಾಧ್ಯವಾದಷ್ಟೂ ಮುಂಚೆ ರಿಸರ್ವ್ ಮಾಡಿಸಬೇಕು. ಕನಿಷ್ಠ 15 ದಿನಗಳ ಮೊದಲು ಮಾಡಿಸಬೇಕು ಎಂದರೆ 20 ದಿನ ಮೊದಲು ಎಂ.ಓ./ಡಿ.ಡಿ. ಕಳುಹಿಸಬೇಕು.

12. ಕೇಳಿದ ವಸತಿ ಗೃಹದಲ್ಲಿ ಕೊಠಡಿ ನೀಡುವರೇ?

ವಸತಿಗಾಗಿ ಮುಂಗಡ ರಿಸರ್ವ್ ಮಾಡುವುದು ರಾಮಬಗೀಚಾ, ವರಾಹಸ್ವಾಮಿ ಹಿಲ್‌ವ್ಯೂ ಡಿಲಕ್ಸ್, ಸಪ್ತಗಿರಿ ಅತಿಥಿಗೃಹಗಳಲ್ಲಿ ಮಾತ್ರವೇ ಸಾಧ್ಯ. ಮಿಕ್ಕ ಸ್ಥಳಗಳಲ್ಲಿ ರಿಸರ್ವೇಷನ್ ಇಲ್ಲ.

ರಿಸರ್ವೇಷನ್ ಮಾಡಿಸಿಕೊಂಡವರು ಆ ತಾಕೀತು ಪತ್ರವನ್ನು ಸಿ.ಆರ್.ಓ. ಕಚೇರಿಯ ಎ.ಆರ್.ಪಿ. ಕೌಂಟರಿನಲ್ಲಿ ತೋರಿಸಿ ವಸತಿ ಪಡೆಯಬಹುದು.

13. ರಿಸರ್ವೇಷನ್ ಮಾಡಿಸಿದವರು ಆ ದಿನದಂದು ಬರದೆ ಇದ್ದರೆ?

ಭಕ್ತರು ತಮ್ಮ ರಿಸರ್ವೇಷನ್ ದಿನಕ್ಕೆ ಮೂರು ದಿನ ಮೊದಲೇ ತಿಳಿಸಿದರೆ ಆಗ ಮಾತ್ರ ಅವರು ಕೇಳಿದ ಮುಂದಿನ ದಿನದಂದು ಖಾಲಿ ಇದ್ದರೆ ಅದೇ ಶುಲ್ಕವನ್ನು ಹೊಂದಿಸಲಾಗುವುದು. ರಿಸರ್ವೇಷನ್ ದಿನದ ನಂತರದ ದಿನದಲ್ಲಿ ಬಂದರೆ ಮಾರ್ಪಾಡು ಸಾಧ್ಯವಿಲ್ಲ.

ಸಮಾಚಾರ ಕೇಂದ್ರಗಳಲ್ಲಿ ರಿಸರ್ವ್ ಮಾಡಿದರೆ ಈ ನಿಬಂಧನೆ ವರ್ತಿಸದು.

14. ರಿಸರ್ವೇಷನ್ ಖಚಿತವಾದದ್ದು ಇಲ್ಲದ್ದು ತಿಳಿಸುವರೇನು?

ತಿಳಿಸುತ್ತಾರೆ, ಅದಕ್ಕೆ ಸಂಬಂಧಿಸಿದ ಕಾಗದವನ್ನು ಕಳುಹಿಸುತ್ತಾರೆ.

15. ಪದ್ಮಾವತೀ ಅತಿಥಿಗೃಹ ಮೊದಲಾದ ಇತರ ಕಡೆಗಳಲ್ಲಿ ರಿಸರ್ವ್ ಮಾಡುವರೇನು?

ಇವುಗಳಿಗೆ ರಿಸರ್ವೇಷನ್ ಸೌಲಭ್ಯವಿಲ್ಲ. ಯಾತ್ರಿಕರು ಆಯಾ ವಸತಿಗೃಹಗಳ ಬಳಿಗೆ ಹೋಗಿ ವಿಚಾರಿಸಿದರೆ ಖಾಲಿ ಇದ್ದರೆ ನೀಡುತ್ತಾರೆ.

16. ಒಬ್ಬರೇ ಬಂದರೆ ಕೋಣೆ ನೀಡುವರೇನು?

ಒಬ್ಬರಿಗೆ ಕೋಣೆ ನೀಡುವುದಿಲ್ಲ. ಅವರು ತಿರುಮಲೆಯ ಪಿಲಿಗ್ರೀಮ್ ಅಮಿನಿಟೀಸ್ ಸೆಂಟರ್‌ಗಳಲ್ಲಿ ಇರಬಹುದು. ಇಲ್ಲಿ ಸ್ನಾನದ ಸೌಕರ್ಯ, ಲಾಕರ್ ಸೌಲಭ್ಯ ಮೊದಲಾದವುಗಳಿರುತ್ತವೆ.

17. ನಾಲ್ಕು, ಐದು ದಿನ ತಿರುಮಲೆಯಲ್ಲಿ ಇರ ಬೇಕೆಂದರೆ ಹೇಗೆ? ವಸತಿ ನೀಡುವರೇನು?

ಇಲ್ಲ. ವಸತಿ ಕೇವಲ 24 ಗಂಟೆಗಳಿಗೆ ಮಾತ್ರವೇ ನೀಡುವರು. ಅತ್ಯವಸರ ಪರಿಸ್ಥಿತಿಯಲ್ಲಿ ಆರೋಗ್ಯ ಸರಿಯಿಲ್ಲದಾಗ, ಮಾರನೆಯ ದಿನ ಆರ್ಜಿತಸೇವೆಯ ಟಿಕೆಟ್ ಇದ್ದಾಗ ಒಂದು ದಿನ ಹೆಚ್ಚಿಗೆ ನೀಡುವರು. ಕಾಟೇಜು ದಾನಕರ್ತರು ಮಾತ್ರ ಒಮ್ಮೆಗೆ ಹತ್ತು ದಿನ ಇರಬಹುದು.

18. ಯಾರಿಗೆ ದೂರು ನೀಡುವುದು?

ತಿರುಮಲೆಯ ಎಲ್ಲ ವಿಚಾರಣಾ ಕೇಂದ್ರಗಳಲ್ಲಿಯೂ ದೂರು ದೋಷಗಳ ವಿವರಪುಸ್ತಕವಿದೆ. ಸಲಹೆಗಳನ್ನು ನೀಡಬಹುದು. ★

## ವಸತಿ ಕಾಯ್ದಿರಿಸುವಿಕೆ - ಹೆಚ್ಚಿನ ಮಾಹಿತಿ

ತಿರುಮಲೆಯಲ್ಲಿನ ವಸತಿಯನ್ನು ಮುಂಗಡ ಕಾಯ್ದಿರಿಸುವ ಬಗ್ಗೆ ತಮಗೆ ಮಾಹಿತಿ ದೊರೆಯವುದು ಕಷ್ಟವಾಗಿದೆಯೆಂದು ಹಲವು ಮಂದಿ ಯಾತ್ರಿಕರು ತಿಳಿಸಿದ್ದಾರೆ. ಯಾತ್ರಿಕರಿಗೆ ವಸತಿಯ ರಿಸರ್ವೇಷನ್ ಬಗ್ಗೆ ಸೂಕ್ತವಾದ ಮಾರ್ಗದರ್ಶನ ನೀಡಲು ಕೆಳಕಂಡ ಅಂಶಗಳನ್ನು ಗಮನಿಸಬೇಕೆಂದು ಕೋರಲಾಗಿದೆ.

1. ತಿರುಮಲೆಯ ಕೇಂದ್ರಸ್ವಾಗತ ಕಚೇರಿಯ ಎ.ಆರ್.ಪಿ. ಕೌಂಟರಿನ ಬಳಿಯ ನೋಟೀಸು ಬೋರ್ಡಿನಲ್ಲಿ ಆಯಾ ದಿನದ ರಿಸರ್ವೇಷನ್ ಸಮಾಚಾರದ ವಿವರವನ್ನು ನೀಡಲಾಗುತ್ತದೆ. ಈ ವಿವರ ಪತ್ರದಲ್ಲಿ ಯಾತ್ರಿಕರು ತಮ್ಮ ಹೆಸರು ಇದೆಯೋ ಇಲ್ಲವೊ ನೋಡಿ ತಿಳಿಯಬಹುದು. ಇತರ ಯಾವುದೇ ಸೇವೆ, ಪೂಜೆಗಳ ಬಗ್ಗೆ ಅಧಿಕ ವಿವರಗಳಿಗಾಗಿ ಯಾತ್ರಿಕರು ''ಮೇ ಐ ಹೆಲ್ಪ್ ಯು'' ಕೌಂಟರ್‌ಗಳಲ್ಲಿ ವಿಚಾರಿಸಬಹುದು.
2. ತಿರುಮಲೆಯ ಸ್ವಾಗತ ಕಚೇರಿಯ ಎ.ಇ.ಓ. ಅವರಿಂದ ಯಾತ್ರಿಕರು ತಮ್ಮ ವಸತಿಯ ರಿಸರ್ವೇಷನ್ನಿನ ಪ್ರತ್ಯುತ್ತರವಾಗಲೀ, ಖಚಿತ ಮಾಹಿತಿಯಾಗಲೀ ಪಡೆಯದಿದ್ದಲ್ಲಿ, ಅವರು ತಿರುಮಲೆಯ ದೂರವಾಣಿ 77681 ನಂಬರಿಗೆ ಯಾವುದೇ ಕೆಲಸದ ದಿನದ (ರಜೆಯ ದಿನಗಳ ಹೊರತು) ಬೆಳಗ್ಗೆ 11-00 ರಿಂದ ಸಂಜೆ 5-00 ವರೆಗೂ, 70928 ನಂಬರಿನ ದೂರವಾಣಿಗೆ ಯಾವುದೇ ಹೊತ್ತಿನಲ್ಲಿಯೂ ಫೋನ್ ಮಾಡಿ ತಮ್ಮ ಡಿ. ಡಿ. ಯ / ಎಂ.ಓ. ವಿವರಗಳನ್ನು ನೀಡಿ ಸರಿಯಾದ ಉತ್ತರ ಪಡೆಯಬಹುದು.
3. ಸೇವೆಯ ಟಿಕೆಟ್‌ಗಳಿಗೆ, ವಸತಿ ಕಾಯ್ದಿರಿಸುವದಕ್ಕೆ ಬೇರೆ ಬೇರೆ ಡಿ.ಡಿ.ಗಳನ್ನು ಕಳುಹಿಸಬೇಕು. ಸೇವೆಗಳಿಗಾಗಿ ಮೂರು ತಿಂಗಳ ಮೊದಲು ಡಿ.ಡಿ.ಯನ್ನು - ಪೇಷ್ಕಾರ್ ಶ್ರೀ ತಿರುಮಲೆ ಆಲಯ - ತಿರುಮಲೆ - ಇವರಿಗೆ ಕಳುಹಿಸಬೇಕು. ಸೇವೆಗಳ ಬಗ್ಗೆ ವಿವರಗಳಿಗಾಗಿ ಯಾತ್ರಿಕರು ತಿರುಮಲೆಯ 79277 ದೂರವಾಣಿ ನಂಬರಿಗೆ ಫೋನ್ ಮಾಡಿ ಆರ್ಜಿತಸೇವೆ ವಿಭಾಗದಲ್ಲಿ ವಿಚಾರಿಸಬಹುದು.
4. ವಸತಿ ಕಾಯ್ದಿರಿಸುವುದರ ಬಗ್ಗೆ ಮಾಹಿತಿ ನೀಡಲು, ಮುಂಗಡ ಕಾಯ್ದಿರಿಸುವ ಕೌಂಟರಿನಲ್ಲಿ ಈ ಮಾಹಿತಿಯನ್ನು ನೀಡಲೆಂದೇ ಒಂದು ಪ್ರತ್ಯೇಕ ಕಂಪ್ಯೂಟರ್ ಏರ್ಪಡಿಸಿದ್ದು, ತಿ.ತಿ.ದೇ. ಕೇಂದ್ರ ಸ್ವಾಗತ ಕಚೇರಿಯಲ್ಲಿನ ಪ್ರಧಾನ ಕಂಪ್ಯೂಟರ್ ಸೆಲ್‌ನಲ್ಲಿಯೂ ಯಾತ್ರಿಕರಿಗೆ ವಿವರವಾದ ಮಾಹಿತಿ ದೊರೆಯುವುದು. ಈ ಸೌಲಭ್ಯ ದಿನದ ಎಲ್ಲ ವೇಳೆಯಲ್ಲಿಯೂ ಉಪಲಬ್ಧವಿದೆ.

ಕೆ. ಸತ್ಯನಾರಾಯಣ ರಾಜು,
ಡೆ.ಇ.ಓ. (ಸ್ವಾಗತ II), ತಿ.ತಿ.ದೇ.

## ಆರ್ಜಿತ ಸೇವೆಗಳು

# ಶ್ರೀ ವೆಂಕಟೇಶ್ವರಸ್ವಾಮಿ ಆಲಯ – ತಿರುಮಲ

| ಕ್ರ.ಸಂ | ಸೇವೆ/ಉತ್ಸವ | ಪ್ರವೇಶ | ದಿನ | ಶುಲ್ಕ |
|---|---|---|---|---|
| **I. ದೈನಿಕ ಸೇವೆಗಳು :** | | | | |
| 1. | ಸುಪ್ರಭಾತ | 1 | ಪ್ರತಿದಿನ | ರೂ. 120-00 |
| 2. | ತೋಮಾಲಸೇವೆ | 1 | ಶುಕ್ರ, ಶನಿ, ಭಾನು ವಾರಗಳ ಹೊರತು | ರೂ. 220-00 |
| 3. | ಅರ್ಚನೆ | 1 | ಶುಕ್ರ, ಶನಿ, ಭಾನು ವಾರಗಳ ಹೊರತು | ರೂ. 220-00 |
| 4. | ಏಕಾಂತಸೇವೆ | 1 | ಪ್ರತಿದಿನ | ರೂ. 120-00 |
| 5. | ಕಲ್ಯಾಣೋತ್ಸವ | 5 | ಪ್ರತಿದಿನ | ರೂ. 2500-00 |
| 6. | ವಿಶೇಷ ಕಲ್ಯಾಣೋತ್ಸವ | 2 | ಪ್ರತಿದಿನ | ರೂ. 750-00 |
| 7. | ಆರ್ಜಿತ ಬ್ರಹ್ಮೋತ್ಸವ | 5 | ಪ್ರತಿದಿನ | ರೂ. 1000-00 |
| 8. | ಡೋಲೋತ್ಸವ | 5 | ಪ್ರತಿದಿನ | ರೂ. 1000-00 |
| 9. | ಅರ್ಚನಾನಂತರ ದರ್ಶನ | 1 | ಶುಕ್ರವಾರ ಹೊರತು | ರೂ. 100-00 |
| 10. | ಸಹಸ್ರ ದೀಪಾಲಂಕಾರಸೇವೆ | 5 | ಪ್ರತಿದಿನ | ರೂ. 1000-00 |
| 11. | ವಸಂತೋತ್ಸವ | 10 | ಪ್ರತಿದಿನ | ರೂ. 3000-00 |
| **II. ವಾರ ಸೇವೆಗಳು :** | | | | |
| 1. | ವಿಶೇಷ ಪೂಜೆ | 5 | ಸೋಮವಾರ | ರೂ. 3000-00 |
| 2. | ಅಷ್ಟದಳ ಪಾದಪದ್ಮಾರಾಧನೆ | 2 | ಮಂಗಳವಾರ | ರೂ. 2500-00 |
| 3. | ಸಹಸ್ರ ಕಲಶಾಭಿಷೇಕ | 6 | ಬುಧವಾರ | ರೂ. 5000-00 |
| 4. | ತಿರುಪ್ಪಾವಡಾ | 6 | ಗುರುವಾರ | ರೂ. 5000-00 |
| 5. | ಪೂರಾಭಿಷೇಕ | 1 | ಶುಕ್ರವಾರ | ರೂ. 750-00 |
| 6. | ಪುನುಗುಬಟ್ಟಲು | 1 | ಶುಕ್ರವಾರ | ರೂ. 300-00 |
| 7. | ಕಸ್ತೂರಿ ಬಟ್ಟಲು | 1 | ಶುಕ್ರವಾರ | ರೂ. 150-00 |
| 8. | ನಿಜಪಾದ ದರ್ಶನ | 1 | ಶುಕ್ರವಾರ | ರೂ. 100-00 |
| 9. | ವಸ್ತ್ರಾಲಂಕಾರ ಸೇವೆ | 2 | ಶುಕ್ರವಾರ | ರೂ. 12250-00 |
| **III. ವಾರ್ಷಿಕ ಉತ್ಸವಗಳು :** | | | | |
| 1. | ವಸಂತೋತ್ಸವ | 10 | ಏಪ್ರಿಲ್ | ರೂ. 3000-00 |
| 2. | ಪದ್ಮಾವತೀ ಪರಿಣಯ | 5 | ಮೇ | ರೂ. 5000-00 |
| 3. | ಅಭಿಧ್ಯೇಕ ಅಭಿಷೇಕ | 5 | ಜೂನ್ | ರೂ. 2000-00 |
| 4. | ಪುಷ್ಪ ಪಲ್ಲಕ್ಕಿ | 5 | ಜುಲೈ | ರೂ. 1000-00 |
| 5. | ಪವಿತ್ರೋತ್ಸವ | 5 | ಆಗಸ್ಟ್ | ರೂ. 7500-00 |
| 6. | ಪುಷ್ಪಯಾಗ | 5 | ನವಂಬರ್ | ರೂ. 3500-00 |
| 7. | ಕೋಯಿಲ್ ಆಳ್ವಾರ್ ತಿರುಮಂಜನ | 10 | ವರ್ಷಕ್ಕೆ 4 ಬಾರಿ | ರೂ. 3000-00 |
| 8. | ಪ್ಲವೋತ್ಸವ | 5 | ವರ್ಷಕ್ಕೆ 5 ದಿನ | ರೂ. 2500-00 |

ಆರ್ಜಿತ ಸೇವೆ ಮಾಡಬಯಸುವ ಯಾತ್ರಿಕರು ತಕ್ಕ ಹಣದ ಡಿ.ಡಿ.ಯನ್ನು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಪಡೆದು 90 ದಿನ ಮೊದಲು ಪೇಷ್ಕಾರ್ ಶ್ರೀ ತಿರುಮಲೆ ಆಲಯ - ತಿರುಮಲೆ - ಇವರಿಗೆ ಕಳುಹಿಸಬೇಕು. ಹೆಚ್ಚಿನ ವಿವರಗಳಿಗಾಗಿ ವಿಚಾರಿಸಿ - **ದೂರವಾಣಿ - 08574 - 79277.**

## ನಾಗುಲಾಪುರದಲ್ಲಿ ವೈಭವದ ಬ್ರಹ್ಮೋತ್ಸವ

ನಾಗುಲಾಪುರ ಪುತ್ತೂರು - ಮದರಾಸು ರಸ್ತೆಯಲ್ಲಿರುವ ಊರು. ವಿಜಯನಗರದ ವಿಖ್ಯಾತ ಚಕ್ರವರ್ತಿ ಶ್ರೀಕೃಷ್ಣದೇವರಾಯನು ತನ್ನ ತಾಯಿಯ ಹೆಸರಿನಲ್ಲಿ, ಇಲ್ಲಿ ಮೊದಲೇ ಇದ್ದಂತಹ ಶ್ರೀ ವೇದನಾರಾಯಣಸ್ವಾಮಿ ಆಲಯದ ಸುತ್ತಲೂ ಒಂದು ಗ್ರಾಮವನ್ನು ನಿರ್ಮಿಸಿದ. ಅದೇ ನಾಗುಲಾಪುರ ಎಂದು ಚರಿತ್ರೆಯಲ್ಲಿ ನಿಂತಿತು. ಇಲ್ಲಿನ ಸ್ವಾಮಿ ವೇದನಾರಾಯಣಸ್ವಾಮಿ - ಮತ್ಸ್ಯರೂಪಿ. ವೇದಗಳನ್ನು ಮಧುಕೈಟಭರಿಂದ ರಕ್ಷಿಸಲು ಮೀನಾಗಿ ನೀರಿಗಿಳಿದು ವೇದೋದ್ಧರನಾದ. ಹಾಗೆಂತಲೇ ಇಲ್ಲಿನ ನಾಲ್ಕು ಕೈನ ಭಗವಂತ ನಡುವಿನಿಂದ ಕೆಳಗೆ ಮತ್ಸ್ಯದಾಕಾರದಲ್ಲಿ ಕಂಡುಬರುತ್ತಾನೆ. ಮಿಕ್ಕಂತೆ ಮಹಾವಿಷ್ಣುವಿನ ಸಾಧಾರಣ ರೂಪವೇ. ಇಂತಹ ಒಂದು ವೇದೋದ್ಧಾರಕ ಮೂರ್ತಿಯನ್ನು ತನ್ನ ಕಿರಣಗಳಿಂದ ಸ್ಪರ್ಶಿಸಿ ಸೂರ್ಯನು ವರ್ಷಕ್ಕೆ ಮೂರುದಿನ ಪೂಜೆ ಮಾಡುತ್ತಾನೆ.

ಹೀಗೆಲ್ಲ ಖ್ಯಾತಿ ಹೊಂದಿರುವ ಶ್ರೀ ವೇದನಾರಾಯಣ ಸ್ವಾಮಿಯ ವಾರ್ಷಿಕ ಬ್ರಹ್ಮೋತ್ಸವಗಳು 25-4-2002 ರಿಂದ 4-5-2002 ರವರೆಗೆ ನಡೆದು ಯಶಸ್ವಿಯಾದವು. 26-4-2002 ರಂದು ಧ್ವಜಾರೋಹಣವಾಗಿ ಅಂದು ರಾತ್ರಿ ಸ್ವಾಮಿಯು ಉಭಯ ನಾಯಕಿಯರೊಡನೆ ಸಪ್ತಭೋಗದ ಶೇಷವಾಹನನಾಗಿ ಊರಿನಲ್ಲಿ ಮೆರವಣಿಗೆ ಬಂದುದು ಜನರ ಮನಸ್ಸಿಗೆ ಹರ್ಷ ದಾಯಕವಾಗಿದ್ದಿತು.

ನಂತರದ ದಿನಗಳಲ್ಲಿ ದಿನವೂ ಬೆಳಗ್ಗೆ ರಾತ್ರಿಗಳಲ್ಲಿ ವಿವಿಧ ರೀತಿಯ ವಾಹನಗಳಲ್ಲಿ ಮೆರವಣಿಗೆ ನಡೆಯಿತು. 30-4-2002 ರಂದು ಸಂಜೆ ಗರುಡೋತ್ಸವ ಅತ್ಯಂತ ಘನವಾಗಿ ನಡೆಯಿತು. 3-5-2002 ರಂದು ರಥೋತ್ಸವ ಊರಿನಲ್ಲೆಲ್ಲ ಉತ್ಸಾಹ ಸಂಭ್ರಮಗಳ ವಾತಾವರಣವನ್ನು ಮೂಡಿಸಿ ವಿಜೃಂಭಣೆ ಯಿಂದ ನಡೆಯಿತು.

4-5-2002 ರಂದು ಶನಿವಾರ ಸ್ವಾಮಿಯ ಬ್ರಹ್ಮೋತ್ಸವದ ಚಕ್ರಸ್ನಾನ ವಿಧಿವತ್ತಾಗಿ ಆಲಯ ಪುಷ್ಕರಿಣಿಯಲ್ಲಿ ನಡೆಯಿತು.

ಬ್ರಹ್ಮೋತ್ಸವಗಳಲ್ಲಿ ಊರೆಲ್ಲ ತಳಿರು ತೋರಣಗಳಿಂದಲೂ, ಹೂವಿನಲಂಕಾರ ಗಳಿಂದಲೂ ಅಲಂಕೃತವಾಗಿದ್ದಿತು. ಸ್ಥಳೀಯರೇ ಅಲ್ಲದೆ ಹತ್ತಿರದ ಊರುಗಳಿಂದಲೂ ಹೆಚ್ಚು ಮಂದಿ ಆಗಮಿಸಿ ಬ್ರಹ್ಮೋತ್ಸವದ ಕ್ರಮದಲ್ಲಿ ಭಾಗವಹಿಸಿದರು.

# ವಾರ್ತಾಲಹರಿ

## ಯಶಸ್ವಿಯಾದ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವವು 17-5-2002 ರಿಂದ 26-5-2002 ವರೆಗೆ ಉತ್ಸಾಹದಿಂದ ನಡೆದು ಮುಕ್ತಾಯವಾಯಿತು.

ತತ್ಸಂಬಂಧವಾಗಿ 17-5-2002 ಶುಕ್ರವಾರ ಸಂಜೆ ವಿಷ್ವಕ್ಸೇನರು ಆಲಯದ ಹೊರಕ್ಕೆ ಬಂದು ಬ್ರಹ್ಮೋತ್ಸವದ ಯಜ್ಞಕಾರ್ಯಕ್ಕೆ ಮೃತ್ಸಂಗ್ರಹ ಮಾಡಿದರು. ಮಾರನೆಯ ದಿನದಿಂದ ನಡೆಯತಕ್ಕ ಉತ್ಸವಗಳಿಗೆ ದೇವಾದಿ ದೇವತೆಗಳನ್ನು ಆಹ್ವಾನಿಸಿದರು. ನಂತರ ಆಲಯದಲ್ಲಿ ಬ್ರಹ್ಮೋತ್ಸವದ ಅಂಕುರಾರ್ಪಣೆ ಯಾಯಿತು.

18-5-2002 ರಂದು ಧ್ವಜಾರೋಹಣ ಘನವಾಗಿ ನಡೆಯಿತು. ಅಂದು ಸಂಜೆ ದೊಡ್ಡ ಶೇಷವಾಹನದಲ್ಲಿ ಸ್ವಾಮಿಯು ಊರ ಮೆರವಣಿಗೆಯಲ್ಲಿ ಉಭಯ ನಾಯಕಿಯ ರೊಡನೆ ದಯಮಾಡಿಸಿದರು. ಭಕ್ತರಿಗೆ ಆನಂದದ ಕಡಲಲ್ಲಿ ಈಜಾಡಿದ ಅನುಭವ.

ದಿನವೂ ಶ್ರೀ ಗೋವಿಂದರಾಜಸ್ವಾಮಿಯ ಊರ ಮೆರವಣಿಗೆ ಬೆಳಗ್ಗೆ ಸಾಯಂಕಾಲಗಳಲ್ಲಿ ನಡೆಯಿತು. ಹಂಸವಾಹನದಲ್ಲಿ ವೀಣಾಪಾಣಿ ಯಾಗಿಯೂ, ಉಗ್ರಸಿಂಹ ವಾಹನದಲ್ಲಿ ಪುರುಷ ಸಿಂಹನಾಗಿಯೂ, ಕಲ್ಪವೃಕ್ಷ ವಾಹನದಲ್ಲಿ ಕಲ್ಪ ತರುವಾಗಿಯೂ, ಪಲ್ಲಕ್ಕಿಯಲ್ಲಿ ಮೋಹಿನಿ ಯಾಗಿಯೂ - ಸ್ವಾಮಿ ವಿವಿಧ ರೂಪದಲ್ಲಿ ದಿನದಿನವೂ ಕಂಡು ಬರುತ್ತಿರಲು ಇಂದು ಬಂದವರು ನಾಳೆಯೂ ಇದ್ದುನೋಡಿಕೊಂಡು ಹೋಗುವ ಎಂಬಂತೆ ಅಲಂಕಾರ ವೈವಿಧ್ಯ, ಅನುಗ್ರಹದ ಔದಾರ್ಯವಿದ್ದಿತು. ಗರುಡ ವಾಹನದಲ್ಲಿ ವಿಶೇಷ ಅಲಂಕಾರಗಳಿಂದ ಸ್ವಾಮಿ ಹೊರಬಂದಾಗ ಎಲ್ಲರೂ ಮುಗಿಬಿದ್ದು, ಸಾಲುಗಟ್ಟಿ ರಸ್ತೆಯ ಇಕ್ಕೆಲಗಳಲ್ಲಿ ಕಾದುನಿಂತು ಸ್ವಾಮಿಯನ್ನು ಬರಮಾಡಿಕೊಂಡರು. 25-2-2002 ರಂದು ಶನಿವಾರ ರಥೋತ್ಸವ. ಆತ್ಮಾನಾಂ ರಥಿನಂ ವಿದ್ಧಿ ಎಂಬ ತತ್ತ್ವವನ್ನು ಸಾರಲೆಂಬಂತೆ ಸ್ವಾಮಿ ಹೊರಬಂದಾಗ ಅಶೇಷ ಜನ ಉಘೇ ಉಘೇ ಎಂದು ಸ್ವಾಮಿಯನ್ನು ಸ್ವಾಗತಿಸಿದರು.

26-5-2002 ರಂದು ಚಕ್ರಸ್ನಾನವಾಗಿ ಧ್ವಜಾವರೋಹಣವಾಯಿತು. ಸ್ವಾಮಿಯ ಬ್ರಹ್ಮೋತ್ಸವಗಳು ಯಶಸ್ವಿಯಾಗಿ ಮುಗಿತಾಯ ಹೊಂದಿದವು. ತತ್ಸಂಬಂಧದಲ್ಲಿ ಸಂಗೀತ, ಹರಿಕಥೆ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳೂ ಏರ್ಪಾಡಾಗಿದ್ದವು. ಊರೆಲ್ಲ ಹಸಿರು ಹೂಗಳಿಂದ ಅಲಂಕೃತವಾಗಿ ಯಾತ್ರಿಕ ನಗರ ಭಕ್ತನಗರವಾಗಿದ್ದಿತು.

## ಯಶಸ್ವಿ ಪದ್ಮಾವತೀ ಪರಿಣಯ

ತಿರುಮಲೆಯಲ್ಲಿ ವಾರ್ಷಿಕ ಪದ್ಮಾವತೀ ಪರಿಣಯವು ಮೂರುದಿನಗಳ ಕಾಲ 20-5-2002 ರಿಂದ ನಾರಾಯಣಗಿರಿಯ ಬಯಲು ಕಲ್ಯಾಣ ಮಂಟಪದಲ್ಲಿ ಯಶಸ್ವಿಯಾಗಿ ನಡೆಯಿತು.

20-5-2002 ರಂದು ಸೋಮವಾರದಂದು ಬೆಳಗ್ಗೆ ಸಾಲಂಕೃತರಾದ ಸ್ವಾಮಿ ವರನಾಗಿ

# ತಿರುಮಲೆಯ ಸ್ವಾಮಿಗೆ "ಗೋಸೇವಾ ನಿಧಿ"

ತಿರುಮಲ ತಿರುಪತಿ ದೇವಸ್ಥಾನದವರ ಶ್ರೀ ವೆಂಕಟೇಶ್ವರ ಡೈರಿ ಫಾರಂ ಅಭಿವೃದ್ಧಿ ಹೊಂದುತ್ತಿರುವ ಸಂಸ್ಥೆ, ತಿರುಮಲೆಯ ಸ್ವಾಮಿಯ ನಿತ್ಯಸೇವೆಗಳಿಗೆ ನಿತ್ಯಾನ್ನದಾನಕ್ಕೆ ವಿಕಲಾಂಗ ಸೇವಾ ಶಿಬಿರಗಳಿಗೆ ಮತ್ತೂ ತಿ.ತಿ.ದೇ. ಆಡಳಿತದ ಆಲಯಗಳಿಗೆ ನಿತ್ಯವೂ ಅವಸರವಾಗುವ ಹಾಲು ಮೊಸರು ತುಪ್ಪಗಳನ್ನು ಒದಗಿಸುತ್ತಿದೆ.

ಈ ಡೈರಿ ಫಾರಮ್ಮಿನಲ್ಲಿ - ಪಶುಸಂಗೋಪನಾಶಾಲೆಯಲ್ಲಿ - ಸುಮಾರು 500 ಹಸುಗಳು ಮತ್ತು ಸ್ವಾಮಿಗೆ ಸೇರಿದ ಕುದುರೆಗಳು, ಆನೆಗಳು, ಪುನುಗು ಬೆಕ್ಕು, ನಂದಿವಾಹನಗಳು ಮೊದಲಾದವೆಲ್ಲ ಡಾ|| ಪಿ. ಕೊಂಡಾರೆಡ್ಡಿ ಅವರ ಪರ್ಯವೇಕ್ಷಣೆಯಲ್ಲಿ ನಿಪುಣರಾದ ವೈದ್ಯರುಗಳ ನಿರಂತರ ಕೃಷಿಯಿಂದ ಪೋಷಿಸಲ್ಪಡುತ್ತಿವೆ.

ಸ್ವಾಮಿ ಸೇವೆಯಲ್ಲಿ ಗೋಕ್ಷೀರದ ಅಗತ್ಯವನ್ನು ಗುರುತಿಸುತ್ತ ಅನೇಕ ಮಂದಿ ಭಕ್ತರು ಅನಾದಿ ಕಾಲದಿಂದಲೂ ಗೋದಾನವನ್ನು ಮಾಡುತ್ತಿದ್ದಾರೆ. ಮುಖ್ಯವಾಗಿ ಈಚಿನ ಕಾಲದಲ್ಲಿ ಶ್ರೀ ವೆಂಕಟೇಶ್ವರ ಭಕ್ತ ಸಮಾಜದಂತಹವರ ಮೂಲಕ ಹಲವು ಲಕ್ಷ ರೂಪಾಯಿಗಳು ಈ ಕಾರ್ಯಕ್ಕಾಗಿ ಸೇರಿ ಬಂದಿವೆ. ಈಗ ಆಸ್ಟ್ರೇಲಿಯಾದಿಂದಲೂ ಪ್ರತ್ಯೇಕವಾಗಿ ಪುಷ್ಟಿಯಿಂದ ಬೆಳೆದ ಹಸುಗಳನ್ನು ತರಿಸಲಾಗುತ್ತಿದೆ.

ಮುಖ್ಯವಾಗಿ ಗೋಶಾಲೆಯ ಮೂಲಕ ಮತ್ತಷ್ಟು ಹಸುಗಳನ್ನು ಸೇರಿಸಿ ಸ್ವಾಮಿಯ ನಿತ್ಯಸೇವೆಗಳಲ್ಲಿ ಕ್ಷೀರಸಮೃದ್ಧಿಯಿರುವಂತೆ ನೋಡಿಕೊಳ್ಳಲು ತಿ.ತಿ.ದೇ. ವತಿಯಿಂದ ಶ್ರೀ ವೆಂಕಟೇಶ್ವರ ಗೋಸಂರಕ್ಷಣ ಟ್ರಸ್ಟ್ ಏರ್ಪಾಡಾಗಿದೆ.

ಗೋಮಾತೆಯ ಸೇವೆ ಭಾರತೀಯರಿಗೆ ಪವಿತ್ರತಮವಾದ ಕರ್ತವ್ಯ. ಗೋಮಾತೆಯ ತ್ಯಾಗ ನಿರತಿ, ಪವಿತ್ರಗಳನ್ನು ಸ್ತುತಿಸಲು ಆದಿಶೇಷನಿಗೂ ಅಸದಳವೆಂಬುದು ಸರಿ. ಅಂತಹ ಗೋವು ಸ್ವಾಮಿಯನ್ನು ಸೇವಿಸಲು ಗೋಶಾಲೆಗೆ ಬರುವುದಾದರೆ, ಬಂದರೆ, ಅವನ್ನು ಪವಿತ್ರವಾಗಿ ಪೂಜ್ಯವಾಗಿ ಪರಿರಕ್ಷಿಸಿ ಪೋಷಿಸುವುದು ನಮ್ಮ ಧರ್ಮವೂ ಆಗಿದೆ.

ಶ್ರೀ ವಾಡ್ರೇವು ಗವರ್‍ರಾಜು ಅವರು ಶ್ರೀ ವೆಂಕಟೇಶ್ವರ ಭಕ್ತ ಸಮಾಜದ ಮೂಲಕ ಇದುವರೆಗೆ ಬ್ಯಾಂಕ್ ಡ್ರಾಫ್ಟ್‌ಗಳ ಮೂಲಕವೇ ಗೋಸೇವೆ ಸಲ್ಲಿಸಿದಂತೆಯೇ ಬರುವ ಆಗಸ್ಟ್ 31 ರಂದು ಶ್ರೀಕೃಷ್ಣ ಜನ್ಮಾಷ್ಟಮಿ ದಿನದಂದು ತಿ. ತಿ. ದೇವಸ್ಥಾನಗಳ ಸಹಕಾರದಿಂದ 'ಕಾಮಧೇನು ಮಹಾಯಜ್ಞವನ್ನು' ನಿರ್ವಹಿಸಿ ಶ್ರೀ ವೆಂಕಟೇಶ್ವರ ಗೋಸಂರಕ್ಷಣ ನಿಧಿಗೆ ಒಂದು ಕೋಟಿ ರೂಪಾಯಿಗಳ ನಿಧಿಯನ್ನು ಸಮರ್ಪಿಸಲಿದ್ದಾರೆ.

ಇಂತಹ ಮಹತ್ತರ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಕಂಚಿ ಕಾಮಕೋಟಿ ಪೀಠಾಧಿಪತಿಗಳು ಶ್ರೀ ಶ್ರೀ ಶಂಕರ ವಿಜಯೇಂದ್ರ ಸರಸ್ವತೀ ಸ್ವಾಮಿಜೀ ಅವರು ಬರಲಿದ್ದಾರೆ. ತಿ.ತಿ.ದೇ. ಪೂರ್ವ ಕಾರ್ಯನಿರ್ವಹಣಾಧಿಕಾರಿಗಳಾದ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಡಾ|| ಐ. ವಿ. ಸುಬ್ಬಾರಾವ್ ಅವರು ಸಹ ಭಾಗವಹಿಸಲಿದ್ದಾರೆ.

ಇದರೊಡನೆಯೇ ಶ್ರೀ ವೆಂಕಟೇಶ್ವರ ಭಕ್ತಿ ಪ್ರಚಾರ ಪೀಠದ ಪ್ರತ್ಯೇಕ ಕಾರ್ಯಕ್ರಮಗಳಾಗಿ ಆಗಸ್ಟ್ - 30 ಹಾಗೂ ಸೆಪ್ಟೆಂಬರ 1 ರಂದು ಗಣಪತಿಹೋಮ, ಶ್ರೀನಿವಾಸ ಐಶ್ವರ್ಯ ಲಕ್ಷ್ಮಿ ಹೋಮ, ಶ್ರೀ ವೆಂಕಟೇಶ್ವರ ಲಕ್ಷನಾಮಾರ್ಚನ, ಆಯುಷ್ ಹೋಮ, ಶ್ರೀ ವೆಂಕಟೇಶ್ವರ ಲಿಖಿತನಾಮ ಜಪ ಸಮರ್ಪಣ, ಅನ್ನಮಯ್ಯ ಆರಾಧನೋತ್ಸವಗಳು ನಡೆಯುತ್ತವೆ.

ತಿರುಮಲೆ ಸ್ವಾಮಿಯ ಗೋಸೇವಾನಿಧಿಯ ವಂತಿಗೆಗಳನ್ನು ನೀಡಬಯಸುವ ಭಕ್ತರು ಕೇವಲ ಬ್ಯಾಂಕ್ ಡ್ರಾಫ್ಟ್‌ಗಳ ಮೂಲಕ ಮಾತ್ರವೇ ಸಾವಿರ ಹಾಗೂ ಅದರ ಗುಣಕಗಳಲ್ಲಿ ವಂತಿಗೆಗಳನ್ನು **ನಿರ್ದೇಶಕರು, ಎಸ್.ವಿ.ಡೈರಿಫಾರಂ, ತಿ.ತಿ.ದೇ., ತಿರುಪತಿ ಇವರಿಗಾಗಲೀ ಶ್ರೀ ವೆಂಕಟೇಶ್ವರ ಭಕ್ತಿಪ್ರಚಾರ ಪೀಠ 2-1108/1/1 ಶಿವಂ ರಸ್ತೆ, ನ್ಯೂ ನಲ್ಲಕುಂಟ, ಹೈದರಾಬಾದ್ (ದೂರವಾಣಿ - 7550846) ಇವರಿಗಾಗಲೀ 2002 ರ ಆಗಸ್ಟ್ 14 ರ ಒಳಗೆ ಕಳುಹಿಸಬೇಕು.** ತಮ್ಮ ಹೆಸರು, ಗೋತ್ರ, ಪೂರ್ತಿ ವಿಳಾಸ - ಫೋನ್ ನಂಬರು ಮೊದಲಾದವನ್ನೂ ಜೊತೆಗೇ ಕಳುಹಿಸಬೇಕು. ಅಂತಹವರಿಗೆ ಕಾರ್ಯಕ್ರಮದ ಆಹ್ವಾನ ಪತ್ರ, ಅನುಮತಿ ಪತ್ರ, ಮೊದಲಾದವನ್ನು ಕಳುಹಿಸಲಾಗುತ್ತದೆ. ನಗದು ವಂತಿಗೆಗಳನ್ನು ಸ್ವೀಕರಿಸಲಾಗುವುದಿಲ್ಲ. ಐದು ಸಾವಿರ ರೂಪಾಯಿಗಳಿಗಿಂತ ಹೆಚ್ಚಿನ ದಾನಗಳಿಗೆ ಪ್ರತ್ಯೇಕ ಸತ್ಕಾರವುಂಟು.

ಶ್ರೀ ವೆಂಕಟೇಶ್ವರ ಗೋಸೇವಾ ಟ್ರಸ್ಟ್‌ಗೆ ನೀಡುವ ದಾನಗಳೆಲ್ಲ ಸೆಕ್ಷನ್ 80 (G) ಪ್ರಕಾರ ಆದಾಯಕರ ಮುಕ್ತವಾಗುತ್ತವೆ.

ಕೀರ್ತಿಶೇಷರಾದ ತಮ್ಮ ಹಿರಿಯರ, ಕಿರಿಯರ ಹೆಸರಿನಲ್ಲಿಯೂ ದಾನಿಗಳು ವಂತಿಗೆಗಳನ್ನು ಸಲ್ಲಿಸಬಹುದಾಗಿದೆ.

ಗೋದಾನವನ್ನು ಸ್ವೀಕರಿಸುವವನು ಶ್ರೀನಿವಾಸ, ನೀಡುವವನು ಭಕ್ತ. ಇಂತಹ ದೊಡ್ಡ ಅದೃಷ್ಟ ಇಂದಿನ ಮಾನವರಿಗೆ ದೊರೆಯುವುದೇ ಒಂದು ವಿಶೇಷ.

ತಿರುಪತಿಗೆ ಬರುವ ಸ್ವಾಮಿಯ ಭಕ್ತರೆಲ್ಲ ಸ್ವಾಮಿಯ ಗೋಶಾಲೆಯನ್ನು ತಪ್ಪದೆ ಸಂದರ್ಶಿಸಿ, ಗೋಮಾತೆಯ ದರ್ಶನದಿಂದ ಸಂತೃಪ್ತಿ ಪಡೆಯಿರಿ - ಎಂದು ವಿನಂತಿ.

ಗಜವಾಹನದಲ್ಲಿ ಆಲಯದ ದಕ್ಷಿಣ ಮಾಡವೀಧಿಯ ಮೂಲಕ ವಿವಾಹ ವೇದಿಕೆಯನ್ನು ಸೇರಿದರೆ, ಶ್ರೀ ಭೂದೇವಿಯರು ವಧುಗಳಾಗಿ ಪಲ್ಲಕ್ಕಿಯಲ್ಲಿ ಆಗಮಿಸಿದರು. ಅಲಂಕೃತ ವಿವಾಹ ಮಂಟಪದಲ್ಲಿ ವೈದಿಕ ಸಂಪ್ರದಾಯಾನುಸಾರವಾಗಿ ವಿವಾಹದ ಕಾರ್ಯಕ್ರಮಗಳು ನಡೆದವು. ನಂತರ ಹರಿಕಥೆಯನ್ನು ಏರ್ಪಡಿಸಲಾಗಿದ್ದಿತು. ನಾರಾಯಣಗಿರಿಯ ಉದ್ಯಾನವನದಲ್ಲಿ ಈ ಕಾರ್ಯಕ್ರಮಗಳೆಲ್ಲ ನಡೆದ ಮೇಲೆ ಉತ್ತರಮಾಡವೀಧಿಯ ಮೂಲಕ ಸ್ವಾಮಿಯು ಉಭಯನಾಯಕೀ ಸಹಿತರಾಗಿ ಮೆರವಣಿಗೆಯಲ್ಲಿ ಆಲಯವನ್ನು ಬಂದು ಸೇರಿದರು.

ವೈಶಾಖ ಶುದ್ಧ ದಶಮಿಯ ದಿನ 21-5-2002 ರಂದು ಮಂಗಳವಾರ ಸ್ವಾಮಿ ಅಶ್ವವಾಹನದಲ್ಲಿ ಕಲ್ಯಾಣಮಂಟಪಕ್ಕೆ ಬಂದರು. ಬಂಗಾರದ ತಿರುಚ್ಚಿಯಲ್ಲಿ ಶ್ರೀ ಭೂದೇವಿಯರ ಬರೋಣವಾಯಿತು. ಸಾಂಗವಾಗಿ ವಿವಾಹ ಮಹೋತ್ಸವವು ನಡೆದಾದ ಮೇಲೆ ಸಂಗೀತ ಕಚೇರಿಯನ್ನು ಏರ್ಪಡಿಸಲಾಗಿದ್ದಿತು. ನಂತರ ಉತ್ತರ ಮಾಡವೀಧಿಯಲ್ಲಿ ಯಥಾ ಪ್ರಕಾರ ಮೆರವಣಿಗೆಯಲ್ಲಿ ದೇವದೇವಿಯರು ಆಲಯವನ್ನು ಸೇರಿದರು.

22-5-2002 ರಂದು ಬುಧವಾರ ಸ್ವಾಮಿಯು ಗರುಡವಾಹನನಾಗಿ ಕಲ್ಯಾಣ ಮಂಟಪಕ್ಕೆ ಆಗಮಿಸಿದರೆ ತಿರುಚ್ಚಿಯಲ್ಲಿ ಉಭಯ ನಾಚ್ಚಿಯಾರರ ಆಗಮನವಾಯಿತು. ವಿವಾಹ ಕ್ರಿಯೆಗಳು ಯಥಾವಿಧಿಯಾಗಿ ನಡೆದ ಮೇಲೆ ಸ್ವಾಮಿಯ ಓಲಗ ನಡೆಯಿತು.

ಶ್ರೀ ಪದ್ಮಾವತೀ ಪರಿಣಯದಲ್ಲಿ ದಿನಕ್ಕೆ 700 ಕಿಲೋಗ್ರಾಂ ತೂಕದ ವಿವಿಧ ರೀತಿಯ ಹೂವುಗಳನ್ನು ಬಳಸಲಾಯಿತು. ಮೂರುದಿನಗಳಲ್ಲಿ 2100 ಕಿಲೋ ಹೂವಿನಲಂಕಾರವನ್ನು ಉದ್ಯಾನವನ ವಿಭಾಗಾಧಿಕಾರಿ ಡಾ|| ವಿ. ಟಿ. ಶ್ರೀನಿವಾಸ್ ಅವರ ಪರ್ಯವೇಕ್ಷಣೆಯಲ್ಲಿ ಅತ್ಯಂತ ಸುಂದರವಾಗಿ ಏರ್ಪಡಿಸಲಾಗಿದ್ದಿತು. ಸಾಂಸ್ಕೃತಿಕ ಕಾರ್ಯಕ್ರಮಗಳು ಯಶಸ್ವಿಯಾದವು.

## ತಿರುಮಲೆಯ ಪುರಾವಸ್ತು ಪ್ರದರ್ಶನಾಲಯದಲ್ಲಿ ಹೊಸ ಗ್ಯಾಲರಿಗಳು

ತಿರುಮಲೆಯಲ್ಲಿ ಎರಡನೆಯ ವೈಕುಂಠಂ ಕ್ಯೂಕಾಂಪ್ಲೆಕ್ಸ್‌ನ ಎದುರಿಗಿರುವ ತಿ.ತಿ.ದೇ. ಪುರಾವಸ್ತು ಪ್ರದರ್ಶನಾಲಯದಲ್ಲಿ ಶ್ರೀನಿವಾಸನಿಗೆ ಸಂಬಂಧಿಸಿದ ಹಾಗೂ ವೈಷ್ಣವ ಧರ್ಮ ಇತಿಹಾಸಗಳ ಹಲವು ಹನ್ನೊಂದು ವಿಷಯಗಳಿಗೆ ಸಂಬಂಧಿಸಿದ ಪುರಾತತ್ವ ಪ್ರದರ್ಶನ ಶಾಲೆಯಲ್ಲಿ ಐದು ಹೊಸಗ್ಯಾಲರಿಗಳನ್ನು 17-5-2002 ರ ಶುಕ್ರವಾರ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರು ಉದ್ಘಾಟಿಸಿದರು.

ತಿರುಮಲೆಯ ಆಲಯಕ್ಕೆ ವರ್ಷಕ್ಕೆ ಒಂದೋ ಎರಡೋ ಬಾರಿ ಬಂದು ಸ್ವಾಮಿಯನ್ನು ಸಂದರ್ಶಿಸಿ ಹಿಂದಿರುಗುವವರೇ ಬಹುಮಂದಿ. ಅವರಿಗೆ ವರ್ಷಪೂರ್ತಿ ನಡೆಯುವ ಸ್ವಾಮಿಯ ಉತ್ಸವಗಳ, ಹಬ್ಬಗಳ ಒಂದು ಕಿರು ಚಿತ್ರ ಪರಿಚಯ ಮಾಡಿಕೊಡುವಂತೆ ಈ ಮ್ಯೂಸಿಯಮ್ಮಿನಲ್ಲಿ ಎಲ್ಲ ಉತ್ಸವಗಳ ಬಹುವರ್ಣ ಚಿತ್ರಗಳನ್ನು ದೊಡ್ಡ ದೊಡ್ಡ ಪಟಗಳನ್ನಾಗಿ ಆಕರ್ಷಕವಾಗಿ ಇಡಲಾಗಿದೆ. ಜೊತೆಗೆ ಇತಿಹಾಸದ ಆದಿಕಾಲದಿಂದ ಇಂದಿನ ವರೆಗಿನ ಹಲವು ಹನ್ನೊಂದು ಶಿಲಾ ವಿಗ್ರಹಗಳ ಆಕರ್ಷಕ ನಮೂನೆಗಳೂ ಉಂಟು. ಇನ್ನೊಂದು ಕಡೆ ಯುದ್ಧೋಪಕರಣಗಳಾದ ಖಡ್ಗ, ಢಾಲು, ಕಠಾರಿ, ಗುರಾಣಿ, ಕವಚ, ಶಿರಸ್ತ್ರಾಣ ಮೊದಲಾದ ವಿಜಯನಗರ ಕಾಲದ ಆಯುಧ ವೈವಿಧ್ಯವೂ ಇದೆ. ಹಲವು ಹತ್ತು ವಿಧದ ಕಂಚಿನ, ಪಂಚಲೋಹದ, ತಾಮ್ರದ, ವಿಗ್ರಹಗಳ ವೈವಿಧ್ಯಮಯ ಸಂಗ್ರಹವೂ ಉಂಟು. ಜೊತೆಗೇ ಇತಿಹಾಸದಲ್ಲಿ ನಡೆದು ಬಂದ ಹಲ ವಿಧದ ಸಂಗೀತ ವಾದ್ಯಗಳು - ವೀಣೆಗಳೇ ಹಲವು ಬಗೆ, ಮೃದಂಗ, ಢಕ್ಕೆ - ಮೊದಲಾದವುಗಳು ತಿರುಮಲೆಯ ವಿವಿಧ ಸ್ಥಳಗಳ ಆಲಯ ಮಂಟಪಗಳ ಪ್ರತಿಕೃತಿಗಳೂ ಉಂಟಾಗಿದ್ದು ತಿರುಮಲೆಯ ಒಟ್ಟು ದರ್ಶನಕ್ಕೆ ಅವಕಾಶವಾಗಿದೆ. ತಿರುಮಲೆಯ ಆಲಯದ ಒಟ್ಟು ಇತಿಹಾಸವನ್ನು ಪ್ರತಿಮಿಸುವ ಒಂದು ಕಾಲ ಕೋಶದಲ್ಲಿ ಹೊಕ್ಕು ಹೊರಬಂದ ಅನುಭವವುಂಟುಮಾಡುವ ಈ ಪುರಾವಸ್ತು ಸಂಗ್ರಹಾಲಯವನ್ನು ಸಂದರ್ಶಿಸುವುದು ಒಂದು ರೀತಿಯಲ್ಲಿ ಆನಂದವಾದರೆ, ಒಂದು ರೀತಿಯಲ್ಲಿ ಆತ್ಮಜ್ಞಾನವೂ ಆದೀತು ಎಂಬುದು ಒಟ್ಟು ಧ್ವನಿಯಾಗಿ, ಇಲ್ಲಿನ ದರ್ಶನ ಹಲಕಾಲ ನಿಲ್ಲುವಂತಹುದು ಎಂಬುದು ಹಲವರ ಹೇಳಿಕೆ.

## ನೂತನ ಪೌರಸಂಬಂಧಾಧಿಕಾರಿ ಡಾ || ಪಿ. ರಂಗರಾವ್

ತಿ. ತಿ. ದೇವಸ್ಥಾನಗಳ ಪೌರ ಸಂಬಂಧಾಧಿಕಾರಿ ಹುದ್ದೆಯನ್ನು 22-5-202 ರಂದು ಒಂಗೋಲು, ಪ್ರಕಾಶಂಗಳಲ್ಲಿ ವಾರ್ತಾಪ್ರಚಾರ ಇಲಾಖೆಯ ಡೆಪ್ಯೂಟಿ



ಡೈರೆಕ್ಟರ್ ಆಗಿ ಕೆಲಸ ನಿರ್ವಹಿಸಿರುವ ಡಾ|| ಪಿ. ರಂಗರಾವ್ ಅವರು ವಹಿಸಿ ಕೊಂಡಿದ್ದಾರೆ.

ಏಳು ವರ್ಷಗಳಿಂದ ತಿ. ತಿ. ದೇವಸ್ಥಾನಗಳ ಪೌರಸಂಬಂಧಾಧಿಕಾರಿಯಾಗಿ ಕೆಲಸ ಮಾಡಿದ ಶ್ರೀ ಎ. ಸುಭಾಷ್‌ಗೌಡ್ ಅವರು ತಮ್ಮ ಮಾತೃಸಂಸ್ಥೆಯಾದ ಆಂಧ್ರಪ್ರದೇಶ ಸರ್ಕಾರದ ಸಮಾಚಾರ ಇಲಾಖೆಗೆ ಹಿಂದಿರುಗಿದ ನಂತರ ತೆರವಾದ ಅವರ ಸ್ಥಾನಕ್ಕೆ ಆಂಧ್ರಪ್ರದೇಶ







ಸರ್ಕಾರ ಡಾ|| ಪಿ. ರಂಗರಾವ್ ಅವರನ್ನು ಬದಲಿಯಾಗಿ ವರ್ಗಾಯಿಸಿದ್ದು ಶ್ರೀಯುತರು ತಮ್ಮ ಅಧಿಕಾರದ ಹೊಣೆಯನ್ನು ಸ್ವೀಕರಿಸುತ್ತ ಯಾತ್ರಿಕರ ಸೇವೆಯ ಮೂಲಕ ಶ್ರೀನಿವಾಸನ ಸೇವೆಯನ್ನು ಮಾಡುವುದಾಗಿ ನುಡಿದರು.

### ಪಾಕಾಲದಲ್ಲಿ ಆಯುರ್ವೇದ ವೈದ್ಯಶಿಬಿರ

ಚಿತ್ತೂರು ಜಿಲ್ಲೆಯ ಪಾಕಾಲಗ್ರಾಮದಲ್ಲಿ 19-5-2002 ರಂದು ಭಾನುವಾರ ತಿ.ತಿ.ದೇ. ಎಸ್.ವಿ. ಆಯುರ್ವೇದ ವೈದ್ಯಶಾಲೆಯ ವತಿಯಿಂದ ಆಯುರ್ವೇದ ವೈದ್ಯ ಶಿಬಿರವನ್ನು ನಿರ್ವಹಿಸಲಾಯಿತು.

ಶಿಬಿರದಲ್ಲಿ ಗ್ರಾಮಸ್ಥರಿಗೆ ದೈನದಿಂದನ ಜೀವನದಲ್ಲಿ ಸುಲಭವಾಗಿ ದೊರೆಯುವ ಮನೆಮದ್ದಿನ - ಗೃಹವೈದ್ಯದ ವಿಧಾನವನ್ನು ಬೋಧಿಸಲಾಯಿತು. ಜೊತೆಗೆ ಹಲವು ಹನ್ನೊಂದು ಮಂದಿಯ ದೀರ್ಘಕಾಲಿಕ ರೋಗಗಳಿಗೆ ಔಷಧೋಪಚಾರವನ್ನೂ ಪಥ್ಯವನ್ನೂ ಸೂಚಿಸಲಾಯಿತು.

ಅಸ್ತಮಾ, ಮಧುಮೇಹ ಮೊದಲಾದವು ಗಳಿಗೆ ಕ್ರಮ ತಪ್ಪದ ರೀತಿಯ ಪಥ್ಯೋಪಚಾರಗಳನ್ನೂ, ಪರಿಸೂಚನೆಗಳನ್ನೂ ನೀಡಲಾಯಿತು. ಎಸ್.ವಿ. ಆಯುರ್ವೇದ ವೈದ್ಯಶಾಲೆಯ ವೈದ್ಯರು ಭಾಗವಹಿಸಿದ್ದ ಈ ಶಿಬಿರದಲ್ಲಿ ಒಟ್ಟು 300 ಮಂದಿಗೆ ಚಿಕಿತ್ಸೆ ನೀಡಲಾಯಿತು.

### ತಿರುಮಲೆಯಲ್ಲಿ ಉಪರಾಷ್ಟ್ರಪತಿ

ಭಾರತದ ಉಪರಾಷ್ಟ್ರಪತಿ ಶ್ರೀ ಕೃಷ್ಣಕಾಂತ್ ಅವರು ಕುಟುಂಬಸಮೇತರಾಗಿ ಮೇ 19 ರಂದು ತಿರುಮಲೆಗೆ ಆಗಮಿಸಿ ಸ್ವಾಮಿಯನ್ನು ಸಂದರ್ಶಿಸಿ ಆರಾಧಿಸಿದರು.

ಭಾನುವಾರ ಮಧ್ಯಾಹ್ನ ತಿರುಮಲೆಯನ್ನು ಸೇರಿದ ಕೃಷ್ಣಕಾಂತ್ ಅವರನ್ನು ಪ್ರಭಾರಿ ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಮತ್ತಿತರರು ಸ್ವಾಗತಿಸಿದರು. ಸೋಮವಾರ ಬೆಳಗ್ಗೆ ದೇವರ ದರ್ಶನಮಾಡಿದ ಉಪರಾಷ್ಟ್ರಪತಿಗಳು ಕೂಡಲೆ ಹಿಂದಿರುಗಿದರು.



Edited and Published on behalf T. T. Devasthanams by Dr. N. S. Ramamuthy and Printed at T. T. D. Press
by I. Parvateeswara Rao, B.A., L.P.T., Manager, T.T.D. Press, Tirupati - 517 507.

# ತಿರುಮಲೆಯಲ್ಲಿ

## ಮಾಡಬೇಕಾದವು ಹಾಗೂ ಮಾಡಬಾರದವುಗಳು

### ಮಾಡಬೇಕಾದವು :

★ ತಿರುಮಲೆಗೆ ಬರುವ ಮುನ್ನ ನಿಮ್ಮ ಇಷ್ಟ ಅಥವಾ ಕುಲದೈವವನ್ನು ಪೂಜಿಸಿರಿ.

★ ನಿಮ್ಮ ಪ್ರಯಾಣದ ಟಿಕೆಟ್‌ಗಳನ್ನು, ತಿರುಮಲೆಯಲ್ಲಿ ನಿಮ್ಮ ವಸತಿಯನ್ನು ಮೊದಲೇ ಕಾಯ್ದಿರಿಸಿ.

★ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಮೊದಲು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ, ಅಲ್ಲಿಯೇ ಇರುವ ಶ್ರೀ ವರಾಹಸ್ವಾಮಿಯನ್ನು ದರ್ಶಿಸಿರಿ.

★ ಆಲಯವನ್ನು ಪ್ರವೇಶಿಸುವ ಮೊದಲು ಸ್ನಾನಮಾಡಿ, ಶುಭ್ರವಾದ ಉಡುಪು ಧರಿಸಿರಿ. ಆಲಯದ ಒಳಗಡೆ ಸ್ವಾಮಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸಿ.

★ ಆಲಯದ ಒಳಗಡೆ ಗಂಭೀರ ಮೌನವನ್ನು ಪಾಲಿಸಿರಿ ಮತ್ತು ಮನಸ್ಸಿನಲ್ಲಿ **"ಓಂ ನಮೋ ವೇಂಕಟೇಶಾಯ"** ಎಂದು ಜಪಿಸಿರಿ.

★ ತಿರುಮಲೆಯಲ್ಲಿ ಪಾಪನಾಶಿನಿಯಲ್ಲೂ, ಆಕಾಶಗಂಗೆಯಲ್ಲೂ ಸ್ನಾನಮಾಡಿರಿ.

★ ತಿರುಮಲೆಗೆ ಬಂದಾಗ ಪ್ರಾಚೀನಪರಂಪರೆಯನ್ನೂ ಆಚಾರವನ್ನೂ ಗೌರವಿಸಿ.

★ ಸಹಯಾತ್ರಿಕರಲ್ಲಿನ ಧಾರ್ಮಿಕ ಭಾವನೆಯನ್ನು ಗೌರವಿಸಿ, ಪ್ರೋತ್ಸಾಹಿಸಿ.

★ ತಮ್ಮ ಕಾಣಿಕೆಗಳನ್ನು ಹುಂಡಿಯಲ್ಲಿ ಮಾತ್ರವೇ ಸಮರ್ಪಿಸಿ.

★ ತಿರುಮಲೆಯಲ್ಲಿ ನಿಮ್ಮ ಸೇವೆ ಹಾಗೂ ಆಲಯದ ಬಗ್ಗೆ ವಿವರಗಳಿಗಾಗಿ ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ಕೇಳಿ ವಿವರಗಳನ್ನು ಪಡೆಯಿರಿ.

### ಮಾಡಬಾರದವು :

★ ತಮ್ಮೊಂದಿಗೆ ಹೆಚ್ಚಿನ ಹಣ, ಆಭರಣಗಳನ್ನು ತರಬೇಡಿ.

★ ಮಾಂಸಾಹಾರವನ್ನು ಬಳಸಬೇಡಿರಿ. ಮಾದಕ ವಸ್ತು ಪೇಯಗಳನ್ನು ಬಳಸಬೇಡಿರಿ. ಧೂಮಪಾನ ಮಾಡಬೇಡಿರಿ.

★ ವಸತಿಗಾಗಿ, ಶೀಘ್ರದರ್ಶನಕ್ಕಾಗಿ ದಳ್ಳಾಳಿಗಳನ್ನು ಆಶ್ರಯಿಸಬೇಡಿರಿ.

★ ಆಲಯದ ಒಳಗೆ, ಹೊರಗೆ ಪಾದರಕ್ಷೆಗಳನ್ನು ಧರಿಸಿ ಓಡಾಡಬೇಡಿರಿ.

★ ದೇವರನ್ನು ಸೇವಿಸುವುದರ ಹೊರತು ಬೇರೆ ಯಾವ ಕಾರಣಕ್ಕೂ ತಿರುಮಲೆಗೆ ಬಾರದಿರಿ. ಸಂಪ್ರದಾಯದಂತೆ ಆಲಯ ಪ್ರವೇಶ ನಿಷೇಧವಿದ್ದಲ್ಲಿ ಆಲಯ ಪ್ರವೇಶ ಮಾಡದಿರಿ.

★ ದೇವರ ದರ್ಶನಕ್ಕಾಗಿ ನೂಕುನುಗ್ಗಲು ಮಾಡದೆ ಸರತಿಯ ಸಾಲಿನಲ್ಲಿ ಸೇರಿರಿ.

★ ದೇವಾಲಯದಲ್ಲಿ ಉಗುಳುವುದೇ ಮುಂತಾದವುಗಳನ್ನು ಮಾಡದಿರಿ.

★ ಭಿಕ್ಷೆಯನ್ನು ಪ್ರೋತ್ಸಾಹಿಸದಿರಿ. ಹುಸಿ ಪ್ರಸಾದಗಳನ್ನು ಕೊಳ್ಳಬೇಡಿರಿ.

★ ತಿರುಮಲೆಯಲ್ಲಿ ಎಲ್ಲ ಹೂವುಗಳೂ ದೇವರಿಗೇ. ತಾವು ಹೂವು ಮುಡಿಯದಿರಿ.